# ಪ್ರಾಚೀನ ಕನ್ನಡ ಕಾವ್ಯದ ನಾಂದಿ ಪದ್ಯಗಳು

## (ಕವಿರಾಜ ಮಾರ್ಗದಿಂದ ಮುದ್ದಣನವರೆಗೆ)

(ಕನ್ನಡ ವಿಶ್ವವಿದ್ಯಾಲಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ
ಪಿಎಚ್.ಡಿ.ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
ಸಾವಿತ್ರಿಬಾಯಿ ಪವಾರ

ಮಾರ್ಗದರ್ಶಕರು
ಡಾ.ಮಾಧವ ಪೆರಾಜೆ
ಸಹ ಪ್ರಾಧ್ಯಾಪಕರು





ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೩

# ಪ್ರಾಚೀನ ಕನ್ನಡ ಕಾವ್ಯದ ನಾಂದಿ ಪದ್ಯಗಳು

## (ಕವಿರಾಜ ಮಾರ್ಗದಿಂದ ಮುದ್ದಣನವರೆಗೆ)

(ಕನ್ನಡ ವಿಶ್ವವಿದ್ಯಾಲಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ
ಪಿಎಚ್.ಡಿ.ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
ಸಾವಿತ್ರಿಬಾಯಿ ಪವಾರ

ಮಾರ್ಗದರ್ಶಕರು
ಡಾ.ಮಾಧವ ಪೆರಾಜೆ
ಸಹ ಪ್ರಾಧ್ಯಾಪಕರು




ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೩

# ಘೋಷಣಾ ಪತ್ರ

**ಡಾ.ಮಾಧವ ಪೆರಾಜೆ** ಅವರ ಮಾರ್ಗದರ್ಶನದಲ್ಲಿ **ಪ್ರಾಚೀನ ಕನ್ನಡ ಕಾವ್ಯದ ನಾಂದಿ ಪದ್ಯಗಳು(ಕವಿರಾಜಮಾರ್ಗದಿಂದ ಮುದ್ದಣನ ವರೆಗೆ)** ಎಂಬ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿ, ಪಿಎಚ್.ಡಿ.ಪದವಿಗಾಗಿ **ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ** ಸಾದರಪಡಿಸುತ್ತಿದ್ದೇನೆ. ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಗೊಳಿಸಿಲ್ಲ. ಇದು ನನ್ನ ಸ್ವತಂತ್ರವಾದ ಸಂಶೋಧನಾ ಅಧ್ಯಯನವಾಗಿದೆ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ:
ದಿನಾಂಕ:

**ಸಾವಿತ್ರಿಬಾಯಿ ಪವಾರ**
ಸಂಶೋಧಕರು
**ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

## .ಮಾರ್ಗದರ್ಶಕರ ಪ್ರಮಾಣ ಪತ್ರ

**ಸಾವಿತ್ರಿಬಾಯಿ ಪವಾರ** ಅವರು ನನ್ನ ಮಾರ್ಗದರ್ಶನದಲ್ಲಿ **ಪ್ರಾಚೀನ ಕನ್ನಡ ಕಾವ್ಯದ ನಾಂದಿ ಪದ್ಯಗಳು(ಕವಿರಾಜಮಾರ್ಗದಿಂದ ಮುದ್ದಣನ ವರೆಗೆ)**ಎಂಬ ಸಂಶೋಧನಾ ಮಹಾಪ್ರಬಂಧ ವನ್ನು ಕನ್ನಡ ವಿಶ್ವವಿದ್ಯಾಲಯದ **ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ** ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ:
ದಿನಾಂಕ:

**ಡಾ. ಮಾಧವ ಪೆರಾಜೆ**
ಮಾರ್ಗದರ್ಶಕರು
**ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

# ಪರಿವಿಡಿ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ೧.೧. ಅಧ್ಯಯನದ ಉದ್ದೇಶ

ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಒಂದು ಸಂಪ್ರದಯಾವೆಂಬಂತೆ ಕಂಡುಬರುವ ನಾಂದಿ ಪದ್ಯಗಳು ಅಪವಾದವೇ ಇಲ್ಲದ ಹಾಗೆ ಬೆಳೆದುಕೊಂದುಕೊಂಡು ಬಂದಿವೆ. ಕನ್ನಡದ ಮೊದಲ ಉಪಲಬ್ದ ಕೃತಿಯಾದ 'ಕವಿರಾಜಮಾರ್ಗ'ದಲ್ಲಿಯೇ ಈ ಪರಂಪರೆ ಪ್ರಾರಂಭವಾಗಿದೆ. ಕವಿರಾಜಮಾರ್ಗದಿಂದ ಪ್ರಾರಂಭವಾದ ನಾಂದಿ ಪದ್ಯಗಳು, ಹೊಸಗನ್ನಡ ಕಾಲಘಟ್ಟದ ಕವಿ ಮುದ್ದಣನವರೆಗೂ ನಿರಂತರವಾಗಿ ಸಾಗಿ ಬಂದಿವೆ.

ಪ್ರಸ್ತುತ ಅಧ್ಯಯನದ ವಿಷಯವಾದ 'ಪ್ರಾಚೀನ ಕನ್ನಡ ಕಾವ್ಯದ ನಾಂದಿ ಪದ್ಯಗಳು' ಎಂಬ ಅಧ್ಯಯನದಲ್ಲಿ ನಾಂದಿ ಪದ್ಯಗಳನ್ನು ಕುರಿತು ಟಿ.ಆರ್.ಮಹದೇವಯ್ಯನವರು ತಮ್ಮ 'ನಾಂದಿ' ಪುಸ್ತಕದ ಪ್ರಸ್ತಾವನೆಯಲ್ಲಿ ಚರ್ಚಿಸಿರುವುದನ್ನು ಹೊರತುಪಡಿಸಿದರೆ, ಈ ಕುರಿತು ಪ್ರತ್ಯೇಕ ಅಧ್ಯಯನಗಳಾಗಿಲ್ಲ. ಪ್ರಾಸಂಗಿಕವಾಗಿ ಕೆಲವರು ನಾಂದಿ ಪದ್ಯಗಳನ್ನು ಕುರಿತು ಪ್ರಸ್ತಾಪಿಸಿರುವುದುಂಟು. 'ಕನ್ನಡ ಕವಿಗಳ ಕಾವ್ಯಕಲ್ಪನೆ'(ಜಿ.ಎಸ್.ಶಿವರುದ್ರಪ್ಪ) 'ಕನ್ನಡ ಕಾವ್ಯಗಳಲ್ಲಿ ಸರಸ್ವತಿಯ ದರ್ಶನ'(ರಂ.ಶ್ರೀ.ಮುಗಳಿ) ಮುಂತಾದವು, ಅಂತಹ ಕೆಲವು ಕೃತಿಗಳು. ಪ್ರಾಚೀನ ಕಾವ್ಯ ಸಂಸ್ಕೃತಿಗೆ ಬಹುಮುಖ್ಯ ದಾಖಲೆಗಳಾದ ನಾಂದಿ ಪದ್ಯಗಳನ್ನು ಕುರಿತು ಬಹು ಮುಖ್ಯವಾದ ಹಾಗೂ ಪ್ರತ್ಯೇಕವಾದ ಅಧ್ಯಯನವೊಂದರ ಅಗತ್ಯತೆ ಇದೆ.

ಕನ್ನಡ ಸಾಹಿತ್ಯದಲ್ಲಿ ಒಂದು ಸಂಪ್ರದಾಯವೆಂಬಂತೆ ಬೆಳೆದಿರುವ 'ನಾಂದಿ ಪದ್ಯಗಳು' ಕನ್ನಡ ಸಾಹಿತ್ಯಕ್ಕೆ ಪ್ರೇರಕ ಮತ್ತು ಪೋಷಕವಾದ ಸಂಸ್ಕೃತ ಕಾವ್ಯಗಳಲ್ಲಿ ಒಂದು ಪರಂಪರೆಯಾಗಿ

ಬೆಳೆದು ಬಂದಿಲ್ಲ. ಹಾಗಿರುವಾಗಲೂ ಕನ್ನಡ ಕವಿಗಳು ನಾಂದಿ ಪದ್ಯಗಳಲ್ಲಿ ತೋರಿಸುವ ವಿಶಿಷ್ಟತೆಯನ್ನುಳಿದು ಪ್ರಾಚೀನ ಕನ್ನಡ ಕಾವ್ಯಗಳನ್ನು ಚರ್ಚಿಸಲಾಗುವುದಿಲ್ಲ.

ಹಾಗೆ ನೋಡಿದರೆ ನಾಂದಿ ಪದ್ಯಗಳಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳು ಕಾವ್ಯದ ಕೊನೆಯವರೆಗೆ ಮುಂದುವರಿಯುತ್ತವೆ ಎಂದೇನಿಲ್ಲ. ನಿದರ್ಶನಕ್ಕೆ ಧರ್ಮಾಮೃತದ ಕವಿ ನಯಸೇನ ಹೇಳಿರುವ

'ಸಕ್ಕದಮಂ ಪೇೞ್ವೊಡೆ ನೆಱೆ
ಸಕ್ಕದಮಂ ಪೇೞ್ಗೆ ಸುದ್ದಗನ್ನಡದೊಳ್ತಂ
ದಿಕ್ಕುವುದೇ ಸಕ್ಕದಮಂ
ತಕ್ಕುದೇ ಬೆರಸಲ್ಕೆ ಘೃತಮಮಂ ತೈಲಮುಮಂ

ಸಂಸ್ಕೃತದಲ್ಲಿ ಬರೆಯುವ ಹಂಬಲವಿದ್ದವರು ಸಂಸ್ಕೃತದಲ್ಲೆ ಬರೆಯಿರಿ, ಶುದ್ಧಗನ್ನಡದಲ್ಲಿ ಸಂಸ್ಕೃತವನ್ನು ಬೆರಸಿದರೆ, ತುಪ್ಪ ಮತ್ತು ಎಣ್ಣೆಯನ್ನು ಬೆರೆಸಿದ ಹಾಗೆ ಸರಿಯಾಗಲಾರದು. ಎನ್ನುವ ಆತನ ನಿಲುವು ಕಾವ್ಯದುದ್ದಕ್ಕೂ ಪ್ರತಿಫಲಿತವಾಗಿಲ್ಲ. ಈ ಅರ್ಥದಲ್ಲಿ ನಾಂದಿ ಪದ್ಯಗಳು ಕಾವ್ಯದ ಆಶಯಕ್ಕೆ ಪೂರಕವಾದ ಅಂಶಗಳನ್ನು ಹೇಳುತ್ತವೆ ಎಂದು ಭಾವಿಸ ಬೇಕಿಲ್ಲ. ಅವು ಮಂಗಲ ಕಾರ್ಯವೊಂದನ್ನು ನೆರವೇರಿಸಬೇಕಾದಾಗ ಕೈಕೊಳ್ಳಬೇಕಾದ ಕೈಂಕರ್ಯಗಳಾಗಿರುತ್ತವೆ. ಈ ಕಾರಣದಿಂದಲೇ ನಾಂದಿಪದ್ಯಗಳನ್ನು ಆ ಕಾರ್ಯಕ್ಕೆ ಹೊರತುಪಡಿಸಿ ಚರ್ಚಿಸಬೇಕಾದ ಅಗತ್ಯವಿದೆ. ಪ್ರಸ್ತುತ ಅಧ್ಯಯನದಲ್ಲಿ ನಾಂದಿ ಪದ್ಯಗಳನ್ನು ಸಂದರ್ಭೇತರವಾಗಿ ಅಧ್ಯಯನ ಮಾಡುವ ಒಂದು ಪ್ರಯತ್ನವಾಗಿದೆ.

ನಾಂದಿ ಪದ್ಯಗಳಿಗೆ ಸಂಬಂಧಿಸಿದಂತೆ ಟಿ.ಆರ್.ಮಹದೇವಯ್ಯನವರು ಸಂಗ್ರಹಿಸಿದ 'ನಾಂದಿ' ಎಂಬ ಸಂಕಲನವೇ ಮೊಟ್ಟ ಮೊದಲನೆಯದು. ಈ ಸಂಕಲಿತ ಕೃತಿಯಲ್ಲಿ ಅವರು 'ಕವಿರಾಜಮಾರ್ಗ'ದಿಂದ ಪ್ರಾರಂಭಿಸಿ ಇಲ್ಲಿಯವರೆಗೆ(೧೯೩೦) ರಚನೆಯಾದ ಕಾವ್ಯಗಳ ನಾಂದಿ ಪದ್ಯಗಳನ್ನು ಸಂಗ್ರಹಿಸಿದ್ದಾರೆ. ಆದರೆ ಈ ಸಂಕಲನವು ಅಪೂರ್ಣವಾಗಿದ್ದು, ಇದರಲ್ಲಿ ಪ್ರಾಚೀನ ಕಾವ್ಯಗಳ ಕೇವಲ ಆರಂಭದ ಒಂದೊಂದು ಪದ್ಯಗಳನ್ನು ಮಾತ್ರ ಸಂಗ್ರಹಿಸಲಾಗಿದೆ. ಆದರೆ ನಾಂದಿ ಪದ್ಯಗಳು ಸುದೀರ್ಘವಾಗಿದ್ದು, ಹಲವು ಪ್ರಕಾರಗಳನ್ನೊಳಗೊಂಡಿವೆ. ಅವುಗಳಲ್ಲಿ ಜಿನಸ್ತುತಿ, ಇಷ್ಟದೇವತಾಸ್ತುತಿ, ಇತರ ದೇವತಾಸ್ತುತಿ, ಪೂರ್ವ ಕವಿ ಸ್ಮರಣೆ, ಗುರು ಪರಂಪರೆ, ರಾಜಾಶ್ರಯ, ಕುಕವಿನಿಂದೆ, ಸತ್ಕವಿ ಪ್ರಶಂಸೆ, ಕಾವ್ಯ ಮೀಮಾಂಸೆ, ಕಾವ್ಯ

ಫಲಶ್ರುತಿ. ಹೀಗೆ ಇತ್ಯಾದಿ ಅಂಶಗಳನ್ನು ತಿಳಿಸುತ್ತವೆ. ಈ ಅಂಶಗಳನ್ನು ಒಳಗೊಂಡ ಚರ್ಚೆ ನಡೆದಿಲ್ಲವಾದುದರಿಂದ ಈ ಅಧ್ಯಯನದ ಅವಶ್ಯಕತೆ ಇದೆ.

## ೧.೨. ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಪ್ರಬಂಧದಲ್ಲಿ 'ಪ್ರಾಚೀನ ಕನ್ನಡ ಕಾವ್ಯದ ನಾಂದಿ ಪದ್ಯಗಳಿಗೆ ಸಂಬಂಧಿಸಿದಂತೆ 'ಕವಿರಾಜಮಾರ್ಗ'ದಿಂದ ಮುದ್ದಣ ಕವಿಯವರೆಗಿನ ಕಾವ್ಯಗಳ ನಾಂದಿ ಪದ್ಯಗಳನ್ನು ಸಂಗ್ರಹಿಸಿ ಅಧ್ಯಯನ ಮಾಡಲಾಗುವುದು. ಪ್ರಾಚೀನ ಕನ್ನಡ ಕಾವ್ಯಗಳ ಪೀಠಿಕಾ ಭಾಗದಲ್ಲಿ ಬರುವ ವಿಷಯಗಳನ್ನು ಚರ್ಚಿಸಿ ಅಧ್ಯಯನ ಮಾಡುವ ಮೂಲಕ ಕನ್ನಡ ಕಾವ್ಯ ಸಂಸ್ಕೃತಿಗೆ ಸಂಬಂಧಿಸಿದ ಬಹುಮುಖ್ಯ ದಾಖಲೆಗಳಾದ ನಾಂದಿ ಪದ್ಯಗಳನ್ನು ಅಧ್ಯಯನ ಮಾಡುವ ಒಂದು ಪ್ರಯತ್ನ ಮಾತ್ರವೆಂದು ಹೇಳಬಹುದು.

ಪ್ರಾಚೀನ ಕನ್ನಡ ಕಾವ್ಯದ ನಾಂದಿ ಪದ್ಯಗಳಲ್ಲಿ ಕವಿಗಳಿಗೆ ಸಂಬಂಧಿಸಿದ ಚಾರಿತ್ರಿಕ ಅಂಶಗಳು, ಆಯಾ ಕವಿಗಳ ಗುರುಸ್ಮರಣೆ, ಕವಿಗಳು ತಮಗಿಂತ ಪೂರ್ವದ ಕವಿಗಳನ್ನು ಸ್ಮರಣೆ ಮಾಡುವುದು, ಕಾವ್ಯದ ಫಲಶ್ರುತಿ ಇತ್ಯಾದಿ ಅಂಶಗಳನ್ನು ತಿಳಿಸುತ್ತವೆ. ಇವೆಲ್ಲ ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆಯೇ ಆಗಿವೆ. ಹಾಗೂ ಇವು ಬಹು ಮುಖ್ಯವಾದ ದಾಖಲೆಗಳಾಗಿವೆ. ಇಂತಹ ಎಲ್ಲಾ ನಾಂದಿ ಪದ್ಯಗಳನ್ನು ಸಂಗ್ರಹಿಸಿ ಅಧ್ಯಯನ ಮಾಡಲಾಗುವುದು.

ಈ ಅಧ್ಯಯನದ ಮೂಲಕ ಕವಿಗಳು ತಮ್ಮ ಕಾವ್ಯಗಳಲ್ಲಿ ಹೇಳಿರುವ ಹಲವು ಅಂಶಗಳನ್ನು ಚರ್ಚಿಸಲಾಗುವುದು. ಸತ್ಕವಿಗಳಾರು, ಕುಕವಿಗಳಾರು, ಕಾವ್ಯ ಎಂದರೇನು? ಕಾವ್ಯ ಲಕ್ಷಣಗಳಾವುವು, ಕಾವ್ಯದ ಪ್ರಯೋಜನಗಳಾವುವು? ಕಾವ್ಯದ ಮಹತ್ವವೇನು? ಕಾವ್ಯದಲ್ಲಿ ದೊರೆಯುವ ಚಾರಿತ್ರಿಕ ವಿಚಾರಗಳಾವುವು. ಪ್ರಾಚೀನ ಕವಿಗಳ ಕಾವ್ಯಗಳಲ್ಲಿ ಮೂಡಿಬಂದಿರುವ ಕಾವ್ಯ ಮೀಮಾಂಸೆ ಹೇಗಿದೆ. ರಾಜಾಶ್ರಯ ಇಷ್ಟದೇವತೆ, ಇತರ ದೇವತೆ, ಸಂಸ್ಕೃತ ಮತ್ತು ಕನ್ನಡ ಕವಿಗಳ ನಾಂದಿ ಪದ್ಯಗಳನ್ನು ಕುರಿತು ಚರ್ಚಿಸಲಾಗುವುದು.

ಚಾರಿತ್ರಿಕ ಅಂಶಗಳಲ್ಲಿ ಕನ್ನಡ ಕವಿಗಳು ಕನ್ನಡ ನಾಡು-ನುಡಿ ಕನ್ನಡ ನಾಡಿನ ಪ್ರಾದೇಶಿಕ ವಿಚಾರ ಕವಿರಾಜಮಾರ್ಗಕಾರ ಹೇಳುವ ದಕ್ಷಿಣೋತ್ತರ ಮಾರ್ಗ, ತಿರುಳ್ಗನ್ನಡದ ಸೀಮೆ ಅಥವಾ ಅಚ್ಚಗನ್ನಡ ಪ್ರದೇಶಗಳಾದ ಕಿಸುವೊಳಲು, ಕೋಪಣ ನಗರ, ಪುಲಿಗೆರೆ, ಒಕ್ಕುಂದ ಇತ್ಯಾದಿ ಪ್ರದೇಶಗಳ ನಡುವಿನ ನಾಡು ಹಾಗೂ ಕನ್ನಡಿಗರ ಸ್ವಭಾವ ಚಿತ್ರಣವನ್ನು ಕುರಿತು ಚರ್ಚಿಸಲಾಗುವುದು.

ಒಟ್ಟಾರೆ ಕರ್ನಾಟಕ ಸಂಸ್ಕೃತಿ ಮತ್ತು ಚರಿತ್ರೆಗೆ 'ನಾಂದಿ ಪದ್ಯಗಳು' ಬಹು ದೊಡ್ಡ ದಾಖಲೆಗಳಾಗಿವೆ ಎಂಬುದನ್ನು ಕುರಿತು ವಿವರಿಸಲಾಗುವುದು.

## ೧.೩. ಈವರೆಗಿನ ಅಧ್ಯಯನಗಳ ಸಮೀಕ್ಷೆ

ಈ ಅಧ್ಯಾಯದಲ್ಲಿ 'ಪ್ರಾಚೀನ ಕನ್ನಡ ಕಾವ್ಯದ ನಾಂದಿ ಪದ್ಯ'ಗಳನ್ನು ಕುರಿತು ಈವರೆಗೆ ನಡೆದಿರುವ ಅಧ್ಯಯನಗಳ ಸಂಗ್ರಹ ಮತ್ತು ಅವುಗಳ ವಿಮರ್ಶಾತ್ಮಕ ಅಧ್ಯಯನವನ್ನು ಮಾಡಲಾಗಿದೆ.

ನಾಂದಿ ಪದ್ಯಗಳನ್ನು ಕುರಿತು ಹಲವು ಸಂಕಲನ ಗ್ರಂಥಗಳು ಪ್ರಕಟವಾಗಿವೆ. ಅವುಗಳಲ್ಲಿ 'ಕಾವ್ಯಸಾರ' ಮತ್ತು 'ಸೂಕ್ತಿ ಸುಧಾರ್ಣವ' ಎಂಬ ಕೃತಿಗಳು ಪ್ರಸಿದ್ಧವಾಗಿವೆ. ಈ ಸಂಕಲನ ಕೃತಿಗಳಲ್ಲಿ ಹಲವು ಕಾವ್ಯಗಳ ನಾಂದಿ ಪದ್ಯಗಳನ್ನು ಸಂಗ್ರಹಿಸಲಾಗಿದೆ. ಆದರೆ ಸಮಗ್ರವಾಗಿ ನಾಂದಿ ಪದ್ಯಗಳು ಸಿಗುವುದಿಲ್ಲ. ಇಂತಹ ಸಂಕಲನ ಕೃತಿಗಳಿಂದ ಕನ್ನಡ ಕವಿಗಳ ಹಾಗೂ ಗ್ರಂಥಕಾರರ ಮನೋಧರ್ಮವನ್ನು ತಿಳಿಯಬಹುದು.

ಕನ್ನಡದ ಬಹುಮುಖ್ಯವಾದ ಹಾಗೂ ಮೊದಲು ಲಾಕ್ಷಣಿಕ ಕೃತಿಯಾದ 'ಕವಿರಾಜ ಮಾರ್ಗ'ದಿಂದಲೇ ಪ್ರಾರಂಭವಾದ ಈ ನಾಂದಿ ಪದ್ಯಗಳು ಕಾವ್ಯಗಳಲ್ಲಿ ಅವ್ಯಾಹತವಾಗಿ ಸಾಗಿ ಬಂದಿವೆ. ಕನ್ನಡ ಕಾವ್ಯ ಪರಂಪರೆಯಲ್ಲಿ ಒಂದು ಸಂಪ್ರದಾಯವಾಗಿ ಮುಂದುವರಿದಿರುವ ಈ ನಾಂದಿ ಪದ್ಯಗಳು ಸಂಸ್ಕೃತ ಭಾಷೆಯಲ್ಲಿ ಒಂದು ಸಂಪ್ರದಾಯವೆಂಬಂತೆ ಕಂಡು ಬರುವುದಿಲ್ಲ. ಕನ್ನಡ ಕವಿಗಳು ಇವುಗಳನ್ನು ವಿಶಿಷ್ಟ ಕಾವ್ಯಭಾಗವನ್ನಾಗಿಸಿ ಮುಂದುವರಿಸಿಕೊಂಡು ಬಂದಿದ್ದಾರೆ.

ಕನ್ನಡ ಭಾಷೆಯ ಜೈನ, ವೀರಶೈವ ಹಾಗೂ ವೈಷ್ಣವ ಪಂಥದ ಎಲ್ಲ ಕಾವ್ಯ ಪ್ರಕಾರಗಳಲ್ಲೂ ಈ ನಾಂದಿ ಪದ್ಯಗಳು ಉಲ್ಲೇಖಗೊಂಡಿವೆ. ಕನ್ನಡ ಕಾವ್ಯಗಳಷ್ಟೇ ಅಲ್ಲ ಶರಣರ ವಚನಗಳು, ದಾಸರ ಕೀರ್ತನೆಗಳು ಬಹುಮಟ್ಟಿಗೆ ಪ್ರಾರ್ಥನಾ ರೂಪದ ಪದ್ಯಗಳೇ ಆಗಿವೆ. ಜೈನರು ಜಿನಸ್ತುತಿಯನ್ನು, ವೀರಶೈವರು ಶಿವಸ್ತುತಿಯನ್ನು, ವೈಷ್ಣವರು ವಿಷ್ಣು ಸ್ತುತಿಯನ್ನು ಮಾಡುವುದರ ಮೂಲಕ ತಮ್ಮ ದೇವರು ಹಾಗೂ ಧರ್ಮದ ಪಾರಮ್ಯವನ್ನು ಮೆರೆದಿದ್ದಾರೆ. ಹಾಗೂ ಇನ್ನುಳಿದ ದೇವತೆಗಳನ್ನು ಸ್ತುತಿಸುವುದರ ಮೂಲಕ ಕಾವ್ಯಾರಂಭವನ್ನು ಮಾಡುತ್ತಾರೆ. ಕಾವ್ಯದ ಆರಂಭಿಕ ಪದ್ಯಗಳನ್ನು ಪ್ರಾರ್ಥನೆಗಳೆಂದೇ ಕರೆದಿದ್ದಾರೆ.

ನಾಂದಿ ಪದ್ಯಗಳಿಗೆ ಸಂಬಂಧಿಸಿದಂತೆ ಟಿ.ಆರ್.ಮಹದೇವಯ್ಯನವರು ಸಂಗ್ರಹಿಸಿ ಬರೆದ 'ನಾಂದಿ' ಎಂಬ ಕೃತಿಯೇ ಮೊಟ್ಟ ಮೊದಲ ಸಂಕಲನ ಕೃತಿಯಾಗಿದೆ. ಈ ಕೃತಿಯಲ್ಲಿ ಅವರು ಕವಿರಾಜಮಾರ್ಗದಿಂದ ಸುಮಾರು ೧೯ನೇ ಶತಮಾನದವರೆಗಿನ ಹಲವು ಕೃತಿಗಳ

ನಾಂದಿ ಪದ್ಯಗಳನ್ನು ಸಂಗ್ರಹಿಸಿದ್ದಾರೆ. ಈ 'ನಾಂದಿ' ಪುಸ್ತಕದಲ್ಲಿ ಪ್ರಕಟಿತ ಹಾಗೂ ಅಪ್ರಕಟಿತ ಕಾವ್ಯದ ನಾಂದಿ ಪದ್ಯಗಳನ್ನು ಮಾತ್ರ ಆಯ್ದುಕೊಂಡು ಕಾಲಾನುಕ್ರಮದಲ್ಲಿ ಅಳವಡಿಸಿದ್ದಾರೆ. 'ನಾಂದಿಗೆ ನಾಂದಿ' ಎಂಬ ಶೀರ್ಷಿಕೆಯಡಿಯಲ್ಲಿ 'ನಾಂದಿ' ಪದ್ಯಗಳಿಗೆ ಸಂಬಂಧಿಸಿದ ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ. ಈ ಕೃತಿಯನ್ನು ಹೊರತುಪಡಿಸಿದರೆ, ನಮಗೆ ದೊರಕುವ ಮಾಹಿತಿ ಬಹು ವಿರಳವಾದುದು.

ನಾಂದಿ ಪದ್ಯಗಳಿಗೆ ಸಂಬಂಧಿಸಿದಂತೆ ಜಿ.ಎಸ್.ಶಿವರುದ್ರಪ್ಪನವರು ತಮ್ಮ 'ಕನ್ನಡ ಕವಿಗಳ ಕಾವ್ಯತತ್ವ ಚಿಂತನೆ' ಎಂಬ ಗ್ರಂಥದ 'ಕನ್ನಡ ಕವಿಗಳ ಕಾವ್ಯಕಲ್ಪನೆ' ಎಂಬ ಲೇಖನದಲ್ಲಿ ಕನ್ನಡ ಕವಿಗಳು ಮತ್ತು ತಮ್ಮ ಕಾವ್ಯ ಪರಂಪರೆಯಲ್ಲಿ ಸಂಸ್ಕೃತ ಕಾವ್ಯ ಪರಂಪರೆಗಿಂತ ಭಿನ್ನವಾಗಿ ಕನ್ನಡ ಕಾವ್ಯ ಲಕ್ಷಣ, ಭಾಷಾ ಪರಂಪರೆ ಸಂಸ್ಕೃತ ಭಾಷೆಗಿಂತ ವಿಭಿನ್ನವಾದ ಕನ್ನಡ ಕಾವ್ಯಪದ್ಧತಿಯನ್ನು ಕುರಿತು ಚರ್ಚಿಸಿದ್ದಾರೆ. ಇದರಿಂದ ಪ್ರಾಚೀನ ಕವಿಗಳಿಗೆ ಸಂಬಂಧಿಸಿದ ಹಲವು ವಿಷಯಗಳು ತಿಳಿಯಲು ಸಾಧ್ಯವಾಗುತ್ತದೆ.

'ಕವಿರಾಜಮಾರ್ಗ'ದ ನಂತರ ಬಂದ ಪಂಪನ ಕೃತಿಗಳಲ್ಲಿ ಹಾಗೂ ಪಂಪನ ನಂತರದ ಹಲವು ಕವಿಕೃತಿಗಳಲ್ಲಿ ಸರಸ್ವತಿಯ ದರ್ಶನ ಯಾವ ರೀತಿಯಲ್ಲಿ ಬಂದಿದೆ ಎಂಬುದನ್ನು ರಂ.ಶ್ರೀ.ಮುಗಳಿಯವರು ವಿಮರ್ಶಾತ್ಮಕವಾಗಿ ಚರ್ಚಿಸಿದ್ದಾರೆ. ಇವರ 'ಕನ್ನಡ ಸಾಹಿತ್ಯ ವಿಮರ್ಶೆಯ ತಾತ್ವಿಕ ವಿವೇಚನೆ'ಯಲ್ಲಿ ಕನ್ನಡ ಸಾಹಿತ್ಯದಲ್ಲಿ ಸರಸ್ವತಿಯ ದರ್ಶನ ಎಂಬ ಲೇಖನದಲ್ಲಿ, ಮಾರ್ಗಕಾವ್ಯದಲ್ಲಿ ಸರಸ್ವತಿಯ ದರ್ಶನ, ದೇಸಿಕಾವ್ಯದಲ್ಲಿ ಸರಸ್ವತಿಯ ದರ್ಶನ, ಹೊಸಕಾವ್ಯದಲ್ಲಿ ಸರಸ್ವತಿಯ ದರ್ಶನ ಎಂಬ ಮೂರು ಭಾಗಗಳಿವೆ. ಈ ಮೂರು ಭಾಗಗಳಲ್ಲಿ ಕಾವ್ಯದೇವತೆ ಸರಸ್ವತಿಯನ್ನು ಕುರಿತು ಸಂಸ್ಕೃತ ಮತ್ತು ಕನ್ನಡ ಕವಿಗಳು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ನಾಂದಿ ಪದ್ಯಗಳೊಂದಿಗೆ ವ್ಯಕ್ತಪಡಿಸಿದ್ದಾರೆ.

ಇನ್ನು ಆರ್.ನರಸಿಂಹಾಚಾರ್ಯ ಅವರ ಕವಿಚರಿತೆಯಲ್ಲಿ ಪ್ರಾಸಂಗಿಕವಾಗಿ ನಾಂದಿ ಪದ್ಯಗಳ ವಿಷಯವನ್ನು ಪ್ರಸ್ತಾಪಿಸಲಾಗಿದೆ. ಹಾಗೆಯೇ, ರಾಮೇಗೌಡರ ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು ಎಂಬ ಕೃತಿಯಲ್ಲಿ ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ಅಥವಾ ಚಾರಿತ್ರಿಕ ವಿಚಾರಗಳು ಪ್ರಕಟವಾದ ಸಂದರ್ಭಗಳನ್ನು ತಿಳಿಸುತ್ತದೆ.

ಒಟ್ಟಾರೆ ಕನ್ನಡ ಕಾವ್ಯಗಳ ನಾಂದಿ ಪದ್ಯಗಳ ಮಟ್ಟಿಗೆ ಹೇಳುವುದಾದರೆ, ಆಗಿರುವ ಅಧ್ಯಯನಗಳು ಕಡಿಮೆ ಎಂದೇ ಹೇಳಬಹುದು. ಅದರಲ್ಲೂ ಪ್ರಾಚೀನ ಕನ್ನಡ ಕಾವ್ಯದ ನಾಂದಿ ಪದ್ಯಗಳನ್ನು ಕುರಿತಾದ ಅಧ್ಯಯನಗಳು ತೀರಾ ವಿರಳವಾಗಿವೆ ಎಂದೇ ಹೇಳಬಹುದು.

ಅಧ್ಯಾಯ ಎರಡು

## ನಾಂದಿ ಪದ್ಯಗಳ ಸ್ಥೂಲ ವಿವರಣೆ ಗುಣಲಕ್ಷಣಗಳು

ಕನ್ನಡ ಕಾವ್ಯಕ್ಕೆ ವಿಶಿಷ್ಟತೆಯನ್ನು ತಂದು ಕೊಟ್ಟಿರುವ ಈ ನಾಂದಿ ಪದ್ಯಗಳು ವಸ್ತು ಮತ್ತು ವೈವಿಧ್ಯ ಹಾಗೂ ಸಾಮಾನ್ಯವಾದ ಗುಣ-ಲಕ್ಷಣಗಳನ್ನೊಳಗೊಂಡಿವೆ. "ನಾಂದಿ ಎಂದರೆ ಯಾವುದೇ ಶುಭಕಾರ್ಯದ ಆರಂಭದಲ್ಲಿ ನೆರವೇರಿಸುವ ಪ್ರಥಮ ದೇವತಾಪೂಜೆ, ಸ್ತುತಿರೂಪವಾಗಿಯೂ, ರಾಜ, ಪ್ರಜೆ ಮುಂತಾದವರಿಗೆ ಆಶೀರ್ವಾದ ರೂಪವಾಗಿಯೂ ಇರುವ ವಚನವನ್ನು ನಾಟಕದ ಆರಂಭದಲ್ಲಿ ಹಾಡುತ್ತಾರೆ. ನಾಟಕವು ಆರಂಭವಾಗುವ ಮೊದಲು ಮಾಡುವ ಪೂಜೆಗೂ, ಆಗ ಹೇಳುವ ಪ್ರಾರ್ಥನೆಗೂ ನಾಂದಿ ಎಂದೇ ಕರೆದಿದ್ದಾರೆ. ನಾಂದಿ ಶಬ್ದಕ್ಕೆ ಆರಂಭ, ಶುಭಾರಂಭವೆಂಬ ಅರ್ಥವೂ ರೂಢಿಯಲ್ಲಿ ಬಂದಿದೆ. ಪ್ರಾಚೀನ ಕಾವ್ಯದಲ್ಲೂ ಕೂಡ ಕವಿಗಳು ಕಾವ್ಯದ ಮೊದಲಲ್ಲಿ ತಮ್ಮ ಕಾವ್ಯ ನಿರ್ವಿಘ್ನವಾಗಿ ಸಾಗಲಿ ಎಂಬ ಆಶಯದಿಂದ ಸಲ್ಲಿಸಿದ ಪ್ರಾರ್ಥನೆಯೂ ಕೂಡ ನಾಂದಿಯೆ."[೧] ಕೆಲವು ಕವಿಗಳ ಕಾವ್ಯಗಳಲ್ಲಿ ಮಂಗಳಾಚರಣವೆಂದು ಬರೆಯಲಾಗಿದೆ. ನಾಂದಿಪದ್ಯಗಳನ್ನು ಮಂಗಳಾ ಚರಣವೆಂದು ಕರೆಯಲು ಕಾರಣ, ಇವು ಕಾವ್ಯಕ್ಕೆ ಮಂಗಳವನ್ನುಂಟು ಮಾಡುವ ಪದ್ಯಗಳಾಗಿವೆ. ಈ ಮಂಗಳಾಚರಣ ಅಥವಾ ನಾಂದಿ ಪದ್ಯಗಳು ಸುದೀರ್ಘವಾಗಿದ್ದು, ಸತ್ವಶಾಲಿಯಾದ ಕವಿಯು ತನ್ನ ಕಾವ್ಯವೆಂಬ ರಸಲೋಕದಲ್ಲಿ ತೋರುವ ದರ್ಶನದ ಪ್ರತೀಕವಾಗಿ ನಾಂದಿ ಪದ್ಯಗಳಿರುತ್ತವೆ. ಕವಿ ಕಾವ್ಯದ ಅಂತರಂಗದ ದ್ವಾರವನ್ನು ತೆರೆದು ತೋರುವ ಈ ನಾಂದಿಗಳು ಕವಿ ಹೃದಯದ ಕೈಪಿಡಿಯಂತಿವೆ.

ನಾಂದಿ ಎಂಬ ಪದ ಬಹು ಪ್ರಾಚೀನವಾದುದು. "ಒಳ್ಳೆಯ ಆರಂಭ ಅರ್ಧ ಕೆಲಸವಾದಂತೆ ಎಂಬುದು ಅನುಭವದ ನುಡಿ ಕಾವ್ಯದ ಮೊದಲ ಪದ್ಯದಲ್ಲೇ ಮನವನ್ನು

ಸೆರೆ ಹಿಡಿಯುವ ಕವಿ ಸ್ವಾಭಾವಿಕವಾಗಿಯೇ ತನ್ನ ಕಾವ್ಯದ ಅಂತರಂಗದ ಕಡೆಗೆ ಓದುಗನ ಗಮನವನ್ನು ಸೆಳೆದುಕೊಳ್ಳುತ್ತಾನೆ. ಈ ಎಲ್ಲ ಮಾತುಗಳು ಎಲ್ಲ ಕವಿಗಳಿಗೂ ಅನ್ವಯಿಸುವುದಿಲ್ಲ. ಆದರೂ ಕವಿಯ ಅಂತರಂಗದ ಮೊರೆಯನ್ನು ವ್ಯಕ್ತಪಡಿಸುವ ಸಾಧನವಾದ ನಾಂದಿ ಕಾವ್ಯದ ಪ್ರಥಮ ಪೂಜೆ ಕಳಪೆಯಾಗಿರಲಾರದು ಎಂಬ ಮಾತಂತೂ ಸತ್ಯ."[೨] ಜನಸಾಮಾನ್ಯರು ಕೇವಲ ನಾಟಕಾರಂಭದ ಪದ್ಯಗಳನ್ನು ಮಾತ್ರ ನಾಂದಿ ಪದ್ಯಗಳೆಂದು ಭಾವಿಸಿದಂತೆ ಕಂಡುಬರುತ್ತದೆ. ಕಾವ್ಯಗಳಲ್ಲೂ ಕೂಡ ಹತ್ತು ಹಲವು ತೆರನಾದ ನಾಂದಿ ಪದ್ಯಗಳಿರುತ್ತವೆ ಎಂಬ ವಿಚಾರ ಬಹುಶಃ ಅವರ ಗಮನಕ್ಕೆ ಬಂದಿಲ್ಲವೆಂದು ಕಾಣುತ್ತದೆ.

ಪಂಪನ ಕಾಲದಿಂದಲೇ ನಾಂದಿ ಪದ್ಯಗಳು ಬೆಳೆದುಬಂದರೂ ಅದಕ್ಕೂ ಪೂರ್ವದ ಕವಿರಾಜ ಮಾರ್ಗದಲ್ಲಿ ಇಷ್ಟದೇವತೆ, ಇತರ ದೇವತೆ, ಪೂರ್ವ ಕವಿ ಸ್ಮರಣೆ ಕನ್ನಡ ನಾಡು–ನುಡಿ ನೆಲ ಜಲ ಸಂಸ್ಕೃತಿ. ದಕ್ಷಿಣೋತ್ತರ ಮಾರ್ಗವನ್ನು ತಿಳಿಸುವ ನಾಂದಿ ಪದ್ಯಗಳಿವೆ. ಕಾರಣ ಯಾವುದೇ ಕವಿಯು ಸಮಾಜಕ್ಕೆ ಅರ್ಪಿಸುವ ತನ್ನ ಕಾವ್ಯ ಯಾವುದೇ ವಿಘ್ನವಿಲ್ಲದೆ ಸಾಗಲೆಂದು ಪ್ರಾರ್ಥಿಸುವ ಪದ್ಯಗಳೇ ನಾಂದಿ ಪದ್ಯಗಳಾಗಿವೆ.

ಸಂಸ್ಕೃತ ಭಾಷೆ ಹಾಗೂ ಸಾಹಿತ್ಯ ಬಹು ಪುರಾತನವಾದುದು. ಕನ್ನಡ ಸಾಹಿತ್ಯ ಪ್ರಾರಂಭವಾಗುವ ವೇಳೆಗೆ ಸಂಸ್ಕೃತ ಭಾಷಾ ಸಾಹಿತ್ಯದ ಕೃತಿಗಳ ಸಂಖ್ಯೆ ಹೆಚ್ಚಾಗಿತ್ತು. ಆದರೆ ಸಂಸ್ಕೃತ ಕೃತಿಗಳ ರಚನೆ ಮಾತ್ರ ಇಳಿಮುಖವಾಗಿತ್ತು. "ಸಂಸ್ಕೃತವು ತನ್ನ ಶ್ರೇಷ್ಠ ಕೃತಿಗಳ ಸಾಧನೆ, ಪಡೆದುಕೊಂಡ ಸಿದ್ದಿಯೂ ಕಾವ್ಯ ಲಕ್ಷಣವನ್ನು ಕುರಿತು ನಡೆದ ವಿಪುಲವಾದ ಚರ್ಚೆಯೂ ಕನ್ನಡ ಕವಿಗಳಿಗಿದ್ದವು. ಸಂಸ್ಕೃತ ಸಾಹಿತ್ಯದ ವಸ್ತು, ಪರಂಪರೆ ಮತ್ತು ಭಾಷಾ ಪರಂಪರೆಗಳು ನಮ್ಮ ಕವಿಗಳ ಕಾವ್ಯ ನಿರ್ಮಿತಿಗೆ ಅತ್ಯಂತ ದೊಡ್ಡ ಆಕರ್ಷಣೆಯೂ, ಸವಾಲು ಆಗಿ ಪರಿಣಮಿಸಿತ್ತು. ಇಂಥ ಒಂದು ಪರಿಸ್ಥಿತಿಯಲ್ಲಿ ಕನ್ನಡ ಸಾಹಿತ್ಯವು ಸಂಸ್ಕೃತ ಸಾಹಿತ್ಯದ ವಸ್ತು–ಭಾಷೆ ಹಾಗೂ ಧೋರಣೆಗಳಿಗೆ ತನ್ನ ಪ್ರಾದೇಶಿಕ ಸಾಂಸ್ಕೃತಿಕ ಸತ್ವದ ಮೂಲಕ ತೋರಿದ ಸೃಜನಾತ್ಮಕ ಪ್ರತಿಕ್ರಿಯೆಗಳೇ ಕನ್ನಡ ಸಾಹಿತ್ಯವನ್ನು ಸಂಸ್ಕೃತದ ಅನುಸರಣವಾಗಲೀ, ಅನುಕರಣವಾಗಲೀ, ಆಗದಂತೆ ರಕ್ಷಿಸಿ ತನ್ನದೇ ಆದ ವಿಶಿಷ್ಟತೆ ಪ್ರಾಪ್ತವಾಗುವಂತೆ ಮಾಡಿದೆ.[೩] ಕಾವ್ಯವೇ ಸಾಹಿತ್ಯದ ಮುಖ್ಯ ಪ್ರಕಾರವಾಗಿದ್ದು, ಕಾವ್ಯದಿಂದ ಹಲವು ರೀತಿಯ ಪ್ರಯೋಜನಗಳಿವೆಯೆಂದು ಹಲವು ಅಲಂಕಾರಿಕರು ಅಭಿಪ್ರಾಯಪಡುತ್ತಾರೆ. ಒಂದು ಕಾಲಕ್ಕೆ ಕಾವ್ಯವೇ ಸಾಹಿತ್ಯದ ಕೇಂದ್ರ ಮಾತ್ರವಲ್ಲ, ಸಮಸ್ತವೂ

ಆಗಿತ್ತು. ಕಾವ್ಯ ಎಂದರೆ ಕೇವಲ ಗದ್ಯ-ಪದ್ಯ ಮಾತ್ರವಲ್ಲ. ನಾಟಕವೂ ಇದರಲ್ಲಿ ಸೇರಿತ್ತು, ಎಂದು ಪ್ರಾಚೀನ ಕವಿಗಳು ಅಭಿಪ್ರಾಯಪಡುತ್ತಾರೆ.

ಪ್ರಾಚೀನ ಕನ್ನಡ ಕಾವ್ಯಗಳ ಆರಂಭದಲ್ಲಿ ಇಷ್ಟದೇವತಾ ಮತ್ತು ಇತರ ದೇವತಾ ಸ್ತುತಿಗಳು, ಪೂರ್ವ ಕವಿಸ್ಮರಣೆ, ಸಜ್ಜನ ಸತ್ಕವಿ, ಸತ್ಕಾವ್ಯ ಪ್ರಶಂಸೆ, ಕುಕವಿ ನಿಂದೆ, ಸತ್ಕವಿ ಪ್ರಶಂಸೆ, ಕುಕಾವ್ಯ ವಿವರ, ಕಾವ್ಯ ಲಕ್ಷಣ, ಆಶ್ರಯದಾತನ ಪ್ರಶಂಸೆ ಹೀಗೆ ಅನೇಕ ವಿವರಗಳು ಲಭ್ಯವಾಗುತ್ತವೆ. ಹಾಗೂ ಕಾವ್ಯ ಸಂಬಂಧಿಯಾದ ಹೇಳಿಕೆಗಳನ್ನೊಳಗೊಂಡ ಇತರ ವಿವರಗಳು ಸಾಂಪ್ರದಾಯಕವಾಗಿ ಕಂಡುಬರುತ್ತವೆ

### ೧. ಇಷ್ಟದೇವತಾ ಸ್ತುತಿ

ಕನ್ನಡ ಕವಿಗಳು ತಮ್ಮ ಕಾವ್ಯದ ಆದಿಯಲ್ಲಿ ನಾರಾಯಣ, ತೀರ್ಥಂಕರ, ಶಿವ ಇತ್ಯಾದಿ ದೇವತೆಗಳನ್ನು ಕುರಿತು ಪ್ರಾರ್ಥನೆ ಸಲ್ಲಿಸಿದ್ದಾರೆ. ಹಾಗೆ ಸ್ತುತಿಸುವಾಗ ತಮ್ಮ ಮೆಚ್ಚಿನ ದೈವದ ಪಾರಮ್ಯವನ್ನು ಎತ್ತಿ ಹಿಡಿಯಲು ತಮ್ಮ ಕವಿತಾ ಸಾಮರ್ಥ್ಯವನ್ನು ವಿನಿಯೋಗಿಸಿದ್ದಾರೆ. ಹಾಗೂ ತಮ್ಮ ವರ್ಣನೆ ಉಳಿದವರಿಗಿಂತ ವಿಶೇಷವಾಗಿರಬೇಕೆಂಬ ಅದಮ್ಯ ಬಯಕೆ ಹಾಗೂ ಪ್ರಯತ್ನ ಕಂಡುಬರುತ್ತದೆ. "ಅವರು ತಮ್ಮ ಆರಾಧ್ಯ ದೈವದ ಸರ್ವಶಕ್ತಿ ಸಂಪನ್ನತೆಯನ್ನು, ಪ್ರಸನ್ನತೆಯನ್ನು ಕೊಂಡಾಡುವಾಗ ಅವನು ಉಳಿದ ದೈವಗಳಿಗಿಂತ ದೊಡ್ಡವನೆಂದು ಅವರ ಕಲ್ಪನಾಶಕ್ತಿ ಪಾಂಡಿತ್ಯ ಹಾಗೂ ಪ್ರತಿಭಾ ಸಂಪನ್ನತೆಗಳು ಪ್ರಕಟವಾಗಿವೆ."[೪]

### ೨. ಆಶ್ರಯದಾತನ ಸ್ತುತಿ

ಕನ್ನಡದ ಮೊದಲ ಲಕ್ಷಣ ಗ್ರಂಥವಾದ ಕವಿರಾಜಮಾರ್ಗದಲ್ಲಿಯೇ ತನ್ನ ಇಷ್ಟದೇವತೆಯಾದ ಅಮೋಘವರ್ಷ ನೃಪತುಂಗನನ್ನು ನಾರಾಯಣನಿಗೆ ಹೋಲಿಸಿ ಮೊದಲೆರಡು ಪದ್ಯಗಳನ್ನು ರಚಿಸಿರುವನು. ಮೊದಲ ಪದ್ಯದಲ್ಲಿ ಪ್ರಭು ಪ್ರಶಂಸೆಯೇ ಮುಖ್ಯವಾಗಿದೆ.

ಶ್ರೀತಳ್ತುರದೊಳ್ ಕೌಸ್ತುಭ
ಜಾತದ್ಯುತಿ ಬಳಸಿ ಕಾಂಡಪಟದಂತಿರೆ
ಸಂಪ್ರೀತಿಯಿಂ ಆವನನ್ ಅಗಲಳ್
ನೀತಿ ನಿರಂತರ ಉದಾರನಂ ಆ ನೃಪತುಂಗ

**ಕವಿರಾಜಮಾರ್ಗ(೧.೧)**

ಕೌಸ್ತುಭ ರತ್ನದಿಂದ ಪಸರಿಸಿರುವ ಕಾಂತಿಯ ಬೆಳಕು ರಂಗಸ್ಥಳದ ತೆರೆಯಂತೆ ಹರಡಿರಲು, ಯಾರ ವೃಕ್ಷಸ್ಥಲವನ್ನು ಲಕ್ಷ್ಮೀದೇವಿಯು ಅನುರಾಗದಿಂದ ಅಗಲಿರಲಾರಳೋ ಆ ನೀತಿ ನಿರಂತರ, ಉದಾರನಾದ ನೃಪತುಂಗ ದೇವನು ಶ್ರೀ ಮನ್ನಾರಾಯಣನಂತೆ ಶೋಭಿಸುತ್ತಿದ್ದನು. ಇದು ಮುಖ್ಯವಾಗಿ ಪ್ರಭುಪ್ರಶಂಸೆಯ ಪದ್ಯವೇ ಆಗಿದೆ. ರಾಜನೇ ಇಲ್ಲಿ ಪ್ರತ್ಯಕ್ಷ ದೇವತೆಯಾಗಿದ್ದರೂ, ನಾರಾಯಣನೊಂದಿಗೆ ತನ್ನ ಇಷ್ಟದೈವವಾದ ನೃಪತುಂಗನನ್ನು ಸಮೀಕರಣಗೊಳಿಸಿ ಪ್ರಶಂಸಿಸಿರುವುದು ವಿಶಿಷ್ಟವಾಗಿದೆ. ಹಾಗೂ ತನ್ನ ದೊರೆಯಾದ ನೃಪತುಂಗನು ಅತ್ಯಂತ ಉದಾರ ಗುಣದವನೆಂದು, ಕವಿರಾಜಮಾರ್ಗಕಾರನು ಹೇಳಬೇಕಾಗಿದೆ. ಅದಕ್ಕಾಗಿಯೇ ಪ್ರಾರಂಭದ ಪದ್ಯದಲ್ಲಿ ನೃಪತುಂಗ ಗುಣ, ಸ್ವಭಾವವನ್ನು ಚಿತ್ರಿಸಿದ್ದಾನೆ.

ಕವಿರಾಜಮಾರ್ಗದ ಎರಡನೇ ಪದ್ಯದಲ್ಲೂ ಶ್ರೀವಿಜಯನು ತನ್ನ ಇಷ್ಟದೈವ ಸ್ತುತಿ ಮಾಡಿರುವನು. ಈ ಪದ್ಯದಿಂದ ಅವನಿಗಿರುವ ಬಿರುದಾವಳಿಗಳು ಅವನ ಶೌರ್ಯ, ಧೈರ್ಯಗಳ ವಿಷಯ ಅರ್ಥವಾಗುತ್ತದೆ.

‘ಕೃತ ಕೃತ್ಯಮಲ್ಲ ಅಪ್ರತಿಹತ
ವಿಕ್ರಮಂ ಒಸೆದು ವೀರನಾರಾಯಣನಪ್ಪ
ಅತಿಶಯ ದವಳಂ ನಮಗೀಗ ಅತರ್ಕಿತ
ಉಪಸ್ಥಿತ ಪ್ರತಾಪೋದಯಂ’

**ಕವಿರಾಜಮಾರ್ಗ(೧-೨)**

ಕೃತ ಕೃತ್ಯಮಲ್ಲ, ಅಪ್ರತಿಹತ ವಿಕ್ರಮ, ಅತಿಶಯ ಧವಳ ಇತ್ಯಾದಿ ಬಿರುದಾವಳಿಗಳಿಂದ ಭೂಷಿತನಾದ ಶ್ರೀ ವೀರನಾರಾಯಣನು ನಮಗೆ ಸಕಲ ಸಾಹಸದ ಏಳ್ಗೆ ತಾನಾಗಿಯೇ ಒಲಿದು ಬರುವಂತೆ ಮಾಡಲಿ ಎಂದಿರುವನು. ಈ ಪದ್ಯದಲ್ಲೂ ಪ್ರಭುಪ್ರಶಂಸೆ ಮುಖ್ಯ ವಾಗಿದ್ದರೂ ನೃಪತುಂಗನ ಬಿರುದಾವಳಿಗಳೆಲ್ಲ ನಾರಾಯಣನಿಗೆ ಅಭೇದ ಕಲ್ಪಿಸಿ ದೇವತಾ ಸ್ತೋತ್ರವನ್ನು ಹಾಗೂ ರಾಜಪ್ರಶಂಸೆಯನ್ನು ಏಕಕಾಲಕ್ಕೆ ಸಾಧಿಸಿರುವನು. ಪ್ರಭುವನ್ನು ಹಾಗೂ ಇಷ್ಟದೇವತೆಯೊಂದಿಗೆ ಹೋಲಿಸಿ ಕಾವ್ಯರಚಿಸುವುದು ಪ್ರಾಚೀನ ಕನ್ನಡ ಕಾವ್ಯದ ವಿಶಿಷ್ಟ ಲಕ್ಷಣವೆಂದು ಕಂಡುಬರುತ್ತದೆ. ಇಲ್ಲಿ ಪ್ರಭುವೇ ಇಷ್ಟದೇವತೆಯಾದಂತೆ ಕಂಡುಬರುತ್ತದೆ.

ಪಂಪನು ತನ್ನ ಆದಿಪುರಾಣದ ಪ್ರಾರಂಭದಲ್ಲಿ ತನ್ನ ವಿದ್ಯಗುರುವಾದ ದೇವೇಂದ್ರ ಮುನಿಯನ್ನು ಸ್ತುತಿಸುವುದರ ಮೂಲಕ ಜಿನಸ್ತುತಿಯನ್ನು ಮಾಡುತ್ತಾನೆ. ಜೈನರ ಆಗಮಿಕ

ಕಾವ್ಯಗಳಲ್ಲಿ ಜಿನಸ್ತುತಿ ಕಂಡುಬಂದರೆ, ಲೌಕಿಕ ಕಾವ್ಯಗಳಲ್ಲಿ ಇಷ್ಟದೇವತಾ, ಪ್ರಭು ಪ್ರಶಂಸೆ ಕಂಡುಬರುತ್ತದೆ. ಇದು ಜೈನ ಕಾವ್ಯದ ನಾಂದಿ ಪದ್ಯಗಳ ಗುಣ ಲಕ್ಷಣವೆಂದು ಕಾಣುತ್ತದೆ. ಜಿನಸ್ತುತಿ ಮತ್ತು ನಾರಾಯಣ ಸ್ತುತಿಗಳ ವೈವಿಧ್ಯತೆ ಪಂಪನಲ್ಲಿ ಕಂಡುಬರುತ್ತದೆ;

ಶ್ರೀದೇವೇಂದ್ರ ಮುನೀಂದ್ರ ವಂದಿತ ಗುಣವ್ರಾತಂ ಜಗತ್ಸ್ವಾಮಿ ಸಂ-
ದಾದಿ ಬ್ರಹ್ಮನಗಾಧಬೋಧನಿಳಯಂ ದುರ್ವಾರಸಂಸಾರವಿ।
ಚ್ಛೇದೋಪಾಯ ನಿಯುಕ್ತಸೂಕ್ತಿ ವೃಷಮಾರ್ಗಾಗ್ರೇಸರಂಪಾಪಹೃ-
ತ್ಪಾದಾಬ್ಜಂ ದಯೆಗೆಯ್ವನಕ್ಕೆ ಮಗೆ ಮುಕ್ತಿಶ್ರೀಸುಖಾ ವ್ಯಾಪ್ತಿಯಂ॥

**ಆದಿಪುರಾಣ(೧.೧)**

ಜಿನಸ್ತುತಿಯ ಮೂಲಕ ಜೈನ ಧರ್ಮದ ಕವಿಗಳು ಪಂಪನ ಕಾವ್ಯಮಾರ್ಗವನ್ನು ಮುಂದಿನ ಕವಿಗಳೂ ಅನುಸರಿಸಿದರು. ಜೈನರ ಧಾರ್ಮಿಕ ಕಾವ್ಯಗಳ ನಾಂದಿ ಪದ್ಯಗಳ ಮೊದಲ ಪದ್ಯದಲ್ಲಿ ಶ್ರೀ ಎಂಬ ಪದವನ್ನು ಬಳಸುವುದು ನಾಂದಿ ಪದ್ಯಗಳ ಮತ್ತೊಂದು ಲಕ್ಷಣವಾಗಿದೆ. "ಕನ್ನಡ ಸಾಹಿತ್ಯಕ್ಕೆ ವಿಶಿಷ್ಟವಾದ ಪೀಠಿಕಾ ಪ್ರಕರಣದ ನಾಂಧಿ ಪದ್ಯಗಳು ಹಾಗೂ ಅದರ ಲಕ್ಷಣಗಳು ತಮಿಳು ಮತ್ತು ತೆಲಗು ಕಾವ್ಯಗಳ ಮೇಲೂ ತನ್ನ ಪ್ರಭಾವವನ್ನು ಬೀರಿವೆ ಎನ್ನುವುದು ಸ್ಪಷ್ಟವಾದ ಸಂಗತಿಯಾಗಿದೆ. ಕರ್ನಾಟಕದಲ್ಲಿ ನೃಪತುಂಗನ ಕಾಲದಲ್ಲಿ ಪೂರ್ವಪುರಾಣದ ಪೀಠಿಕಾ ಪ್ರಕರಣದಲ್ಲಿ ಕಾವ್ಯ ಲಕ್ಷಣ, ಕಾವ್ಯದ ವಸ್ತು, ಕಾವ್ಯದ ರೀತಿ, ಉತ್ತಮ ಕಾವ್ಯದ ಲಕ್ಷಣ, ಕಾವ್ಯ ಪ್ರಯೋಜನ, ಅಕವಿ-ಕುಕವಿ ವಿಚಾರಗಳು ನಿರೂಪಿತವಾಗಿವೆ. ಇದನ್ನು ಪಂಪ ಮಹಾಕವಿಯು ಕನ್ನಡದಲ್ಲಿ ರೂಢಿಗೆ ತಂದನು ಇದು ಮುಂದೆ ಎಲ್ಲ ಧರ್ಮದ ಕವಿಕೃತಿಗಳಲ್ಲಿಯೂ ಅತ್ಯಂತ ಸ್ವಾರಸ್ಯವಾಗಿ ಬೆಳೆದು ಬಂದಿದೆ. ರನ್ನ ತನ್ನ ಆಗಮಿಕ ಕಾವ್ಯವಾದ ಅಜಿತನಾಥ ಪುರಾಣದಲ್ಲಿ ಅಜಿತ ತೀರ್ಥಕರನನ್ನು ಸ್ತುತಿಸುತ್ತಾನೆ.

'ಶ್ರೀಮನ್ನಮ್ರಾಮರೇಂದ್ರಾರುಣ ಮಣಿಮಕುಟ ದ್ಯೋತಿಬಾಲಾರ್ಕ ಲೀಲೋ
ದ್ಧಾಮಂ ಕಾಶ್ಮೀರರಾಗಂ ತನಗೆ ವಿನತನಾಗೇಂದ್ರಹಸ್ತಾರುಣಾಬ್ಜಂ
ಹೈಮಂ ಕರ್ನಾವತಂಸಂ ತನಗೆನೆ ಕರಮೊಪ್ಪಿರ್ದೊಳಾರ್ಹಂತ್ಯ ಲಕ್ಷ್ಮೀ
ಧಾಮಂ ಮಾಟ್ಕೆಮ್ಮ ಹೃತ್ಪದ್ಮಮನಜಿತ ಜಿನೇಂದ್ರ ಕ್ರಮಾಂಗದೋಹಶ್ರೀ'

**ರನ್ನ-ಅಚಿತ ಪುರಾಣ ೧-೧**

ಆದಿಪುರಾಣದಲ್ಲಿ ಮೊದಲ ತೀರ್ಥಂಕರನಾದ ವೃಷಭನಾಥ ಅಥವಾ ಪುರುದೇವನ ಸ್ತುತಿಯಿದ್ದರೆ, ಅಜಿತ ಪುರಾಣದಲ್ಲಿ ಅಜಿತನಾಥನ ಜಿನಸ್ತುತಿ ಇದೆ. ಪಂಪ ದೇವೇಂದ್ರಮುನಿ,

ಸಮಂತ ಭದ್ರ ಮೊದಲಾದ ಪೂರ್ವಾಚಾರ್ಯರನ್ನು ಆದಿಪುರಾಣದ ಮೊದಲಲ್ಲಿ ಸ್ತುತಿಸಿ, ಬಳಿಕ ಮಲಧಾರಿ ಸಿದ್ಧಾಂತ ಮುನಿ, ಜಯನಂದಿ ಮುನಿಗಳ ಜ್ಞಾನವನ್ನು ಬೇಡಿ, ತನ್ನನ್ನು ಕೊಂಡಕುಂದಾನ್ವಯ ನಂದನ ವನದ ಶುಕವೆಂದು ಕರೆದುಕೊಂಡಿದ್ದಾನೆ. ಪಂಪ ತನ್ನ ಭಾರತದಲ್ಲಿ "ಬೆಳಗುವೆನಿಲ್ಲಿ ಲೌಕಿಕಮಂ ಅಲ್ಲಿ ಜಿನಾಗಮಮಂ" ಎಂದು ಹೇಳಿಕೊಂಡಿದ್ದಾನೆ. ವಿಕ್ರಮಾರ್ಜುನ ವಿಜಯದಲ್ಲಿ ಲೌಕಿಕವನ್ನು ಬೆಳಗಿ ಆದಿಪುರಾಣದಲ್ಲಿ ಆಗಮಿಕ ಎನ್ನುವ ಕಾವ್ಯ ಪ್ರಕಾರವನ್ನು ಅನುಸರಿಸಿದ್ದಾನೆ. ಹೀಗೆ ಲೌಕಿಕ ಮತ್ತು ಆಗಮಿಕ ಎನ್ನುವ ಕಾವ್ಯ ಪ್ರಕಾರಗಳನ್ನು ತಂದವರಲ್ಲಿ ಜೈನ ಕವಿಗಳೇ ಮೊದಲಿಗರು. ಇವರು ಆಗಮಿಕ ಕಾವ್ಯಗಳನ್ನು ಪುರಾಣಗಳ ಸಾಲಿಗೆ ಸೇರಿಸುತ್ತಾರೆ. ನಿದರ್ಶನಕ್ಕೆ ಆದಿಪುರಾಣ, ಅಜಿತ ಪುರಾಣ, ಶಾಂತಿಪುರಾಣ, ಚಾವುಂಡರಾಯ ಪುರಾಣ ಮಲ್ಲಿನಾಥ ಪುರಾಣ ಇತ್ಯಾದಿ ಆಗಮಿಕ ಕಾವ್ಯಗಳನ್ನು ಹೆಸರಿಸಬಹುದು.

ಪಂಪಭಾರತದ ಮೊದಲ ಪದ್ಯವು ತನ್ನ ಆಶ್ರಯದಾತನಾದ ಅರಿಕೇಸರಿಯ ಸ್ತುತಿಯೊಂದಿಗೆ ಪ್ರಾರಂಭವಾಗುತ್ತದೆ.

ಶ್ರೀನಯರಾತಿ ಸಾಧನ ಪಯೋನಿಧಿಯೊಳ್ ಪಡೆದುಂ ಧರಿತ್ರಿಯಂ
ಜೀಯನೆ ಬೇಡಿಕೊಳ್ಳದೆ ನರೇಂದ್ರನೊತ್ತಿಕೊಂಡುಮಾ
ತ್ಮೀಯ ಸುಪುಷ್ಪ ವೃಷ್ಟಿಯನೊಡಂಬಡೆ ತಾಳ್ದಿಯುಮಿಂತುದಾತ್ತನಾ
ರಾಯಣನಾದ ದೇವನೇಮಗೀಗರಿಕೇಸರಿ ಸೌಖ್ಯ ಕೋಟಿಯಂ

**ಪಂಪಭಾರತ(೧.೧)**

ಕವಿರಾಜಮಾರ್ಗಕಾರ ನೃಪತುಂಗನನ್ನು ಉದಾರನಾರಾಯಣನೆಂದು ಚಿತ್ರಿಸಿದಂತೇ ಪಂಪನು ತನ್ನ ದೇವನಾದ ಅರಿಕೇಸರಿ 'ಉದಾತ್ತ ನಾರಾಯಣ'ನೆಂದು ಸ್ತುತಿಸುತ್ತಾನೆ. ಹೀಗಾಗಿ ಮಾರ್ಗಕಾರನ ಪ್ರಭಾವ ಪಂಪನ ಮೇಲೆ ಆಗಿರುವುದು ಕಂಡುಬರುತ್ತದೆ. ಪೊನ್ನನು 'ಶಾಂತಿಪುರಾಣ'ದಲ್ಲಿ ಜಿನಸ್ತುತಿಯನ್ನು ಮಾಡುತ್ತಾನೆ. ರನ್ನನು ಅಜಿತನಾಥ ಸ್ತುತಿಯ ನಂತರ ಸಿದ್ದರನ್ನು, ಆಚಾರ್ಯರನ್ನು ಸ್ತುತಿಸುತ್ತಾನೆ. ತನ್ನ ಎರಡನೆಯ ಹಾಗೂ ಪ್ರಮುಖವಾದ ಕೃತಿಯಾದ ಸಾಹಸ ಭೀಮ ವಿಜಯ ಅಥವಾ ಗದಾಯುದ್ಧದಲ್ಲಿ ತನ್ನ ಆಶ್ರಯದಾತನಾದ 'ಇಜಿವಬೆಂಡಂಗ ಸತ್ಯಾಶ್ರಯ'ನನ್ನು ಚಾಳುಕ್ಯ ನಾರಾಯಣನೆಂದು ಕರೆಯುತ್ತಾನೆ. ಇದರಿಂದ ಆರಾಧ್ಯದೈವ ನಾರಾಯಣನಾಗಿದ್ದರೂ, ರಾಜನಾದ ಸತ್ಯಾಶ್ರಯನು ನಾರಾಯಣನಿಗಿಂತ ಮಿಗಿಲೆಂಬ ಸಮೀಕರಣ ಮಾಡಲಾಗಿದೆ.

ಶ್ರೀಯುವತೀಪ್ರಿಯಂ ಬಲಯುತ ಬಲಿದರ್ಪಹರಂ ಜಿತಾರಿದ್ಯೆ
ತೇಯನನಂತ ಭೋಗನಿಲಯಂ ಪ್ರತಿಪಾಲಿತ ಧರ್ಮಚಕ್ರನ
ಬ್ಜಾಯತನೇತ್ರನಾದಿ ಪುರುಷಂ ಪುರುಷೋತ್ತಮನೀಚಾಳುಕ್ಯನಾ
ರಾಯಣ ದೇವನೀಗೆಮಗೆ ಮಂಗಳಕಾರಣಮುತ್ಸವಗಳಂ ॥

ಸಾಹಸಭೀಮ ವಿಜಯ (೧.೧)

ಶ್ರೀದೇವಿಗೆ ಪ್ರಿಯವಾದ, ಬಲಿ ಚಕ್ರವರ್ತಿಯ ದರ್ಪವನ್ನು ಹರಣ ಮಾಡಿದ, ಅನಂತ ಭೋಗಗಳಿಗೆ ಆಶ್ರಯದಾತನಾದ, ಯುದಿಷ್ಠಿರನ ರಾಜ್ಯವನ್ನು ಕಾಯ್ದ, ಕಮಲ ನೇತ್ರನಾದ, ಪುರುಷೋತ್ತಮನಾದ, ಚಾಳುಕ್ಯ ನಾರಾಯಣ ದೇವನು ನಮಗೆ ಮಂಗಳದ ಉತ್ಸವವನ್ನುಂಟು ಮಾಡಲಿ ಎಂಬ ಕೋರಿಕೆಯಿದೆ. ಹಾಗಾಗಿ ಕವಿರಾಜಮಾರ್ಗದಿಂದ ರನ್ನನ ಲೌಕಿಕ ಕೃತಿಯವರೆಗೂ ನಾರಾಯಣನ ಸ್ತುತಿಯನ್ನು ಮಾಡುವುದರ ಮೂಲಕ ಜೈನ ಕವಿಗಳಾದ ಶ್ರೀವಿಜಯ, ಪಂಪ, ರನ್ನ ಮೊದಲಾದವರು ಆರಂಭದ ಪ್ರಭುಪ್ರಶಂಸೆಯ ಪದ್ಯಗಳಲ್ಲಿ ಉದಾರ ನಾರಾಯಣ, ಉದಾತ್ತ ನಾರಾಯಣ, ಚಾಳುಕ್ಯ ನಾರಾಯಣ ಎನ್ನುವ ಸಂಬೋಧನೆ ಮಾಡಿರುವುದು ಕಂಡುಬರುತ್ತದೆ. ಹಾಗೆಯೇ ನಯಸೇನನು ತನ್ನ ಧರ್ಮಾಂಮೃತದಲ್ಲಿ ಜಿನಸ್ತುತಿಯನ್ನು ಮಾಡಿದರೆ, ಮಲ್ಲಿಕಾರ್ಜುನನು ತನ್ನ ಸೂಕ್ತಿ ಸುಧಾರ್ಣವದಲ್ಲಿ ವಿಷ್ಣುವನ್ನು ಸ್ತುತಿಸುತ್ತಾನೆ. ಹರಿಹರ ರಾಘವಾಂಕರು ವಿರೂಪಾಕ್ಷನನ್ನು ಆರಾಧ್ಯದೈವ ಅಥವಾ ಇಷ್ಟದೈವವನ್ನಾಗಿ ಸ್ತುತಿಸಿದರೆ, ದೇಪರಾಜನು ತನ್ನ ಸೊಬಗಿನ ಸೋನೆಯಲ್ಲಿ ಶಿವಸ್ತುತಿಯನ್ನು, ಷಡಕ್ಷರಿಯು ಕೂಡ ಶಿವಸ್ತುತಿಯನ್ನು, ಕನಕದಾಸರು ಕೃಷ್ಣ ಸ್ತುತಿಯನ್ನು, ಲಕ್ಷ್ಮೀಶನು ಲಕ್ಷ್ಮೀನಾರಾಯಣನ ಸ್ತುತಿಯನ್ನು ಮಾಡುವುದರ ಮೂಲಕ, ಇಷ್ಟದೇವತಾ ಸ್ತುತಿಯನ್ನು ಮಾಡಿರುವುದು ಕಂಡುಬರುತ್ತದೆ.

## ೨. ಇತರ ದೇವತಾ ಸ್ತುತಿಗಳು

ಪಂಪಾದಿ ಕವಿಗಳ ಕಾವ್ಯಾರಂಭ ಪದ್ಯಗಳನ್ನು ಗಮನಿಸಿದರೆ ಕಾವ್ಯಾರಂಭದ ಪದ್ಯಗಳಲ್ಲಿ ಇಷ್ಟದೇವತೆಗಳನ್ನು ಸ್ಮರಿಸಿ ಇತರ ದೇವತೆಗಳನ್ನು ಸ್ಮರಿಸುವ ಪದ್ಧತಿ ರೂಢಿಯಾಗಿದೆ. ಇಷ್ಟದೇವತೆಗಳಲ್ಲಿ ನಾರಾಯಣನನ್ನು ಸ್ಮರಿಸಿದ ಪಂಪ, ರನ್ನ, ಮಾರ್ಗಕಾರಾದಿಗಳು ಈಶ್ವರ, ಸೂರ್ಯ, ಮನ್ಮಥ ಇತ್ಯಾದಿ ದೇವತೆಗಳು ಇಷ್ಟ ದೇವರಾಗಿದ್ದಾರೆ ಎಂಬುದನ್ನು ತಿಳಿಸುತ್ತಾರೆ. ಸರಸ್ವತಿ ಮತ್ತು ಚಂಡಿಕೆಯರನ್ನು ಇತರ ದೇವತೆಗಳೆಂದು ಸ್ತುತಿಸುತ್ತಾರೆ. ಕವಿರಾಜಮಾರ್ಗಕಾರನು ಸರಸ್ವತಿಯನ್ನು ಇತರ ದೇವತೆಯಾಗಿ ಸ್ತುತಿಸುತ್ತಾನೆ. ಪಂಪನು

ಚಂಡಿಕೆ ಮತ್ತು ಸರಸ್ವತಿಯನ್ನು, ರನ್ನನು ಸರಸ್ವತಿಯನ್ನು, ನಾಗವರ್ಮನು ದುರ್ಗೆ, ದಿವಾಕರ ಭಾರತಿ ಸ್ತುತಿಯನ್ನು ಛಂದೋಂಬುದಿಯಲ್ಲಿ ಮಾಡಿ, ಕರ್ಣಾಟಕ ಕಾದಂಬರಿಯಲ್ಲಿ ಸರಸ್ವತಿಯನ್ನು, ನಯಸೇನನು ಧರ್ಮಾಂಮೃತದಲ್ಲಿ ಯಕ್ಷ–ಯಕ್ಷಿಯರು ಹಾಗೂ ಸರಸ್ವತಿಯನ್ನು ಸ್ತುತಿಸಿರುವುದು ಕಂಡುಬರುತ್ತದೆ.

ರುದ್ರಭಟ್ಟನು ತನ್ನ 'ಜಗನ್ನಾಥ ವಿಜಯ'ದಲ್ಲಿ ಬ್ರಹ್ಮ, ಶಿವ, ಸೂರ್ಯ, ಗಣಪತಿ ಹಾಗೂ ವಾಣಿ ಸ್ತುತಿಯನ್ನು ಮಾಡುತ್ತಾನೆ. ನೇಮಿಚಂದ್ರನು ಕಾಮ ಮತ್ತು ಸರಸ್ವತಿಯನ್ನು ಸ್ತುತಿಸುತ್ತಾನೆ. ನಾಗಚಂದ್ರನು ಕಾಳಿಯ ಸ್ತುತಿ ಹಾಗೂ ಕುಬೇರ ಯಕ್ಷನ ಸ್ತುತಿಯನ್ನು ಮಾಡುತ್ತಾನೆ. ಮಲ್ಲಿಕಾರ್ಜುನ ಕವಿಯು ತನ್ನ 'ಸೂಕ್ತಿ ಸುಧಾರ್ಣವ'ದಲ್ಲಿ ಶಿವ, ಗಜಾನನ, ಸರಸ್ವತಿಯನ್ನು, ರತ್ನಾಕರನು 'ಭರತೇಶ ವೈಭವ'ದಲ್ಲಿ ಸರಸ್ವತಿಯನ್ನು, ಕುಮಾರವ್ಯಾಸನು 'ಕರ್ಣಾಟ ಭಾರತ ಕಥಾಮಂಜರಿ'ಯಲ್ಲಿ ಶಾರದೆ, ಲಕ್ಷ್ಮಿ, ಪಾರ್ವತಿಯನ್ನು, ಲಕ್ಷ್ಮೀಶನು 'ಜೈಮಿನಿ ಭಾರತ'ದಲ್ಲಿ ಶಿವ, ಗಣೇಶ, ಸರಸ್ವತಿಯನ್ನು, ಕುಮಾರ ವಾಲ್ಮೀಕಿಯು 'ತೊರವೆ ರಾಮಾಯಣ'ದಲ್ಲಿ ಶಿವ, ಬ್ರಹ್ಮ, ವಿಷ್ಣು ಈ ತ್ರಿಮೂರ್ತಿಗಳ ಜೊತೆಗೆ ಗಣೇಶ ಭಾರತೀಯನ್ನು ಸ್ತುತಿಸುತ್ತಾನೆ. ಹರಿಹರನು 'ಗಿರಿಜಾಕಲ್ಯಾಣ'ದಲ್ಲಿ ಪಾರ್ವತಿ, ಗಣೇಶ, ಷಣ್ಮುಖರನ್ನು, ಕನಕದಾಸರ ಕಾವ್ಯಗಳಲ್ಲಿ ಪ್ರಾರಂಭದ ಮೂರು ಪದ್ಯಗಳು ಕೃಷ್ಣನನ್ನು ಸ್ತುತಿಸುವ, ಇಷ್ಟ ದೇವತಾ ಪದ್ಯಗಳಾಗಿದ್ದರೆ, ನಂತರ ಇತರ ದೇವತೆಗಳಾದ ಗಣೇಶ, ಶಾರದೆ, ಪಾರ್ವತಿ, ಬ್ರಹ್ಮ, ಗರುಡದೇವನ ಸ್ತುತಿಗಳ ಜೊತೆಗೆ ಆದಿಶೇಷನ ಸ್ತುತಿಗಳು, ಇಂದ್ರಾದಿ ದೇವತೆಗಳ, ವರುಣ, ವಾಯು ದೇವರ ಸ್ತುತಿಗಳಿವೆ. ಹೀಗೆ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಕವಿಗಳು ಇಷ್ಟದೇವತೆಯೊಂದಿಗೆ ಇತರ ದೇವತೆಗಳನ್ನು ಸ್ತುತಿಸಿರುವ ಒಂದು ದೊಡ್ಡ ಪಟ್ಟಿಯೇ ದೊರೆಯುತ್ತದೆ.

### ೫. ಪೂರ್ವ ಕವಿ ಸ್ಮರಣೆ

ಪೂರ್ವ ಕವಿ ಸ್ಮರಣೆಯಲ್ಲಿ ಸಂಸ್ಕೃತ ಕವಿಗಳನ್ನು ಕನ್ನಡ ಕವಿಗಳು ಸ್ಮರಿಸುವುದು ನಾಂದಿ ಪದ್ಯಗಳ ಒಂದು ವಿಶಿಷ್ಟ ಗುಣ ಲಕ್ಷಣವಾಗಿದೆ.

ನೆಗಟ್ಟುದು ರಾಮಾಯಣಮುಂ
ನೆಗಟ್ಟುದು ಭಾರತಮುಮಾ ಮಹಾಕವಿಗಳಿನಾ
ನೆಗಟ್ಟಿರ್ ವ್ಯಾಸರ್ ವಾಲ್ಮೀ
ಕಿಗಳೆನೆ ನೆಗಟ್ಟುಭಯ ಕವಿಗಳೆಮಗಭಿವಂದ್ಯರ್

**ಸಾಹಸ ಭೀಮವಿಜಯ** (೧.೮)

ರನ್ನ ಕವಿಯು ತನ್ನ ಸಾಹಸಭೀಮ ವಿಜಯದಲ್ಲಿ ಪೂರ್ವಕವಿಗಳಲ್ಲೆ ಶ್ರೇಷ್ಠರಾದ ಸಂಸ್ಕೃತ ಕವಿಗಳನ್ನು ಸ್ಮರಿಸುತ್ತ ರಾಮಾಯಣ, ಮಹಾಭಾರತಗಳನ್ನು ರಚಿಸಿರುವ ವ್ಯಾಸ ಮತ್ತು ವಾಲ್ಮೀಕಿ ಎಂಬ ಇಬ್ಬರು ಕವಿಗಳು ವಂದನೀಯರೆನಿಸಿದ್ದಾರೆ ಎಂದಿರುವನು. ಪಂಪನು 'ವ್ಯಾಸ ಮುನೀಂದ್ರ ರುಂದ್ರ ವಚನಾಮೃತ ವಾರ್ಧಿಯನೀ ಸುವೆಂ ಕವಿವ್ಯಾಸನೆಂಬ ಗರ್ವಮೆನಗಿಲ್ಲ'(ಪಂಪಭಾರತ, ೧.೧೩) ಎಂದು ಹೇಳಿ ವ್ಯಾಸರ ಮಹಾಭಾರತವನ್ನು ಕನ್ನಡಿಸಲು ಹೊರಟ ನನಗೆ ವ್ಯಾಸನೆಂಬ ಗರ್ವವಿಲ್ಲವೆಂದು ವಿನಂತಿಸಿಕೊಂಡಿದ್ದಾನೆ. ರನ್ನನು ಇನ್ನೊಂದು ಪದ್ಯದಲ್ಲಿ 'ಮೃದು ಪದ್ಯ ರಚನೆಯೊಳ್ ಕಾಳಿದಾಸನುಂ, ಗದ್ಯ ರಚನೆಯೊಳ್ ಬಾಣನು ಮಂಕದ ಕವಿಗಳು(ಗದಾಯುದ್ಧ ೧.೯) ಎನ್ನುವ ಮೂಲಕ ಸಂಸ್ಕೃತದ ಕಾಳಿದಾಸ ಮತ್ತು ಬಾಣಭಟ್ಟರು ಪದ್ಯ ಮತ್ತು ಗದ್ಯ ಕಾವ್ಯ ರಚನೆಯಲ್ಲಿ ಹೆಸರುವಾಸಿಯಾದ ಕವಿಗಳೆಂದು ಹೇಳಿರುವುದನ್ನು ಗಮನಿಸಿದರೆ, ಕನ್ನಡದ ಪೂರ್ವ ಕವಿಗಳಲ್ಲಿ ಸಂಸ್ಕೃತ ಭಾಷೆಯ ಕವಿಗಳನ್ನು ಸ್ಮರಣೆ ಮಾಡುವುದು ವಿಶೇಷವಾಗಿತ್ತೆಂದು ಕಂಡುಬರುತ್ತದೆ.

ಪೊನ್ನ ಕವಿಯು ಸಂಸ್ಕೃತ ಮತ್ತು ಕನ್ನಡದ ಕವಿಗಳನ್ನು ಸ್ಮರಿಸುತ್ತ "ಕನ್ನಡ ಕವಿತೆಯೊಳಸಗಂಗನ್ನೂರ್ಮಡಿ ರೇಖೆಗಗ್ಗಳಂ ಸಕ್ಕದದೊಳ್ ಮುನ್ನುಳ್ಳ ಕಾಳಿದಾಸಂಗಂ ನಾಲ್ವಡಿ(ಶಾಂತಿಪುರಾಣ ೧.೫) ಸಂಸ್ಕೃತದ ಕವಿ ಕಾಳಿದಾಸನಿಗಿಂತ ನಾಲ್ಕು ಪಟ್ಟು ಹಾಗೂ ಕನ್ನಡದ ಕವಿ ಅಸಗನಿಗಿಂತ ನೂರುಪಟ್ಟು ಮಿಗಿಲು ಎಂದು, ತನ್ನನ್ನು ಪ್ರಶಂಸಿಸಿಕೊಂಡಿರುವುದು ಕಂಡುಬರುತ್ತದೆ. ಕವಿಗಳು ತಮ್ಮ ಪೂರ್ವಕಾಲೀನ ಹಾಗೂ ಸಮಕಾಲೀನ ಕವಿಗಳನ್ನು ಸ್ಮರಿಸುವುದರ ಜೊತೆಗೆ ಸ್ವಪ್ರಶಂಸೆಯನ್ನು ಮಾಡಿಕೊಳ್ಳುವ ಕವಿಗಳೂ ಆ ಸಂದರ್ಭದಲ್ಲಿದ್ದರು. ಸ್ವಪ್ರಶಂಸೆ ಹಾಗೂ ಸ್ವಕಾವ್ಯ ಪ್ರಶಂಸೆಯು ನಾಂದಿ ಪದ್ಯಗಳ ಮತ್ತೊಂದು ಗುಣ ಲಕ್ಷಣವಾಗಿದೆ.

### ೬. ಕುಕವಿ ನಿಂದೆ

ಕಾವ್ಯ ರಚನಾ ಸಾಮರ್ಥ್ಯವಿಲ್ಲದ ಹಾಗೂ ಕೆಟ್ಟ ಕಾವ್ಯಗಳನ್ನು ಬರೆದು, ನಿಂದನೆಗೆ ಒಳಗಾದ ಕವಿಗಳನ್ನು ಕುಕವಿಗಳು ಎಂದು ಕರೆಯುತ್ತಾರೆ. ಕನ್ನಡದ ಕಾವ್ಯಗಳಲ್ಲಿ ಕುಕವಿ ನಿಂದೆಯು ಸುದೀರ್ಘವಾಗಿ ಬೆಳೆದುಬಂದಿದೆ. ಇದು ಕಾವ್ಯಮೀಮಾಂಸೆಯ ಇನ್ನೊಂದು ಮಾದರಿ ಎಂಬಂತೆ ಮುಂದುವರಿದಿದೆ. "ಜಿನಸೇನಾಚಾರ್ಯರ ಪೂರ್ವಪುರಾಣದ ಪ್ರಸ್ತಾವನೆಯಲ್ಲಿ ಕಾವ್ಯ ನಿರ್ಮಾಣ ಸಾಮರ್ಥ್ಯವಿಲ್ಲದ ಕುಕವಿಗಳನ್ನು ಕುರಿತು ಅವ್ಯುತ್ಪನ್ನರಾದ ಕೆಲವರು ಕವಿತೆಗಳನ್ನು ಬರೆಯಲು ಪ್ರಯತ್ನಿಸಿ ಮಾತನಾಡಲು ಅಪೇಕ್ಷಿಸುವ ಮೂಗರಂತೆ

ಹಾಸ್ಯಕ್ಕೆ ಪಾತ್ರರಾಗುತ್ತಾರೆ."[೫] ಎಂದಿರುವರು ಕವಿಗಳು ತಮ್ಮ ಕಾವ್ಯಗಳನ್ನು ಮೆಚ್ಚುವ, ಆಧರಿಸುವ, ಓದುವ ಕಾವ್ಯಾಭಿಮಾನಿಗಳನ್ನು ಪ್ರೀತಿಸುತ್ತಿದ್ದರು. ಹಾಗೂ ತಮ್ಮ ಕಾವ್ಯಗಳನ್ನು ನಿಂದಿಸುವ ಕುಕವಿಗಳನ್ನು ತಿರಸ್ಕರಿಸುತ್ತಿದ್ದರು. "ಸುಜನರು ದುಂಬಿಯಾದರೆ, ಕುಜನರು ಕೊರೆಯುವ ಹುಳು. ಸುಜನರು ರವಿಯಾದರೆ, ಕುಜನರು ಗೂಗೆ. ಸುಜನರು ಚಂದ್ರಕಾಂತ ಶಿಲೆಯಾದರೆ, ಕುಜನರು ಗೋರಿಕಲ್ಲು, ಸುಜನರು ಸಿಂಹವಾದರೆ, ಕುಜನರು ಹಂದಿ, ನಾಯಿ, ನೊಣ, ಇಲಿ, ಕಾಗೆ, ಮರಕುಟಗ ಹಕ್ಕಿ ಇತ್ಯಾದಿ ಉಪಮೆಗಳನ್ನು ಕೊಟ್ಟು, ತಮ್ಮ ಕಾವ್ಯಕ್ಕೆ ಸುಮುಖರಲ್ಲದವರು ಕುಕವಿಗಳು ಎಂದಿರುವನು.[೬] ಕುಕವಿಗಳಿಗೆ ಒಳ್ಳೆಯ ಕಾವ್ಯಗಳನ್ನು ನಿಂದಿಸುವುದಲ್ಲದೆ ಬೇರೆ ಕೆಲಸವೇ ಇಲ್ಲ, ಕುಕವಿಗಳ ಕಾರ್ಯವೇ ಸುಕಾವ್ಯ ನಿಂದನೆ.

ಕುಮಾರವ್ಯಾಸನು ಕಾವ್ಯನಿಂದಕರನ್ನು ಕ್ರೂರ ಕರ್ಮಿಗಳೆನ್ನುತ್ತಾನೆ. ಕಾವ್ಯದಲ್ಲಿರುವ ಒಳ್ಳೆಯ ಅಂಶಗಳನ್ನು ಗಮನಿಸದೆ, ಸತ್ಕವಿಗಳನ್ನು ತೆಗಳುವುದೇ ಇವರ ಕೆಲಸವಾಗಿರುತ್ತದೆ. ಅದಕ್ಕಾಗಿಯೇ ಕಾವ್ಯನಿಂದಕರನ್ನು ಕುರಿತು,

ಚೋರ ನಿಂದಿಸಿ ಶಶಿಯ ಬೈದಡೆ
ಕ್ಷೀರವನು ಕ್ಷಯರೋಗಿ ಹಳಿದರೆ
ವಾರಣಾಸಿಯ ಹೆಳವ ನಿಂದಿಸಿ ನಕ್ಕರೇನಹುದು
ಭಾರತದ ಕಥನ ಪ್ರಸಂಗವ
ಕ್ರೂರ ಕರ್ಮಿಗಳೆತ್ತಬಲ್ಲರು
ಘೋರ ಕೌರವವನು ಕೆಡಿಸುಗುಕೇಳ್ದ ಸಜ್ಜನರ

**ಕರ್ಣಾಟಭಾರತ ಕಥಾ ಮಂಜರಿ(೧.೨೨)**

ಈ ಪದ್ಯ ಕುಕವಿ ನಿಂದೆಯಾಗಿಯೂ ಹಾಗೂ ಫಲಶ್ರುತಿಯ ಪದ್ಯವಾಗಿಯೂ ಪರಿಣಮಿಸಿದೆ. ಕಳ್ಳರು ಸಾಮಾನ್ಯವಾಗಿ ಹುಣ್ಣಿಮೆ ಚಂದ್ರನನ್ನು ಬೈಯುತ್ತಾರೆ, ಕ್ಷಯರೋಗಿ ಹಾಲನ್ನು ತಿರಸ್ಕರಿಸುವಂತೆ, ವಾರಣಾಸಿಯನ್ನು ಕುಂಟನಾದವನು ನಿಂದಿಸಿದಂತೆ, ಭಾರತದ ಕಥೆಯನ್ನು ಕೆಟ್ಟ ಕವಿಗಳು ತಿಳಿಯಲಾರರು, ಭಾರತದ ಕಥೆಯನ್ನು ಆಲಿಸಿದ ಸಜ್ಜನರ ಘೋರವಾದ ಪಾಪವೂ ನಾಶವಾಗುವುದು ಎಂದಿರುವನು.

## ಕಾವ್ಯ ಲಕ್ಷಣ

ಕಾವ್ಯವು ರಸ, ಧ್ವನಿ, ಅಲಂಕಾರ, ರೀತಿ, ಗುಣ ವಕ್ರೋಕ್ತಿ ಇತ್ಯಾದಿ ಅಂಶಗಳಿಂದ ಕೂಡಿರಬೇಕು. ಪಂಪ ಮಹಾಕವಿ ತನ್ನ ವಿಕ್ರಮಾರ್ಜುನ ವಿಜಯದ ಒಂದು ಪದ್ಯದಲ್ಲಿ

(ಪದ್ಯ ೧.೧೨) ಲಲಿತವಾದ ಪಸನ್ನವಾದ ಕವಿತಾ ಗುಣವನ್ನು ಹೊಂದಿರುವ ಪದ್ಯಗಳಿರಬೇಕೆಂದು ಹೇಳುತ್ತಾನೆ.

ಲಲಿತಪದಂ ಪ್ರಸನ್ನ ಕವಿತಾಗುಣಮಿಲ್ಲದೆ ಪೂಣ್ದು ಪೇಟಿ ಬೆ
ಳ್ಗಳ ಕೃತಿಬಂಧಮುಂಬರೇ(ಪ)ಕಾಜಿರ ಕೈಗಳ ಕೇಡು
ನುಣ್ಣನಪ್ಪಳಕದ ಕೇಡು ಪೇಟಿಸಿದೊಡರ್ಥದ ಕೇಡೆನೆ
ಪೇೞ್ದು ಬೀಗಿ ಪೊಟ್ಟಳಿಸಿ ನೆಗಟ್ತೆಗಾಡಿಸುವ ದುಷ್ಕವಿಯು ಕವಿಯೆಂಬ ಲೆಕ್ಕಮೇ

ಕವಿರಾಜಮಾರ್ಗ (೧.೧೨)

ಕಾವ್ಯದ ಭಾಷೆ ಮೃದು ಮಧುರವಾಗಿರಬೇಕು ಲಲಿತವಾದ ಅಥವಾ ಸುಂದರವಾದ ಪದರಚನೆಯನ್ನೊಳಗೊಂಡಿರಬೇಕು. ಕವಿತಾ ಗುಣವಿಲ್ಲದ ಕೃತಿಕಾರನ ಕೈಗಳ ಕೇಡು, ಬರೆದ ಶಬ್ದದ ಕೇಡು, ಅರ್ಥದ ಕೇಡೆಂದು ಹೀಗೆಳೆಯುವ ಕವಿಯು ಕವಿಯೆಂಬ ಲೆಕ್ಕವೇ? ಎಂದು ಪಂಪನ ವಿಚಾರವಾಗಿದೆ. ಶಬ್ದಾರ್ಥಗಳು ಕಾವ್ಯಗುಣವನ್ನು ಹೊಂದಿದ್ದು, ಶಬ್ದಾರ್ಥ ಸಹಿತವಾಗಿದ್ದು, ವಿಶೇಷವಾದ ಅರ್ಥಗಳಿಂದ ಕೂಡಿದ, ಸಾಲಂಕಾರಯುತವಾದ, ರಚನೆಯೇ ಕಾವ್ಯವೆನಿಸುವುದು. ಹೀಗೆ ಹಲವು ಕಾವ್ಯಲಕ್ಷಣಗಳನ್ನು ಹೊಂದಿದ ಕಾವ್ಯ ಮಾತ್ರ ಸತ್ಕಾವ್ಯಗಳ ಗುಂಪಿಗೆ ಸೇರುತ್ತದೆ. ಇಲ್ಲವಾದರೆ ಅದು ಕುಕಾವ್ಯವಾಗಿ ಪರಿಣಮಿಸುತ್ತಿತ್ತು. ಜನರ ದೃಷ್ಠಿಯಲ್ಲಿ ಅಥವಾ ಕಾವ್ಯಪ್ರಿಯರಿಗೆ ಅದು ನೀರಸ ಕಾವ್ಯವಾಗಿ ರುಚಿಸದೇ ವ್ಯರ್ಥಕಾವ್ಯವಾಗುತ್ತಿತ್ತು.

ಕವಿಭಾವ ಕೃತ ಅನೇಕ ಪ್ರವಿಭಾಗ
ವಿವಿಕ್ತ ಸೂಕ್ತ ವಿವಿಕ್ತ ಸೂಕ್ತ ಮಾರ್ಗಂ
ಕಾವ್ಯಂ ಸವಿಶೇಷ ಶಬ್ದ ರಚನ ವಿವಿಧ
ಅರ್ಥವ್ಯಕ್ತಿ ವರ್ತಿತಾಲಂಕಾರಂ

**(ಕವಿರಾಜ ಮಾರ್ಗ ೧.೨೨)**

ಪ್ರಾಚೀನ ಕಾವ್ಯಮೀಮಾಂಸಕರು ಶಬ್ದಾರ್ಥೌ ಸಹಿತೌ ಕಾವ್ಯವೆಂದು(ಬಾಮಹ), ರೀತಿ ರಾತ್ಮಾ ಕಾವ್ಯಸ್ಯ(ವಾಮನ), ಧ್ವನಿರಾತ್ಮಕಾವ್ಯಸ್ಯ(ಆನಂದವರ್ದನ) ಹೀಗೆ ಕಾವ್ಯಲಕ್ಷಣಗಳನ್ನು ಕುರಿತು ತಮ್ಮದೇ ಆದ ವ್ಯಾಖ್ಯೆಗಳನ್ನು ಕೊಟ್ಟಿದ್ದಾರೆ. ಆದರೆ ಶ್ರೀ ವಿಜಯನು ಕೆಲವು ವಿಶೇಷತೆಗಳಿಂದ ಕೂಡಿರುವ ಶಬ್ದರಚನೆ, ಅರ್ಥವನ್ನೊಳಗೊಂಡ ಅಲಂಕಾರ ಸಹಿತವಾದ ಪದಗಳ ಸಮೂಹವೇ ಕಾವ್ಯವೆಂದು ಕಾವ್ಯ ಲಕ್ಷಣವನ್ನು ಹೇಳುವನು. ಕಾವ್ಯ ಲಕ್ಷಣಗಳನ್ನು ಹೇಳುವಾಗ ಹಲವಾರು ಕವಿಗಳು ಹಾಗೂ ಮೀಮಾಂಸಕರು ಲಲಿತವಾದ ಪದ ಸುಂದರವಾದ ಕವಿತಾಗುಣ ಹಾಗೂ ನವರಸ ಭರಿತವಾದ ವಾಕ್ಯಗಳಿಂದ ಕೂಡಿರಬೇಕೆಂದೇ ಅಭಿಪ್ರಾಯಪಡುತ್ತಾರೆ.

## ಆಶ್ರಯದಾತನ ಪ್ರಶಂಸೆ

ಈ ಪದ್ಧತಿಯು ಕೂಡ ಕವಿರಾಜ ಮಾರ್ಗದಿಂದಲೇ ಪ್ರಾರಂಭವಾಗಿದೆ. ಕಾವ್ಯದ ಪ್ರಾರಂಭದಲ್ಲೆ ಮಾರ್ಗಕಾರ ಆಶ್ರಯದಾತನ ಪ್ರಶಂಸೆ ಮಾಡಿರುವುದು ಕಂಡುಬರುತ್ತದೆ. ನೃಪತುಂಗನನ್ನು ನಾರಾಯಣನಿಗಿಂತ ಮಿಗಿಲು ಎಂದು ವರ್ಣಿಸಿರುವ ಪದ್ಯ ಪೀಠಿಕಾ ಭಾಗದ ಮೊದಲ ಪದ್ಯವೇ ಆಗಿರುತ್ತದೆ. ಪಂಪನು ಅರಿಕೇಸರಿಯನ್ನು ಉದಾತ್ತ ನಾರಾಯಣನೆಂದು ಕರೆದು ಮಹಾಭಾರತದ ಅರ್ಜುನನಿಗೆ ಸಮೀಕರಿಸಿದರೆ, ರನ್ನನು ತನ್ನ ಆಶ್ರಯದಾತನಾದ ಸತ್ಯಾಶ್ರಯನನ್ನು ಚಾಳುಕ್ಯ ನಾರಾಯಣನೆಂದು ಕರೆದು ಮಹಾಭಾರತದ ಭೀಮನೊಂದಿಗೆ ಸಮೀಕರಿಸಿದ್ದಾನೆ.

## ಅತ್ಮ ಪ್ರಶಂಸೆ

ಪ್ರಾಚೀನ ಕನ್ನಡ ಕಾವ್ಯದ ನಾಂದಿ ಪದ್ಯಗಳ ಮತ್ತೊಂದು ವಿಶಿಷ್ಟವಾದ ಲಕ್ಷಣವೆಂದರೆ, ಕವಿಗಳು ತಮ್ಮನ್ನು ಕುರಿತು ಮಾಡಿಕೊಳ್ಳುವ ಆತ್ಮಪ್ರಶಂಸೆ, ಆಶ್ರಯದಾತನ ಅಥವಾ ರಾಜನ ಪ್ರಶಂಸೆ ಮಾಡುವುದರೊಂದಿಗೆ, ತಮ್ಮ ಪ್ರಶಂಸೆಯನ್ನು ಮಾಡಿಕೊಂಡಿದ್ದಾರೆ.

ಕವಿ ಜನದೊಳ್ ರತ್ನತ್ರಯ
ಪವಿತ್ರಮೆನೆ ನೆಗಟ್ದಿ ಪಂಪನುಂ ಪೊನ್ನಿಗನುಂ
ಕವಿರನ್ನನು ಮಿ ಮೂವರ್
ಕವಿಗಳ್ ಜಿನಸಮಯದೀಪಕರ್ ಪೆಜಿರೊಳರೆ

**ಅಜಿತ ಪುರಾಣ–ರನ್ನ**

ಈ ಪದ್ಯದಲ್ಲಿ ಕವಿ ರನ್ನನು ಪಂಪನ ಪೊನ್ನನ ಮತ್ತು ತನ್ನ ಆತ್ಮಪ್ರಶಂಸೆಯನ್ನು ಮಾಡುವುದರೊಂದಿಗೆ, ಕವಿ ಜನರಲ್ಲೆ ಶ್ರೇಷ್ಠರಾದವರು ಪಂಪನು, ಪೊನ್ನನು ಮತ್ತು ನಾನು(ರನ್ನ) ಈ ಮೂವರನ್ನು ಹೊರತುಪಡಿಸಿ, ಬೇರೆಯವರು ಉಂಟೇ? ಎಂದು ಪ್ರಶ್ನಿಸುತ್ತಾನೆ.

ಕದಳಿಗರ್ಭಶ್ಯಾಮಂ
ಮೃದು ಮಧುರ ಶಿರೋರುಹಂ ಸರೋರುಹವದನಂ
ಮೃದು ಮಧ್ಯಮತನು ಹಿತಮಿತ
ಮೃದು ವಚನಂ ಲಲಿತ ಮಧುರ ಸುಂದರ ವೇಷಂ

**ಪಂಪಭಾರತ(೧.೨೯)**

ಈ ಪದ್ಯವು ಪಂಪನು ತನ್ನ ದೇಹಸೌಂದರ್ಯವನ್ನು ವರ್ಣಿಸಲು ಬರೆದ ಪದ್ಯವಾಗಿದೆ. ತನ್ನ ಬಣ್ಣ, ಕೂದಲು, ಮುಖ, ಮಾತು ಮತ್ತು ವೇಷ ಇತ್ಯಾದಿಗಳನ್ನು ಕುರಿತು ವರ್ಣಿಸಿಕೊಳ್ಳುತ್ತ ತನ್ನ ಚೆಲುವನ್ನು ಪ್ರಕಟಪಡಿಸುತ್ತಾನೆ. ಅಷ್ಟು ಕಪ್ಪು ಅಲ್ಲದ ಅಷ್ಟು ಬಿಳುಪು ಅಲ್ಲದ, ಮಧ್ಯಮ ಎತ್ತರದ ತನುವಿನ ಮೃದುವಾದ ಕೇಶರಾಶಿಯ, ಸುಂದರ ಮುಖದ, ಮೃದುವಾದ ಮಾತಿನ ಸುಂದರ ವೇಷಭೂಷಣಗಳನ್ನು ಧರಿಸುವ ಯುವಕನಾಗಿರುವಂತೆ ಕಂಡುಬರುತ್ತದೆ. ಇದೊಂದು ಸ್ವಪ್ರಶಂಸೆ ಅಥವಾ ಆತ್ಮಪ್ರಶಂಸೆಯ ಪದ್ಯವಾಗಿದೆ.

**ಸ್ವಕಾವ್ಯ ಪ್ರಶಂಸೆ**

ಪ್ರಾಚೀನ ಕನ್ನಡ ಕವಿಗಳು ತಮ್ಮ ಆತ್ಮಪ್ರಶಂಸೆಯ ಜೊತೆಗೆ, ಸ್ವಕಾವ್ಯ ಪ್ರಶಂಸೆಯನ್ನು ಮಾಡಿಕೊಳ್ಳುತ್ತಿದ್ದರು. ಕವಿ ರುದ್ರಭಟ್ಟನು ತನ್ನ ಜಗನ್ನಾಥ ವಿಜಯದಲ್ಲಿ

ಪೊಸತೆನೆ ಪೇಟ್ದಿ ತಿರ್ದುವಜಿವೆನ್ನುಳೆ ಸನ್ನಿದಮಾದೊಡಂ
ಕರ ರಸಿಕರನೆಯ್ದು ತಿರ್ದಿಸಿದೊಡಲ್ಲದೆ ನಿಲ್ಲದು ಚಿತ್ರಮಂತೆ
ತಿರ್ದಿಸುವುದೆ ನಲ್‌ನಯಂ ಬೆಳಗೆ ಕನ್ನಡಿ ಸೋದಿಸಿಪೊನ್ ವಿರಾಜಿಪಂ
ತೆಸೆದು ಬಟಿಕ್ಕಮತ್ಕೃತಿ ಚಮತ್ಕೃತಿಯಂ ಧರೆಗುಂಟು ಮಾಡುಗುಂ

**ಜಗನ್ನಾಥ ಪುರಾಣಂ(೧.೧೫)**

ಈ ಕಾವ್ಯ ಹೊಸದು ಚೆನ್ನಾಗಿದೆಯೆಂದು ವಾಚಕರು ಹೇಳುವಂತೆ ಕಾವ್ಯರಚಿಸುವ ಸಾಮರ್ಥ್ಯ ನನ್ನಲ್ಲಿದೆ ಹಾಗೂ ಬೇರೆಯವರ ಕಾವ್ಯ ಮತ್ತು ನನ್ನ ಕಾವ್ಯವನ್ನು ತಿದ್ದುವ ಸಾಮರ್ಥ್ಯ ನನ್ನಲ್ಲಿದೆ. ಆದರೂ ನನ್ನ ಕಾವ್ಯವನ್ನು ಬೇರೆ ವಿದ್ವಾಂಸರಿಂದ ತಿದ್ದಿಸದ ವಿನಃ ನನ್ನ ಮನಸ್ಸಿಗೆ ನೆಮ್ಮದಿಯಿಲ್ಲ ಎಂದಿರುವನು. ಹಾಗೂ ಇನ್ನೊಂದು ಪದ್ಯದಲ್ಲಿ

'ಇನಿಯಳ ಸೊಂಕಿನಂತೆ ಪೊಸಪೂವಿನ ಜೊಂಪದಂತೆ ಚಂ
ದನ ರಸದಣ್ಪಿದಂತೆ ನನೆಯೇರಿದ ಮಲ್ಲಿಗೆಯಂತೆ ಪೂರ್ಣ ಚಂ
ದ್ರನ ಸಿರಿಯಂತೆ ಬಂದೆಸೆಪ ತೆಂಕಣ ತಂಬೆಲರಂತಾ ರುದ್ರಭ
ಟ್ಟನ ಕವಿತಾರಸಂ ಮನಮನಿರ್ಕುಳಿಗೊಳ್ವುದು ಸಜ್ಜನರ್ಕಳಾ

**ಜಗನ್ನಾಥ ವಿಜಯ(೧.೧೬)**

ಪ್ರಿಯೆಯ ಆಲಿಂಗನದಂತೆಯೂ, ಗಂಧರಸಲೇಪನದಂತೆಯೂ, ಹೂಗಳಿಂದ ತುಂಬಿದ ಮಲ್ಲಿಗೆಯ ಬಳ್ಳಿಯಂತೆಯೂ ಪೂರ್ಣಚಂದ್ರನ ಕಾಂತಿಯಂತೆಯೂ ರುದ್ರಭಟ್ಟನ ಕವಿತಾರಸವು ಸಜ್ಜನರ ಮನಸ್ಸನ್ನು ಸೆಳೆಯುವುದು ಎಂದಿರುವನು.

**ಫಲಶ್ರುತಿ**

ನಾಂದಿ ಪದ್ಯಗಳ ಮತ್ತೊಂದು ವಿಶಿಷ್ಟತೆಯೆಂದರೆ ಫಲಶ್ರುತಿಯನ್ನು ಹೇಳುವುದು. ಕಾವ್ಯಪಠನದಿಂದ ಹಾಗೂ ಆಲಿಸುವುದರಿಂದ ಯಾವ ಲಾಭ ದೊರಕುವುದು, ಹೇಗೆ ಪುಣ್ಯ ಪ್ರಾಪ್ತಿಯಾಗುವುದೆಂಬುದನ್ನು ಕವಿಗಳು ತಮ್ಮ ನಾಂದಿ ಪದ್ಯಗಳ ಮೂಲಕ ಹೇಳದೆ ಇಲ್ಲ. ಕಾವ್ಯದಲ್ಲಿ ಒಂದಕ್ಷರ ಕೇಳಿದವರಿಗೂ ಘೋರವಾದ ನರಕ ತಪ್ಪುವುದೆಂಬ ಉಲ್ಲೇಖಗಳು ದೊರಕುತ್ತವೆ. ಹಾಗೂ ದೇವರು ಸಕಲ ಇಷ್ಟಾರ್ಥ ಸಂಪದವನ್ನು ಕೊಟ್ಟು ಮನ್ನಿಸುವನು ಎಂಬ ನಂಬಿಕೆಯಿಂದ ಫಲಶ್ರುತಿಯನ್ನು ಹೇಳುತ್ತಾರೆ.

ಪರಮ ಪುಣ್ಯ ಚರಿತ್ರೆಯಿದನಾ
ಧರಿಸಿ ಕೇಳುವ ನರರ ಜನ್ಮಾಂ
ತರದ ಘನದುಷ್ಕರ್ಮ ದುಃಖವಿನಾಶ ದುರಿತಹರ
ಕರಿತುರಗ ರಥನಿಚಯ ರಾಜ್ಯದ
ಸಿರಿಯ ಸಂಪದವನು ಮುರ
ಹರನು ಮನ್ನಿಸಿ ಕೊಡುವ ಸುಜನರಿಗಿಷ್ಟ ಸಂಪದವ

**ನಳಚರಿತ್ರೆ(೧.೭)**

ಈ ಪದ್ಯದಲ್ಲಿ ಕವಿ ಕನಕದಾಸರು ನಳಚರಿತ್ರೆಯನ್ನು ಕೇಳುವ ಮನುಷ್ಯನ ಜನ್ಮಾಂತರ ಪಾಪ ಪರಿಹಾರವಾಗಿ ಆನೆ, ಕುದುರೆ, ರಥ, ರಾಜ್ಯದ ಸಿರಿ, ಸಂಪತ್ತು ಇತ್ಯಾದಿಗಳನ್ನು ಮುರಹರನಾದ ಶ್ರೀಕೃಷ್ಣನು ಕೊಡುವನು. ಹಾಗೂ ಸುಜನರಿಗೆ ಇಷ್ಟಸಂಪತ್ತನ್ನು ದಯಪಾಲಿಸುವನೆಂದಿರುವರು ಕಾವ್ಯದಿಂದ ಇಷ್ಟಾರ್ಥ ಹಾಗೂ ಪುಣ್ಯ ಪ್ರಾಪ್ತಿಯಾಗುವುದು ಎಂದು ಕವಿಗಳ ನಂಬಿಕೆಯಾಗಿತ್ತು.

ಹೇಮ ಖುರ ಶೃಂಗಾಭರಣದಲ್ಲಿ
ಕಾಮಧೇನು ಸಹಸ್ರ ಕಪಿಲೆಯ
ಸೋಮ ಸೂರ್ಯಗ್ರಹಣದಲ್ಲಿ ಸುರನ್ನದಿಯ ತೀರದಲಿ
ಶ್ರೀಮುಕುಂದಾರ್ಪಣವೆನಿಸಿ ಶತ
ಭೂಮಿ ದೇವರಿಗಿತ್ತ ಫಲವನು ದೀ
ಮಹಾ ಭಾರತದೋಂದಕ್ಷರ ಕೇಳ್ದರಿಗೆ ತೀರದಲಿ

**ಕುಮಾರವ್ಯಾಸನ ಭಾರತ (೧.೨೧)**

ಕುಮಾರವ್ಯಾಸನು ತನ್ನ ಕರ್ಣಾಟ ಭಾರತ ಕಥಾಮಂಜರಿಯಲ್ಲಿ ಕಾವ್ಯ ಫಲಶ್ರುತಿಯಲ್ಲಿ ಗ್ರಹಣ ಕಾಲದಲ್ಲಿ ಸಹಸ್ರ ಕಪಿಲೆಯನ್ನು ದಾನ ಮಾಡಿದ ಪುಣ್ಯ ದೊರೆಯುತ್ತದೆ, ಹಾಗೂ

ಮಹಾಭಾರತದ ಒಂದಕ್ಷರವನ್ನು ಕೇಳಿದವರಿಗೆ ಭೂಮಿದಾನವನ್ನು ದೇವರಿಗೆ ಮಾಡಿದ ಪುಣ್ಯ ಬರುತ್ತದೆ ಎಂದಿರುವನು.

ವಿವರಿಸುವೊಡಿ ಲೀಲೆಯನು ಹೇ
ಳುವನು ದಿಟ ನಾನಲ್ಲ ಮಿಗೆ ಕೇ
ಳುವರು ಮಾನವರಲ್ಲವಿದು ಸಾಮಾನ್ಯತರವಲ್ಲಾ
ಶಿವನ ನಟ ನಾಟಕದ ಮಹಿಮೆಯ
ಶಿವನೆ ಬಲ್ಲನದಂತು ಕಾರಣ
ಶಿವನ ಭಕ್ತರು ತಿಳಿವುದೀ ಪ್ರಭುಲಿಂಗ ಲೀಲೆಯನು

ಪ್ರಭುಲಿಂಗ ಲೀಲೆ(೧.೯)

ಕವಿಗಳು ತಮ್ಮ ಕಾವ್ಯವನ್ನು ಹೇಳಿದರೂ ಹೇಳುವವನು ನಾನಲ್ಲ ಎಂದಿರುವರು. ಕುಮಾರವ್ಯಾಸನು ಸಹ 'ವೀರನಾರಾಯಣನೇ ಕವಿ, ಲಿಪಿಕಾರ ಕುಮಾರವ್ಯಾಸ' ಎಂದು ಹೇಳಿದ, ನಿಗರ್ವಿ ಕವಿಪುಂಗವರು ಜನಿಸಿದ ನಾಡಿದು. ಅದರಂತೆಯೇ ಕುಮಾರವ್ಯಾಸನ ಸಮಕಾಲೀನ ಕವಿಯಾದ ಚಾಮರಸನು 'ಪ್ರಭುಲಿಂಗ ಲೀಲೆ'ಯನ್ನು ಹೇಳುವವನು ನಾನಲ್ಲ, ಕೇಳುವವರು ಮಾನವರಲ್ಲ, ಶಿವನೇ ನಟನಾದ ನಾಟಕದ ಮಹಿಮೆಯನ್ನು ಶಿವನೇ ಬಲ್ಲನು ಹಾಗೂ ಶಿವಭಕ್ತರು ತಿಳಿಯಬೇಕು ಪ್ರಭುಲಿಂಗಲೀಲೆಯನು ಎಂದಿರುವನು.

ಇಂತಿವೆಲ್ಲಂ ಚನ್ನಬಸವ ಪೌರಾಣವಾ
ದ್ಯಂತ ಸತ್ಕಥೆಯ ಸೂಚನೆಯಿದು ಪರಮಸುಖ
ಸಂತಸದಿ ಪೇಳ್ದರ್ಗೆ, ಕೇಳ್ದರ್ಗೆ ಭಕ್ತಿಯಿಂ ಬರೆದೋದಿ ಪಠಿಸಿದರ್ಗೆ
ಸಂತತಂ ಸಕಲ ಸುಖಮಂ ಸಕಲ ಭೋಗಮನ
ನಂತ ಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ
ಕಂತು ಹರನಪರಾವತರ ನೆನಿಸುವ ಚನ್ನಬಸವೇಶನಳ್ಕರಿಂದೆ

ಬಸವ ಪುರಾಣ(೧.೪೦)

ಸತ್ಕಥೆಯನ್ನು ಹೊಂದಿರುವ 'ಬಸವಪುರಾಣ' ಎಂಬ ಕಾವ್ಯವು ಆದಿಯಿಂದ ಅಂತ್ಯದ ವರೆಗೆ ಕೇಳಿದವರಿಗೆ ಭಕ್ತಿಯಿಂದ ಬರೆದವರಿಗೆ, ಓದಿದವರಿಗೆ ಹಾಗೂ ಪಾರಾಯಣ ಮಾಡಿದವರಿಗೆ, ಪರಮೇಶ್ವರ ಅವತಾರಿಯಾದ ಚೆನ್ನಬಸವನು ಸಕಲ ಸುಖ–ಭೋಗಗಳನ್ನು ಹಾಗೂ ಅನಂತ ಸೌಭಾಗ್ಯವನ್ನು ಕೊಟ್ಟು ರಕ್ಷಿಸುವವನು. ಈ ಪದ್ಯದಲ್ಲಿ ಗಮನಿಸುವ ಮುಖ್ಯವಾದ ಅಂಶವೆಂದರೆ ಕಾವ್ಯವನ್ನು ಹಿಂದೆ ಆದಿಯಿಂದ ಅಂತ್ಯದವರೆಗೂ ಆಲಿಸುತ್ತಿದ್ದಾರೆಂದು

ಕಂಡುಬರುತ್ತದೆ. ಅದಕ್ಕಾಗಿಯೇ ಚಾಮರಸ ಕವಿ ಕಾವ್ಯಾದಿಯಿಂದ ಕೊನೆಯವರೆಗೂ ಕೇಳಿದವರಿಗೆ ಫಲಪ್ರಾಪ್ತಿಯಾಗುತ್ತದೆ ಎಂದಿರುವನು.

ವರಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರ ಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ

**ಮೋಹನ ತರಂಗಿಣಿ(೧.೪೧)**

ಕನಕದಾಸರು ತಮ್ಮ ಮೋಹನ ತರಂಗಿಣಿ ಕಾವ್ಯದಲ್ಲಿ ಕಾವ್ಯ ಫಲವನ್ನು ಕುರಿತು –ಶ್ರೇಷ್ಠವಾದ ಮೋಹನ ತರಂಗಿಣಿ ಎಂಬ ಈ ಕಾವ್ಯವನ್ನು ಬರೆದು, ಓದಿದ, ಕೇಳಿದ ಜನರನ್ನು ಲಕ್ಷ್ಮೀಪತಿಯು(ವಿಷ್ಣು/ಕೃಷ್ಣ) ಸೂರ್ಯಚಂದ್ರರು ಇರುವತನಕ ಅನುಗ್ರಹಿಸಿ ಏಕರೀತಿಯಿಂದ ರಕ್ಷಿಸುವನೆಂದು ಹೇಳುತ್ತ ಈಗೀನ ಜನರು ಕಾವ್ಯವನ್ನು ಓದಬೇಕು, ಕೇಳಬೇಕು, ಆಧರಿಸಬೇಕು ಎಂಬ ಅಭಿಪ್ರಾಯಕ್ಕೆ ಬರುತ್ತಾನೆ. ಬಹುಶಃ ದಾಸರ ಕಾಲಕ್ಕೆ ಕಾವ್ಯಾರಾಧಕರ ಸಂಖ್ಯೆ ಕಡಿಮೆಯಾಗಿತ್ತು ಎನಿಸುತ್ತದೆ.

"ಬಸವ ಪವಾಡ: ಬಸವಪವಾಡವನಿದ ನಾನುಸುರುವೆನು ಭಕ್ತಿಯಿಂ ಕೇಳ್ದ ಭಕ್ತರಿಗೆಲ್ಲ ಶಶಿಧರನು ಆಯುರಾರೋಗ್ಯ ನೀಡುವನು. ವಜ್ರಕುಮಾರ ಚರಿತೆ; ಹೊಸ ಕೃತಿಯನೊಯ್ದು ಜಿನವಸತಿಯೊಳೋದಲ್ಕೆ ಪುಣ್ಯಮದಕ್ಕಂ, ಸುಯೋಗಚರಿತೆ; ಪಾವನ ಚರಿತೆಯಂ ಪೇಳುವೆನು.... ಶ್ರೀ ಹರಿಯು ಪ್ರೇಮದಲಿ ಪಾಲಿಸುವನು"[೭] ಈ ರೀತಿ ಕಾವ್ಯದ ಪೀಠಿಕಾ ಪ್ರಕರಣದಲ್ಲಿ ಕಾವ್ಯದ ಫಲಶ್ರುತಿಯನ್ನು ತಿಳಿಸುವ ಪದ್ಯಗಳಿರುತ್ತವೆ.

## ಇತರ ವಿವರಗಳು

### ೧. ನಾಂದಿಯಲ್ಲಿ ಕಥಾಮುಖದ ಸೂಚನೆ

ಕಥೆಯ ಹೆಸರು ಯಾವುದೆಂಬುದನ್ನು ಸೂಕ್ಷ್ಮವಾಗಿ ಸೂಚಿಸುವುದೇ ಕಥಾಮುಖದ ಸೂಚನೆ. ಈ ರೀತಿಯ ಕೆಲವು ನಾಂದಿ ಪದ್ಯಗಳು ಕನ್ನಡ ಕಾವ್ಯದಲ್ಲಿ ದೊರೆಯುತ್ತವೆ. ಹರಿಹರನ ಅನೇಕ ರಗಳೆಗಳಲ್ಲಿ ಈ ರೀತಿಯ ಕೆಲವು ನಾಂದಿಪದ್ಯಗಳಿವೆ. ಪಂಪಾ ಪತಿಯಾದ ವಿರೂಪಾಕ್ಷನು ತನ್ನ ಕಥೆಯನ್ನು ಲಾಲಿಸಬೇಕೆಂದು ಭಿನ್ನವಿಸಿಕೊಂಡಿದ್ದಾನೆ.

ಉದಾಹರಣೆಗೆ–ಇಳೆಯಗೊಂಡ ಗುಡಿಮಾರರ ಚರಿತವ ಸಂದಣಿಪ ವಚನ ರಚನೆ ಗಳಿಂದ ಕೇಳಯ್ಯ ಹಂಪೆಯ ವಿರೂಪಾಕ್ಷ(ಇಳೆಯಾಂಡ ಗುಡಿಮಾರನ ರಗಳೆ) ಧರೆಯರಿ

ಯಲ್ತನು ಮೆರೆಯೆ ನೆರೆಸಂದ ತಿರುನೀಲಕಂಠರ ಚರಿತವನವಧರಿಸು ಹಂಪೆಯ ವಿರೂಪಾಕ್ಷ(ತಿರುನೀಲಕಂಠನ ರಗಳೆ).

"ಶಂಕರದೇವ ತನ್ನ ರಗಳೆಯಲ್ಲಿ ಹರಿಹರನ ಪದ್ಧತಿಯನ್ನೇ ಅನುಸರಿಸಿದ್ದಾನೆ. ತರಳನ ತೊದಲು ನುಡಿಯ ನವದರಿಪುದು, ವಿರಚಿಸುವೆ ಅವದರಿಪುದಯ್ಯ ಮೊದಲಾದ ಮಾತುಗಳು. ಅವನ ಚೇರಮ ರಗಳೆ, ಬಹುರೂಪಿ ಚೌಡಯ್ಯನ ರಗಳೆ, ಅಮುಗಿ ದೇವಯ್ಯನ ರಗಳೆ, ಬಿಬ್ಬ ಬಾಚಯ್ಯನ ರಗಳೆ, ಮೇದರ ಕೇತಯ್ಯನ ರಗಳೆ ಮೊದಲಾದ ಕೃತಿಗಳಲ್ಲಿ ಕಂಡುಬರುತ್ತದೆ...."[೮]

## ೨. ನೇರವಾಗಿ ಕಾವ್ಯಾರಂಭ ಮಾಡಿದ ವಿವರ

ಸಾಮಾನ್ಯವಾಗಿ ಯಾವುದೇ ಕಾವ್ಯದಲ್ಲಿ ನಾಂದಿ ಪದ್ಯಗಳಾದ ನಂತರ ಕಾವ್ಯದ ಕಥೆ ಪ್ರಾರಂಭವಾಗುತ್ತದೆ. ಆದರೆ ಇದಾವುವು ಇಲ್ಲದೆ ನೇರವಾಗಿ ಕಾವ್ಯವನ್ನು ಆರಂಭಸಿದ ಅಪರೂಪದ ನಿದರ್ಶನಗಳು ಪ್ರಾಚೀನ ಕಾವ್ಯಗಳಲ್ಲಿ ದೊರೆಯುತ್ತವೆ.

ಉದಾಹರಣೆಗೆ: ಕುಮಾರ ಪದ್ಮರಸನ ಸಾನಂದ ಚರಿತೆ, ತಿರುಮಲಾರ್ಯನ ಚಿಕ್ಕದೇವರಾಜ ವಂಶಾವಳಿ, ಲಿಂಗಣ್ಣ ಕವಿಯ ಕೆಳದಿ ನೃಪವಿಜಯ, ಮುದ್ದಣ ಕವಿಯ ರಾಮಾಶ್ವಮೇಧ ಇತ್ಯಾದಿ ಕೃತಿಗಳನ್ನು ಹೆಸರಿಸಬಹುದು.

## ನಾಂದಿ ಪದ್ಯಗಳ ಗುಣಗಳು

**೧. ಕವಿತಾ ರಹಸ್ಯ :** ಕಾವ್ಯ ರಚನಾ ಕೌಶಲ ಕವಿಗೆ ಬರುವುದು ಸಂಸ್ಕಾರದಿಂದ ಕಾವ್ಯರಚನಾ ಸಾಮರ್ಥ್ಯ ತುಂಭಾ ನಿಗೂಢವಾದುದು. ಅದು ಕವಿಯ ಕೈಗೆ ಸಿಕ್ಕ ಹಾಗೆ ಅನಿಸಿ, ಸಿಗದೇ ಹೋಗಬಹುದು. ಅದು ಎಲ್ಲರಿಗೂ ಬಹುಬೇಗ ವಶವಾಗುವ ವಿದ್ಯೆಯಲ್ಲ, ಸಾಧಕನಿಗೆ ಮಾತ್ರ ಕವಿತಾ ಸಾಮರ್ಥ್ಯ ಸಿದ್ಧಿಸುವುದು.

**೨. ಸತ್ಕವಿ ಎಂದರೆ ಯಾರು?:** ಸ್ವತಂತ್ರವಾದ ಕಾವ್ಯ ಸಾಮರ್ಥ್ಯ ಹೊಂದಿದ ಕವಿಯೇ ಸತ್ಕವಿ. ಸತ್ಕವಿಗೆ ವಿರುದ್ಧವಾದವನೇ ಕುಕವಿ. ಯಾರು ನಿಂದಿಸಿದರು ಕಾವ್ಯರಚನಾ ಕಾರ್ಯವನ್ನು ನಿಲ್ಲಿಸದವರು ಹಾಗೂ ಕಾವ್ಯರಹಸ್ಯವನ್ನರಿತ ಕವಿಗಳು ಮಾತ್ರ ಸತ್ಕವಿಗಳೆನಿಸಿಕೊಳ್ಳುತ್ತಾರೆ.

**೩.ಲಲಿತ ಪದ:** ಕಾವ್ಯ ಯಶಸ್ವಿಯಾಗಬೇಕಾದರೆ ಕವಿಯು ಲಲಿತ(ಸುಂದರ)ವಾದ ಪದಗಳನ್ನು ಬಳಸಬೇಕು. ಹಾಗೂ ಬಳಸುವ ಪದಗಳು ಶಬ್ದಾರ್ಥ ಸಹಿತವಾಗಿದ್ದು, ಓದುಗರಿಗೆ ರುಚಿಸು ವಂತೆ ರಚಿಸುವುದೇ ಲಲಿತ ಪದವಾಗಿದೆ.

**೪. ಪ್ರಸನ್ನ ಕವಿತಾ ಗುಣ:** ಕವಿಗಳ ಕಾವ್ಯ ಏನೋ ಹೇಳುತ್ತದೆ. ಕಾವ್ಯವು ಗುಣ, ಪ್ರಸನ್ನ, ಲಲಿತವಾಗಿರಬೇಕು. ಪ್ರಸನ್ನ ಎಂದರೆ 'ಉತ್ತಮವಾದ' ಉತ್ತಮೋತ್ತಮ ಕಾವ್ಯ ಗುಣವನ್ನು ಹೊಂದಿದ ಕೃತಿ ಸಮಾಜಕ್ಕೆ ಒಂದು ರೀತಿಯ ಸಂದೇಶವನ್ನು ಕೊಡುತ್ತದೆ. ಬಹಳ ಉತ್ತಮವಾದ ಕಾವ್ಯ ಸಾಮರ್ಥ್ಯವನ್ನು ಹೊಂದಿ ರಚನೆಯಾದ ಕಾವ್ಯವೇ ಪ್ರಸನ್ನ ಕವಿತಾ ಗುಣವಾಗಿದೆ. ಆ ಕಾವ್ಯವನ್ನು ಎಲ್ಲರೂ ಇಷ್ಟಪಡುತ್ತಾರೆ.

**ಕೃತಿಬಂಧ :** ಕೃತಿಗೆ ಒಂದು ಚೌಕಟ್ಟಿದೆ, ಆ ಚೌಕಟ್ಟಿನ ಪರಿಮಿತಿಯಲ್ಲಿಯೇ ಕಾವ್ಯ ರಚನೆಯಾಗಬೇಕು. ಅದರಲ್ಲಿ ಶಬ್ಧ, ಅರ್ಥ, ರಸ, ಧ್ವನಿ ಇತ್ಯಾದಿ ಗುಣಗಳಿರಬೇಕು. ಆ ಗುಣಗಳಿಂದ ಕೂಡಿರುವ ಕಾವ್ಯವೇ ಉತ್ತಮ ಕೃತಿಬಂಧವಾಗುತ್ತದೆ.

**ಮೃದುನುಡಿ :** ಕಾವ್ಯದ ಭಾಷೆ ಸರಳವಾಗಿರಬೇಕು. ಪಂಡಿತರಿಂದ ಪಾಮರರವರೆಗೂ ಕಾವ್ಯ ಅರ್ಥವಾಗಬೇಕಾದರೆ, ಕಾವ್ಯದಲ್ಲಿ ಅತ್ಯಂತ ಸುಂದರವಾದ, ಮೃದುವಾದ ಪದ ಪ್ರಯೋಗವನ್ನು ಕವಿಯಾದವನು ಮಾಡಬೇಕಾಗುತ್ತದೆ. ಇದೊಂದು ಕಾವ್ಯದ ಲಕ್ಷಣವಾಗಿದೆ.

**ಸಹಜಗುಣ :** ಕಾವ್ಯಶಕ್ತಿ ಅದೊಂದು ಸಹಜವಾದ ಗುಣ. ಕಾವ್ಯದಲ್ಲಿಯೂ ಸಹಜತೆ ಇರುವುದು ಕಾವ್ಯದ ಒಂದು ಲಕ್ಷಣ. ನಿಜವಾದ ಕವಿಯ ಕಾವ್ಯ ಸ್ವಾಭಾವಿಕವಾಗಿ, ಸುಂದರವಾಗಿರುತ್ತದೆ. ಸಹಜ ಗುಣವಿಲ್ಲದಾತನ ಕಾವ್ಯವು ಉಪ್ಪಿಲ್ಲದ ಊಟದಂತೆ ರುಚಿಸದು ಎಂದು ನಯಸೇನ ಹೇಳುತ್ತಾನೆ. ಹಾಗಾಗಿ ಕಾವ್ಯದಲ್ಲಿ ಸಹಜತೆಯೆಂಬುವುದು ಬಹು ಮುಖ್ಯವಾದುದು. ಅದು ಉದ್ದಾಮ ಕವಿಗಳಲ್ಲಿ ಮಾತ್ರ ಕಂಡುಬರುತ್ತದೆ.

ಇವೆಲ್ಲ ಕಾವ್ಯದ ಗುಣಲಕ್ಷಣಗಳು. ಇವುಗಳನ್ನು ಹೊರತುಪಡಿಸಿ ಕಾವ್ಯವನ್ನು ಚರ್ಚಿಸಲಾಗದು. ಕಾವ್ಯ ಸಾಮರ್ಥ್ಯ ಹೊಂದಿದ ಕವಿ ಈ ಎಲ್ಲ ಲಕ್ಷಣಗಳನ್ನು ಗಮನದಲ್ಲಿಟ್ಟುಕೊಂಡು ಮುಂದುವರಿದರೆ ಯಶಸ್ಸು ದೊರೆಯುವುದು ಖಂಡಿತ.

**ಅಡಿಟಿಪ್ಪಣಿಗಳು**

೧. ಮಹದೇವಯ್ಯ ಟಿ.ಆರ್., **ನಾಂದಿ,** ಪು.೨೬
೨. ಅದೇ, ಪು.೨೬
೩. ಅದೇ, ಪು.೨೭
೪. ಅದೇ, ಪು.೧೨
೫. ಶಿವರುದ್ರಪ್ಪ ಜಿ.ಎಸ್., **ಕನ್ನಡ ಕಾವ್ಯತತ್ವ ಚಿಂತನೆ,** ಪು.೧೨೨
೬. ಅದೇ, ಪು.೧೨೨
೭. ಮಹದೇವಯ್ಯ ಟಿ.ಆರ್., **ನಾಂದಿ,** ಪು.೨೮
೮. ಅದೇ, ಪು.೨೮

ಅಧ್ಯಾಯ ಮೂರು

# ನಾಂದಿ ಪದ್ಯಗಳಲ್ಲಿ ವ್ಯಕ್ತವಾಗುವ ಕವಿ–ಕಾವ್ಯ ಪರಂಪರೆ, ಪೂರ್ವ ಕವಿ ಸ್ಮರಣೆ

ಕನ್ನಡ ಕವಿಗಳು ಕಾವ್ಯದ ಪೀಠಿಕಾ ಪ್ರಕರಣಗಳಲ್ಲಿ ತಮಗಿಂತ ಹಿಂದಿನ ಅಥವಾ ಪ್ರಾಚೀನ ಕವಿಗಳನ್ನು ಸಂಪ್ರದಾಯವೆಂಬಂತೆ ಅತ್ಯಂತ ಗೌರವದಿಂದ ಸ್ಮರಿಸುತ್ತ ಬಂದಿರುವರು. ಜೊತೆಗೆ ಪೂರ್ವ ಕವಿಕೃತಿಗಳನ್ನು ಅಧ್ಯಯನ ಮಾಡುವುದರೊಂದಿಗೆ ಆ ಕೃತಿಗಳಿಗೆ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದ್ದಾರೆ. ಕನ್ನಡದ ಮೊದಲ ಕವಿ ಹಾಗೂ ಲಾಕ್ಷಣಿಕನಾದ ಕವಿರಾಜ ಮಾರ್ಗಕಾರನೇ 'ಪೂರ್ವಕಾವ್ಯ ರಚನೆಗಳಂ ಮೊದಲೊಳ್ ಕಲ್ತಂಗಲ್ಲದೆ ಪದದೊಳ್ ಜಾಣುಂ ಬೆಡಂಗುಂ ಅಕ್ಕುವೇ ಕೃತಿಯೊಳ್'(೧.೯) ಎಂದು ಸೂಚಿಸುತ್ತಾನೆ. "ಪೂರ್ವ ಕಾವ್ಯ ರಚನೆಗಳನ್ನು ಪರಿಚಯ ಮಾಡಿಕೊಳ್ಳುವುದು ಕಾವ್ಯಕ್ಕೆ ಅಗತ್ಯವಾದ ವ್ಯುತ್ಪತ್ತಿಯ ಒಂದಂಗ ಮಾತ್ರವಲ್ಲದೆ ಸಾಹಿತ್ಯ ಪರಂಪರೆಯೊಂದನ್ನು ಕುರಿತು ಕವಿಗಿರಬೇಕಾದ ಎಚ್ಚರವನ್ನು ಜವಾಬ್ದಾರಿಯನ್ನು ಅದು ಸೂಚಿಸುತ್ತದೆ. ಪೂರ್ವಕವಿ ಹಾಗೂ ಪೂರ್ವ ಕಾವ್ಯಗಳ ಸ್ಮರಣೆ ಮಾಡುವ ಕನ್ನಡ ಕವಿಗಳ ಕಾವ್ಯಾರಂಭ ಪದ್ಧತಿ ಸಂಸ್ಕೃತ ಕಾವ್ಯಗಳಲ್ಲಿ ಇಲ್ಲದ ಕನ್ನಡಕ್ಕೆ ವಿಶಿಷ್ಟವಾದ ಲಕ್ಷಣವಾಗಿದೆ. ಅಲ್ಲದೇ ಕವಿಗಳು ತಮ್ಮ ಕಾವ್ಯ ವಸ್ತುವಿಗೆ ಅನುಗುಣವಾಗಿ ತಮಗಿಂತ ಹಿಂದಿನ ಸಂಸ್ಕೃತ, ಪ್ರಾಕೃತ ಹಾಗೂ ಕನ್ನಡ ಕವಿಗಳನ್ನು ಸ್ಮರಿಸುವ ಕ್ರಮ ತಮಗೆ ಋಣದ ಗಣಿಯಾದ ಪರಂಪರೆಯ ಹರಹನ್ನು ಸೂಚಿಸುತ್ತದೆ."[೨] ಈ ಪೂರ್ವ ಕವಿಗಳನ್ನು ಸ್ಮರಣೆ ಮಾಡುವ ಪದ್ಧತಿಯ ಮೂಲಕ ಸಾಹಿತ್ಯ ಪರಂಪರೆಯಲ್ಲಿಯೇ ತಮ್ಮ ಕಾವ್ಯಕ್ರಿಯೆ ಮುಂದುವರಿದಿದೆ ಎಂಬ ಅರಿವು ಇರುವುದು ಸ್ಪಷ್ಟವಾಗುತ್ತದೆ.

ಪೂರ್ವಕವಿ ಸ್ಮರಣೆಯ ಸಂಪ್ರದಾಯದ ಮೂಲಕ ಕಾವ್ಯವನ್ನು ಆರಂಭಿಸುತ್ತಾರೆ. "ಹಿಂದಿನ ಪರಂಪರೆಯ ಬಗ್ಗೆ ಗೌರವ ತೋರಿಸುವಲ್ಲಿ ಮೂರು ವಿಶೇಷ ಅಂಶಗಳನ್ನು ನಾವು ಗುರುತಿಸಬಹುದು. ಒಂದು, ಹಿಂದಿನ ಕವಿಗಳ ಕಾವ್ಯದ ಒಳ್ಳೆಯ ಲಕ್ಷಣಗಳು ತಮ್ಮ ಕೃತಿಗಳಲ್ಲಿಯೂ ನೆಲಸಲಿ ಅಥವಾ ಅಂತರ್ಗತವಾಗಲಿ ಎಂಬ ಆಶಯ, ಎರಡು ಹೀಗೆ ಹಿಂದಿನ ಕವಿಗಳ ಕಾವ್ಯದ ಕೆಲವು ವಿಶೇಷ ಲಕ್ಷಣಗಳನ್ನು ಗುರುತಿಸುವುದರ ಮೂಲಕ ನಿಷ್ಪನ್ನವಾಗುವ ಪ್ರಾಥಮಿಕ ಹಂತದ ವಿಮರ್ಶನ ಮನೋಧರ್ಮ. ಮೂರು, ಹಿಂದಿನ ಕಾವ್ಯಪರಂಪರೆಯ ಬಗ್ಗೆ ಅರಿವು ಮತ್ತು ಗೌರವವಿದ್ದರೂ ತಾವು ಅದನ್ನು ಅನುಸರಿಸುವ ಅಥವಾ ಅನುಕರಿಸುವವರಾಗದೆ ಅದರಿಂದ ಬೇರೆಯಾದ ಕೃತಿ ನಿರ್ಮಿತಿಯಲ್ಲಿ ತಮ್ಮ ಸ್ವಂತಿಕೆಯನ್ನು ಪ್ರಕಟಿಸಬೇಕೆನ್ನುವ ಒಂದು ಎಚ್ಚರ"[೨] ಕವಿಗಳು ತಮಗಿಂತ ಹಿಂದಿನ ಕವಿಗಳನ್ನು ಸ್ಮರಿಸುವ ಮೂಲಕ ತಮ್ಮ ವಿನಯವನ್ನು ಪ್ರಸ್ತುತಪಡಿಸುತ್ತಾರೆ. ಕನ್ನಡದ ಮೊದಲ ಕವಿ ಪಂಪ "ವ್ಯಾಸ ಮುನಿಂದ್ರ ರುಂದ್ರ ವಚನಾಮೃತವಾರ್ಧಿಯನೀಸುವೆನ್, ಕವಿವ್ಯಾಸನೆನ್ ಎಂಬ ಗರ್ವಮೆನಗಿಲ್ಲ"(ಪಂ.ಭಾ.೧.೧೩) ಎಂಬ ಮಾತನ್ನು ಗಮನಿಸಿದರೆ ಕವಿ ವ್ಯಾಸನಿಂದ ಮಹಾಭಾರತದ ವಸ್ತುವನ್ನು ಆರಿಸಿಕೊಂಡಿರುವ ಪಂಪನು ವಿನಯಪೂರ್ವಕವಾಗಿಯೇ ಕವಿವ್ಯಾಸನೆಂಬ ಗರ್ವ ನನಗಿಲ್ಲವೆಂದು ಹೇಳಿಕೊಂಡಿದ್ದಾನೆ. ತನ್ನ ಕಥಾವಸ್ತುವಿಗೆ ಮೂಲನಾದ ವ್ಯಾಸಮಹರ್ಷಿಯನ್ನು ಸ್ಮರಿಸುತ್ತಲೇ, ತನ್ನ ಕಾವ್ಯವನ್ನು ಸಮಸ್ತ ಭಾರತ ತಂತ್ರದಲ್ಲಿ ನಿರೂಪಿಸುತ್ತೇನೆಂದು ಹೇಳಿರುವನು.

ಪಂಪನ ಈ ಪೂರ್ವ ಕವಿಸ್ಮರಣೆಯ ಸಂಪ್ರದಾಯ ಮುಂದಿನ ಕವಿಗಳಿಗೆ ಮಾರ್ಗ ವಾಯಿತು. ನಯಸೇನನು ತನ್ನ ಧರ್ಮಾಮೃತದಲ್ಲಿ

ಅಸಗನದೇಸೆ, ಪೊನ್ನದ ಮಹೋನ್ನತಿವೆತ್ತಬೆಡಂಗು
ಪಂಪನ ಒಂದು ಅಸದೃಶಮಪ್ಪ ರಸಂ।
ಗಜಾಂಕುಶನೊಳ್ಪುವೆತ್ತು ರಂಜಿಸುವಸದರ್ಥದೃಷ್ಟಿ
ಗುಣವರ್ಮನ ಜಾಣ್ ಕವಿರತ್ನನ ಓಜೆ.....॥

**(ಧರ್ಮಾಮೃತ ೧-೩೯)**

ನಯಸೇನನು ಹೇಳುವ ಈ ಎಲ್ಲಾ ಅಂಶಗಳು ತನ್ನ ಕಾವ್ಯದಲ್ಲಿ ನೆಲಸಲಿ ಎಂದು ಪ್ರಾರ್ಥಿಸಿದ್ದಾನೆ. 'ಅಸಗ'ನೆಂಬ ಕವಿಯಲ್ಲಿ ದೇಸಿಯತೆ, ಪೊನ್ನನಲ್ಲಿ ಬೆಡಗು, ಪಂಪನ ರಸಗಜಾಂಕುಶನ ಅರ್ಥದೃಷ್ಟಿ ಗುಣವರ್ಮನ ಜಾಣ್ ರನ್ನನ ಓಜೆ ಇವುಗಳು ತನ್ನ ಕಾವ್ಯ

ದಲ್ಲಿ ಬರಲಿ ಎನ್ನುವ ನಯಸೇನ ಪೂರ್ವಕವಿಗಳ ಕಾವ್ಯ ಲಕ್ಷಣಗಳನ್ನು ತಿಳಿದ ಕಾರಣ ಒಬ್ಬೊಬ್ಬ ಕವಿಯಲ್ಲೂ ಇರುವ ವಿಶೇಷ ಕಾವ್ಯ ಲಕ್ಷಣಗಳನ್ನು ತಿಳಿದುಕೊಳ್ಳಲು ಸಾಧ್ಯವಾಗಿದೆ. ಜನ್ನ ತನ್ನ 'ಅನಂತನಾಥ ಪುರಾಣ'ದಲ್ಲಿ

ಎನಗೆ ಅನುಕೂಲಮಕ್ಕೆ ಗುಣವರ್ಮನ ಜಾಣ್ಣುಡಿ
ಪಂಪನ ಇಂಪು, ಪೊನ್ನನ ಬಗೆ, ನಾಗವರ್ಮನ
ಬಹುಜ್ಞತೆ, ರನ್ನನ ಕಾಂತಿ, ನಾಗಚಂದ್ರನ ರಸಭಾವ
ಪುಷ್ಪಬಾಣನ ಮೃದುಬಂಧ

**(ಅನಂತನಾಥಪುರಾಣ ೧-೩೦)**

ಗುಣವರ್ಮನಲ್ಲಿ ಜಾಣ್ಣುಡಿಗಳಿವೆ ಎಂಬ ಅಂಶವನ್ನು ನಯಸೇನ ಮತ್ತು ಜನ್ನ ಕವಿ ಒಪ್ಪಿಕೊಂಡಿದ್ದಾರೆ. ಪಂಪನಲ್ಲಿ ಇಂಪು ಇದೆ. ರನ್ನನ ಕಾಂತಿ, ನಾಗಚಂದ್ರನ ರಸಭಾವ, ಪುಷ್ಪಬಾಣನ ಮೃದುವಾದ ರಚನೆಗಳು, ತನ್ನ ಕಾವ್ಯದಲ್ಲೂ ನೆಲಸಲಿ ಎನ್ನುತ್ತಾನೆ. ಕವಿ ಜನ್ನ ತನ್ನ ಇನ್ನೊಂದು ಕೃತಿಯಾದ 'ಯಶೋಧರ ಚರಿತೆ'ಯಲ್ಲಿ

ಕ್ಷಿತಿಯೊಳ್ ಸಂಸ್ಕೃತದಿನ್ ಪ್ರಾಕೃತದಿನ್
ಕನ್ನಡದಿನ್ ಆರಾರ್ ಈ ಕೃತಿಯಂ
ಕೃತಿಮಾಡಿದರ್ ಅವರ್ಗಳ ಸನ್ಮತಿ
ಕುಡುಗೆಮಗೆ ಸರಸಪದ್ಧತಿಯೊಳ್(೧-೫೭)

ಸಂಸ್ಕೃತ ಪ್ರಾಕೃತ ಮತ್ತು ಕನ್ನಡ ಈ ಮೂರು ಭಾಷೆಯ ಕವಿಗಳ ಸನ್ಮತಿ ತನಗೆ ಬರಲೆಂದು ಈ ಕೃತಿಯನ್ನು ಮೂಲದಲ್ಲಿ ಯಾವ ಯಾವ ಭಾಷೆಯ ಕವಿಗಳು ನಿರ್ವಹಿಸಿ ದ್ದಾರೆ ಅವರಿಗೆ ವಂದಿಸುತ್ತಾನೆ. ಹಾಗೂ ಅವರ ಸರಸ ಪದ್ದತಿ ತನ್ನ ಕಾವ್ಯಕ್ಕೆ ಬರಲಿ ಎನ್ನುತ್ತಾನೆ.

ಪೂರ್ವಕವಿ ಸ್ಮರಣೆಯ ಈ ಕ್ರಮದಲ್ಲಿ ಮೂರು ಪ್ರಕಾರಗಳನು ಗುರುತಿಸಬಹುದು. ತಾವು "ತಾವು ಕಾವ್ಯ ನಿರ್ಮಿತಿಗೆ ಆರಿಸಿಕೊಂಡ ಮತ್ತು ವಸ್ತುವಿಗೆ ಸಂಬಂಧಿಸಿದಂತೆ ಕನ್ನಡ ಹಾಗೂ ಕನ್ನಡೇತರ ಸಾಹಿತ್ಯ ಸಂಪ್ರದಾಯದ ಕವಿಗಳನ್ನು ಸ್ಮರಿಸುವುದು ಪಂಪ, ರನ್ನ ಹಾಗೂ ಕುಮಾರವ್ಯಾಸಾದಿಗಳು ಮೂಲ ಮಹಾಭಾರತದಿಂದಲೇ ಕಾವ್ಯವಸ್ತುವನ್ನು ಆರಿಸಿಕೊಮಡಿರುವುದರಿಂದ ಸಹಜವಾಗಿಯೇ ವೇದವ್ಯಾಸರನ್ನು ಗೌರವದಿಂದ ಸ್ಮರಿಸಿದ್ದಾರೆ.

ಹಾಗೂ ತಮ್ಮ ಮೇಲೆ ಪ್ರಭಾವಬೀರಿದ ಸಂಸ್ಕೃತ ಕವಿಗಳಾದ ಭಟ್ಟನಾರಾಯಣ ಹಾಗೂ ಬಾಣ ಹಾಗೂ ಕಾಳಿದಾಸನಿಗೆ ಋಣಿಯಾಗಿರುವೆನೆಂದು ಸ್ಮರಿಸುತ್ತಾನೆ.

ಕುಮಾರವ್ಯಾಸನು ಸಂಸ್ಕೃತದ ವೇದವ್ಯಾಸರಿಂದ ಪ್ರಭಾವಿತನಾಗಿ ತನ್ನನ್ನು ಕುಮಾರವ್ಯಾಸನೆಂದು ಕರೆದುಕೊಂಡ. ವ್ಯಾಸ ಭಾರತದ ಪ್ರಭಾವ ಕುಮಾರವ್ಯಾಸನ ಮೇಲಾಗಿದೆ. ಹಾಗಾಗಿ "ಕರ್ಣಾಟ ಭಾರತ ಕಥಾ ಮಂಜರಿ" ಎಂಬ ಕುಮಾರವ್ಯಾಸನ ಕಾವ್ಯ ಕುಮಾರವ್ಯಾಸ ಭಾರತವೆಂದೇ ಪ್ರಸಿದ್ಧವಾಗಿದೆ. ತನ್ನನ್ನು ವ್ಯಾಸನ ಮಗನೆಂದು ಕರೆದುಕೊಂಡ, ಕುಮಾರವ್ಯಾಸನ ಪೂರ್ವಕವಿ ಸ್ತುತಿ ಈ ರೀತಿಯಾಗಿದೆ.

ದುರಿತ ಕುಲಗಿರಿ ವಜ್ರದಂಡನು
ಧರೆಯ ಜಂಗಮ ಮೂರ್ತಿ ಕವಿವಾ
ರಿರುಹ ದಿನಮಣಿ ನಿಖಿಲ ಯತಿಪತಿ ದಿವಿಜ
ವಂದಿಪನು ತರಳನನು ತನ್ನವನೆನುತ
ಪತಿಕರಿಸಿ ಮಗನೆಂದೊಲಿದು ಕರುಣದಿ
ವರವನಿತ್ತನು ದೇವ ವೇದವ್ಯಾಸ ಗುರುರಾಯ

**ಕುಮಾರವ್ಯಾಸ ಭಾರತ(೧.೧೧)**

ಕುಮಾರವ್ಯಾಸನು ಕವಿ ವ್ಯಾಸನನ್ನು ಸ್ತುತಿಸುವಾಗ ವಿಶೇಷವಾದ ಪದಗಳನ್ನು ಬಳಸುತ್ತಾನೆ. ಶ್ರೇಷ್ಠ ಪರ್ವತಕ್ಕೆ ವಜ್ರದಂತಿರುವ, ಸೂರ್ಯನಂತೆ ಪ್ರಕಾಶಮಾನನಾದ ಭೂಮಿಗೆ ಜಂಗಮ ಮೂರ್ತಿಯಾದ, ಸಮಸ್ತ ಯತಿಗಳಲ್ಲಿ ಶ್ರೇಷ್ಠನಾದ ದೇವತೆಗಳಿಂದ ವಂದಿಸಿಕೊಳ್ಳುವ ವ್ಯಾಸ ಮಹರ್ಷಿಯು ಬಾಲಕನೆಂದು ತನಗೆ ಒಲಿದು ಹಾಗೂ ನನ್ನನ್ನು ತನ್ನ ಮಗನೆಂದು ವರವನ್ನು ಕೊಟ್ಟನೆಂದು ಹೇಳಿರುವನು. ಈ ಹೇಳಿಕೆಯಲ್ಲಿ ಕವಿಯ ವಿನಯ ಹಾಗೂ ವಿಧೇಯತೆಗಳು ವ್ಯಕ್ತವಾಗಿವೆ.

ಕನ್ನಡದ ಹೆಸರಾಂತ ಕವಿ ಹಾಗೂ ವಾಗ್ದೇವಿಯ ಭಂಡಾರದ ಮುದ್ರೆಯನ್ನೊಡೆದ ಕವಿಯೆಂದೇ ಖ್ಯಾತನಾದ ಕವಿ ರನ್ನನು ವ್ಯಾಸರನ್ನು, ವಾಲ್ಮಿಕಿ, ಕಾಳಿದಾಸ ಹಾಗೂ ಬಾಣಭಟ್ಟರಂತಹ ಸಂಸ್ಕೃತದ ಪ್ರಸಿದ್ಧ ಕವಿಗಳನ್ನು ಸ್ಮರಿಸುತ್ತಾನೆ.

ನೆಗಟ್ಟುದು ರಾಮಾಯಣಮುಂ
ನೆಗಟ್ಟುದು ಭಾರತಮುಮಾ ಮಹಾಕವಿಗಳಿನಾ
ನೆಗಟ್ಟಿರ್ ವ್ಯಾಸರ್ ವಾಲ್ಮೀ
ಕಿಗಳೆನೆ ನೆಗಟ್ಟುಭಯಕವಿಗಳೆಮಗಭಿವಂದ್ಯರ್

**ಗದಾಯುದ್ಧ(೧.೮)**

ಈ ಪದ್ಯದ ಪ್ರಾರಂಭದಲ್ಲಿ ರಾಮಾಯಣ ಮತ್ತು ಮಹಾಭಾಌತ ಮಹಾಕಾವ್ಯಗಳನ್ನು ಹೆಸರಿಸುತ್ತ ಈ ಮಹಾಕಾವ್ಯಗಳನ್ನು ಬರೆದು ಮಹಾಕವಿಗಳಲೆನಿಸಿದ ವ್ಯಾಸರನು ಹಾಗೂ ವಾಲ್ಮೀಕಿಯನ್ನು ವಂದಿಸುವೆ ಎಂದಿರುವನು. ಕನ್ನಡ ಕವಿಗಳು ಸಂಸ್ಕೃತ ಕಾವ್ಯಗಳಿಂದ ಹಾಗೂ ಕವಿಗಳಿಂದ ಪ್ರಭಾವಿತರಾದ ಕಾರಣ ಮೊದಲು ಸಂಸ್ಕೃತ ಕವಿಗಳನ್ನು ಮತ್ತು ಅವರ ಕಾವ್ಯಗಳನ್ನು ಸ್ಮರಿಸುತ್ತಾರೆ. ತದನಂತರದಲ್ಲಿ ಕನ್ನಡ ಕವಿಗಳನ್ನು ಸ್ಮರಿಸಿರುವ ನಿದರ್ಶನಗಳಿವೆ.

ಮೃದುಪದ್ಯ ರಚನೆಯತೊಳ್ ಕಾ
ಳಿದಾಸನುಂ ಗದ್ಯರಚನೆಯೊಳ್ ಬಾಣನುಮಂ
ಕದ ಕವಿಗಳೆನಿಸಿ ನೆಗಟ್ದಿ
ಮದಟೆಂ ಸತ್ಕವಿಗಳಿರ್ವರೆಮಭಿವ್ಯಂದರ್

**ಗದಾಯುದ್ಧ(೧.೯)**

ಮೇಲಿನ ಪದ್ಯದಲ್ಲಿಯೂ ಸಂಸ್ಕೃತ ಕವಿಗಳನ್ನು ಸ್ಮರಿಸುತ್ತಾನೆ. ಮೃದುವಾದ ಪದ್ಯರಚನೆ ಮಾಡುವಲ್ಲಿ ಕಾಳಿದಾಸನು, ಗದ್ಯರಚನೆಯಲ್ಲಿ ಬಾಣಭಟ್ಟನು, ಹೆಸರಾಂತ ಕವಿಗಳು ಆದ್ದರಿಂದ ಈ ಈರ್ವರು ಕವಿಗಳಿಗೆ ವಂದಿಸುವೆನೆಂದಿರುವನು. ಇದರಿಂದ ಕಾಳಿದಾಸನ ಕಾವ್ಯದಲ್ಲಿ ಮೃದುವಾದ ಪದ್ಯಗಳಿವೆ ಎಂದು ತಿಳಿದುಬರುತ್ತದೆ. ಬಾಣ ಮತ್ತು ಕಾಳಿದಾಸ ಭೋಜರಾಜನ ಆಸ್ಥಾನದ ಪ್ರಸಿದ್ದ ಕವಿಗಳು. ಕಾಳಿದಾಸ ಪದ್ಯರಚನೆಯಲ್ಲಿ ಪ್ರಸಿದ್ಧನಾದಂತೆ ಬಾಣನು ಗದ್ಯರೂಪದ ಕಾದಂಬರಿಯನ್ನು ಬರೆದು ಪ್ರಸಿದ್ಧನಾಗಿರುವನು.

ರನ್ನನು ಜನಾಂಗೀಯ ಪುರಾತನ ಮಹಾಕಾವ್ಯಗಳನ್ನು(Epic) ಬರೆದ ವಾಲ್ಮೀಕಿ ವ್ಯಾಸರನ್ನು ಮಹಾಕವಿಗಳೆಂದು ಕರೆದು ಕಾಳಿದಾಸ ಬಾಣಭಟ್ಟರು ಸತ್ಕವಿಗಳು ಹಾಗೂ ಅಂಕದಕವಿಗಳೆಂದು ಕರೆದಿರುವುದು ಗಮನಾರ್ಹವಾಗಿದೆ.

ರನ್ನನು ಕನ್ನಡ ಕವಿಗಳನ್ನು ನೆನೆಯುತ್ತ ಪಂಪನು, ಪೊನ್ನಿಗನು ಮತ್ತು ತಾನು ಈ ಮೂವರೆ ರತ್ನತ್ರಯರೆಂದು ಅಭಿಮಾನದಿಂದ ಹೇಳಿಕೊಂಡಿರುವನು. ಹಾಗೂ ತಮ್ಮ ಕಾವ್ಯಗಳಾದ ಆದಿಪುರಾಣ(ಪಂಪ), ಶಾಂತಿಪುರಾಣ(ಪೊನ್ನ), ಅಜಿತಪುರಾಣ(ರನ್ನ) ಈ ಮೂರು ಪುರಾಣಗಳ ಸಾಲಿಗೆ ಬೇರೆ ಪುರಾಣಗಳು ಬರಲಾರವೆಂಬ ಭಾವನೆ ಅವನಲ್ಲಿ ಪ್ರಬಲವಾಗಿದೆ. ಅದರಲ್ಲಿಯು ಪಂಪ ಮತ್ತು ತಾನು ತುಂಬಾ ಭಾಗ್ಯವಂತರೆಂಬ ಭಾವನೆ ರನ್ನನದಾಗಿದೆ.

ಪಂಪ ಮತ್ತು ರನ್ನರಂತೆಯೇ ಪೊನ್ನನು ಶಾಂತಿಪುರಾಣದಲ್ಲಿ ಕನ್ನಡ ಮತ್ತು ಸಂಸ್ಕೃತ ಭಾಷೆಯ ಕವಿಗಳನ್ನು ಸ್ಮರಿಸುತ್ತಾನೆ.

ಕನ್ನಡಗವಿತೆಯೊಳಸಗಂ
ಗನ್ನೊರ್ಮಡಿ ರೇಖೆಗಗ್ಗಳಂ ಸಕ್ಕದದೊಳ್
ಮುನ್ನುಳ ಕಾಳಿದಾಸಂ
ಗನ್ನಾಲ್ವಡಿ ರಚನೆಯೊಳ್ ಕುರುಳ್ಗಳ ಸವಣಂ

**ಶಾಂತಿಪುರಾಣ(೧.೫)**

ಪಂಪರನ್ನರು ಮೊದಲು ಸಂಸ್ಕೃತ ಕವಿಗಳನ್ನು ನೆನೆದರೆ, ಪೊನ್ನ ತನಗಿಂತ ಪೂರ್ವದ ಕನ್ನಡ ಕವಿ ಅಸಗನಿಗಿಂತ ಮೂರುಪಟ್ಟು ಹಾಗೂ ಸಂಸ್ಕೃತದ ಕಾಳಿದಾಸನಿಗೆ ನಾಲ್ಕು ಪಟ್ಟು ಮಿಗಿಲು ಎಂದು ಆತ್ಮಪ್ರಸಂಸೆ ಮತ್ತು ಪೂರ್ವಕವಿ ಸ್ಮರಣೆಯನ್ನು ಏಕಕಾಲಕ್ಕೆ ಮಾಡುತ್ತಾನೆ. ಪೊನ್ನನು ತನ್ನನ್ನು 'ಕುರುಳ್ಗಳ ಸವಣ'ನೆಂದು ಕರೆದಿರುವುದು ಆತ ಸನ್ಯಾಸಿಯಾಗಿದ್ದನೆಂದು ತೋರುತ್ತದೆ. ಏಕೆಂದರೆ ಜೈನರು ಸವಣನೆಂದು ಸನ್ಯಾಸಿಗಳನ್ನು ಮಾತ್ರ ಕರೆಯುತ್ತಾರೆ.

ಎರಡನೆಯದಾಗಿ ಪೂರ್ವಕವಿ ಸ್ಮರಣೆಯಲ್ಲಿ "ಕನ್ನಡದಲ್ಲಿ ಕೃತಿ ರಚನೆ ಮಾಡುವ ಕವಿಗಳು ತಮಗಿಂತ ಹಿಂದೆ ಕೃತಿಕಾರರಾಗಿದ್ದ ಕನ್ನಡ ಕವಿಗಳನ್ನು ನೆನೆಯುವುದು. ಈ ಹಂತದ ವಿಶೇಷವೇನೆಂದರೆ ಆಯಾ ಧರ್ಮದ ಕವಿಗಳು ತಮಗಿಂತ ಆಯಾ ಧರ್ಮಕ್ಕೆ ಸೇರಿದ ಪೂರ್ವಕವಿಗಳನ್ನೇ ಸ್ಮರಿಸುತ್ತಾರೆ. ಈ ಧೋರಣೆ ಹನ್ನೆರಡನೇ ಶತಮಾನದ ನಂತರ ಇನ್ನೂ ಎದ್ದು ಕಾಣುತ್ತದೆ. ಯಾವ ಜೈನ ಕವಿಯು ವೀರಶೈವ ಕವಿಗಳನ್ನಾಗಲಿ, ವೈಷ್ಣವ ಕವಿಗಳನ್ನಾಗಲಿ, ವೀರಶೈವ ಕವಿಯು, ತನಗಿಂತ ಹಿಂದಿನ ಜೈನ ಹಾಗೂ ವೈಷ್ಣವ ಕವಿ ಕವಿಗಳನ್ನು ಸ್ಮರಿಸುವುದಿಲ್ಲ. ಹಾಗೂ ಯಾವ ವೈದಿಕ ಕವಿಯು ಜೈನ ಹಾಗೂ ವೀರಶೈವ ಕವಿಗಳನ್ನು ಸ್ಮರಿಸುವುದಿಲ್ಲ. ರುದ್ರಭಟ್ಟನೊಬ್ಬನನ್ನು ಹೊರತುಪಡಿಸಿ."[೩]

ಸ್ತುತಿಗೆಯ್ವೆಂ ಕೃತಿ ಪಂಚಮಶ್ರುತಿ ಪುರಾಣವ್ಯಾಸನಂ
ವಾಸನಂ ಕೃತಿಲೋಕ ಶ್ರುತಿ ಪೂರ ಕಲ್ಪಕವಿತಾಗೀ
ರ್ಬಾಣನಂ ಚತುರೋಕ್ತಿ ಪ್ರಚುರಾರ್ಥ ಕಾವ್ಯ
ಜನಿತೋರ್ವಿ ಹರ್ಷನಂ ಹರ್ಷನಂ
ಶತಪತ್ರಾಕ್ಷ ಕಥಾಮೃತಬುಧಸ್ತೋಮಾಘನಂ ಮಾಘನಂ

**ಜಗನ್ನಾಥ ವಿಜಯಂ-ರುದ್ರಭಟ್ಟ(೧.೮)**

ಪಂಚಮಶ್ರುತಿ ಎನಿಸಿದ ಪುರಾಣ ಕಾವ್ಯವನ್ನು ರಚಿಸಿದ ವ್ಯಾಸರನ್ನು ಬಾಣ, ಹರ್ಷ ಮಾಘ ಇತ್ಯಾದಿ ಸಂಸ್ಕೃತ ಕವಿಗಳನ್ನು ಸ್ಮರಿಸುತ್ತಾನೆ. ನಂತರ ಇನ್ನೊಂದು ಪದ್ಯದಲ್ಲಿ ಕಾಳಿದಾಸನೊಬ್ಬನನ್ನೆ ಸ್ಮರಿಸುತ್ತಾನೆ. ಈ ಪದ್ಯದಲ್ಲಿ ಕವಿ ರುದ್ರಭಟ್ಟನು ಪೂರ್ವ ಕವಿಗಳನ್ನು ಎರಡೆರಡು ಸಾರಿ ಸ್ತುತಿಸಿದ್ದಾನೆ.

ಸುಕವಿಜನ ಗಣನೆಯೊಳ್ ದ।
ತ್ತಕ ನಿಷ್ಕಕನಾಗೆ ಕಾಳಿದಾಸಂ ಮೊದಲೆಂ
ದು ಕರಂ ಬಣ್ಣಿಪರದಜೆಂ
ದೆ ಕಾಳಿದಾಸಂಗೆ ದಾಸರೆನಿಪರ್ ಕವಿಗಳ್

**ಜಗನ್ನಾಥ ವಿಜಯ-ರುದ್ರಭಟ್ಟ**(೧.೯)

ಸಂಸ್ಕೃತದ ಕವಿಯಾದ ಕಾಳಿದಾಸ ಕವಿಗಳಲ್ಲಿಯೇ ಶ್ರೇಷ್ಠ ಕವಿಯಾಗಿದ್ದಾನೆ. ಆದ್ದರಿಂದ ಉಳಿದ ಕವಿಗಳು ಕಾಳಿದಾಸನಿಗೆ ದಾಸರೆನಿಸಿದ್ದಾರೆ. ಎಂದು ವರ್ಣಿಸಿದ್ದಾನೆ.

ಇನಿತುಮವಿರ್ಕೆ ಮತ್ಕೃತಿಯೊಳೀಧರೆ ಬಣ್ಣಿಸೆ॥
ಸಂದ ಶಂಖವರ್ಮನ ಬಗೆ ಶಾಂತಿವರ್ಮನ
ನಯಂ ಗುಣವರ್ಮನ ಬಂಧ ಗೌರವಂ॥
ಮನಸಿಜನೋಜೆ ಕಣ್ಣಮಯ್ಯನ ಜಾಣ್ನುಡಿ
ಪಂಪನ ರೀತಿ ಚಂದ್ರಭಟ್ಟನ ಜತಿ ಪೊನ್ನಮಯ್ಯನ
ಬೆಡಂಗು ಗಜಾಂಕುಶನುಳ್ಳ ಬಿನ್ನಣಂ

**ಜಗನ್ನಾಥ ವಿಜಯ**(೧.೧೦)

ಪೂರ್ವಕವಿ ಸ್ಮರಣೆಯಲ್ಲಿ ಪ್ರತಿಯೊಬ್ಬ ಕವಿಯ ರಚನಾ ಕೌಶಲವನ್ನು ಕುರಿತು ಹೊಗಳುವುದು ಒಂದು ವಿಶಿಷ್ಟತೆಯಾಗಿದೆ. ಈ ಕ್ರಮ ರುದ್ರಭಟ್ಟನಲ್ಲೂ ಇದೆ. ಶಂಖವರ್ಮನ ಬಗೆ, ಶಾಂತಿವರ್ಮನ ನಯಗಾರಿಕೆ, ಗುಣವರ್ಮನ ಕಾವ್ಯರಚನಾ ಕೌಶಲ, ಮನಸಿಜನ ಓಜೆ, ಕಣ್ಣಮಯ್ಯನ ಜಾಣ್ನುಡಿ, ಪಂಪನ ರೀತಿ, ಚಂದ್ರಭಟ್ಟನ ಜತಿ, ಪೊನ್ನಮಯ್ಯನ ಕಾವ್ಯದ ಬೆಡಗು ಹಾಗೂ ಗಜಾಂಕುಶನ ಬಿನ್ನಣ ಈ ಎಲ್ಲ ಕಾವ್ಯಲಕ್ಷಣಗಳು ತನ್ನ ಕೃತಿಯಲ್ಲಿವೆ ಎಂದು ಹೇಳಿರುವನು. ಈ ಪದ್ಯದಲ್ಲಿ ಪೂರ್ವದ ಸತ್ಕವಿಗಳು ಹಾಗೂ ಅವರ ಕಾವ್ಯ ಲಕ್ಷಣಗಳನ್ನು ಸ್ಮರಿಸುವುದರ ಜತೆಗೆ ತನ್ನ ಕಾವ್ಯ ಪ್ರಶಂಸೆಯನ್ನು ಮಾಡಿಕೊಂಡಿರುವನು.

ಸಂಸ್ಕೃತ ಜೈಮಿನಿ ಭಾರತದಿಂದ ಪ್ರಭಾವಿತನಾದ ಕವಿ ಲಕ್ಷ್ಮೀಶನು ತನ್ನ ಕಾವ್ಯ ಕನ್ನಡ ಕಾವ್ಯವಾಗಿದ್ದರೂ ಅದಕ್ಕೆ ಜೈಮಿನಿ ಕವಿಯ ಹೆಸರನ್ನೆ ಇಟ್ಟು ಜೈಮಿನಿ ಭಾರತವೆಂದು ಕರೆದಿದ್ದಾನೆ. (ಕುಮಾರವ್ಯಾಸ ಭಾರತದಂತೆ) ಕನ್ನಡ ಕವಿಗಳು ಸಂಸ್ಕೃತ ಕವಿಗಳನ್ನು ಸ್ಮರಿಸದೆ ಕಾವ್ಯ ರಚಿಸುವುದೇ ಇಲ್ಲವೆಂಬಂತೆ ಸಂಸ್ಕೃತ ಕವಿಗಳ ಪ್ರಭಾವ ಕನ್ನಡ ಕವಿಗಳ ಮೇಲೆ ಆಗಾಧವಾಗಿದೆ. ಲಕ್ಷ್ಮೀಶನು ಪೂರ್ವದ ಸತ್ಕವಿಗಳನ್ನು ಸ್ತುತಿಸುತ್ತ ಮೊದಲು ಕಾವ್ಯಗಳನ್ನು ರಚಿಸಿದ ಸತ್ಕವಿಗಳಿಗೆ ವಂದಿಸಿ ನನ್ನ ಕೃತಿಯನ್ನು ರಚಿಸುವೆ ಎಂದು ಜೈಮಿನಿ ಭಾರತದ ಪೀಠಿಕಾ ಪ್ರಕರಣದ ಹತ್ತರ್ನೇ ಪದ್ಯದಲ್ಲಿ ಹೇಳುತ್ತಾನೆ.

ಮೊಗಮಾವ ಲೀಲೆಯಿಂದೆಸುವುದಾ ಭಾವಮಂ
ಮಗುಳೆ ತೋರುವುದಿಲ್ಲದನ್ಯ ಪ್ರಕಾರದಿಂ
ಸೊಗಯಿಪುದೆ ರನ್ನಗನ್ನಡಿ ಧರೆಯೊಳಾರಾಜಿಸುವ ಕನ್ನಡ ನುಡಿಗಳ॥
ಬಗೆಯರಿದವರಾವ ಲಕ್ಷಣದಿಂದ ಮುನ್ನಕೃ
ಬ್ಬಗಳನುಸುರಿದರದೇ ಲಕ್ಷಮಲ್ಲದೆ ಪೆಱತೆ
ನಗೆ ಸಲ್ಲದದರಿಂದ ಪೂರ್ವಕವಿಗಳ್ಗೆ ನಮಿಸಿನಾಂ ಕೃತಿಮೇಐಳ್ವೆನು॥

**ಜೈಮಿನಿ ಭಾರತ**(೧.೧೦)

ಲಕ್ಷ್ಮೀಶನು ಸಂಸ್ಕೃತದ ಕವಿ-ಕಾವ್ಯದಿಂದ ಪ್ರಭಾವಿತನಾಗಿದ್ದರೂ, ಕನ್ನಡದ ಪದಗಳೇ ರತ್ನಗನ್ನಡಿಯಂತೆ ಈ ಮೊದಲು ರಚಿಸಿದ ಕನ್ನಡ ಕಾವ್ಯಗಳೇ ಕವಿಗಳಿಗೆ ನಿದರ್ಶನ(ಲಕ್ಷ್ಯ)ಗಳು ಆದ್ದರಿಂದ ಪೂರ್ವಕವಿಗಳಿಗೆ ವಂದಿಸಿ ನಾನು ಕೃತಿಯನ್ನು ರಚಿಸುವೆನೆಂದು ಹೇಳಿಕೊಂಡಿರುವನು. ಹಾಗೂ ಭೂಮಿಯ ಮೇಲೆ ರಾರಾಜಿಸುತ್ತಿರುವ ಕನ್ನಡ ಪದಗಳನ್ನು ಬಳಸಿ ಯಾವ ಲಕ್ಷಣದಿಂದ ಕಾವ್ಯ ರಚಿಸಿದ್ದರೂ ಆ ಸತ್ಕವಿಗಳಿಗೆ ಮೊದಲು ವಂದಿಸಿ ಕೃತಿ ಬರೆಯು ವೆನೆಂದಿರುವನು.

ಈ ರೀತಿಯ ಪೂರ್ವಕವಿ ಸ್ತುತಿಗಳಿಂದ ಕನ್ನಡ ಸಾಹಿತ್ಯ ಚರಿತ್ರೆ ರಚಿಸುವವರಿಗೆ ಕವಿಗಳ ಕಾಲ ದೇಶ ನಿರ್ಣಯ ಮಾಡಲು ಸುಲಭ ಸಾಧ್ಯವಾಗುತ್ತದೆ. "ಅಂದಂದಿನ ಕವಿಗಳು ತಮಗಿಂತ ಹಿಂದಿನ ಕವಿಗಳ ಕಾವ್ಯದೊಳಗಿನ ವಿಶಿಷ್ಟ ಲಕ್ಷಣಗಳನ್ನು ಗುರುತಿಸಬಲ್ಲ ವರಾಗಿದ್ದರು ಎಂಬುದನ್ನು ಸೂಚಿಸುತ್ತದೆ. ಆದರೆ ಈ ಗುರುತಿಸುವಿಕೆಯಿಂದ, ಮುಂದಿನ ಕವಿಗಳು ಹಿಂದಿನ ಆ ಕವಿ ಕೃತಿಗಳನ್ನು ಅಧ್ಯಯನ ಮಾಡಿದ್ದರೆಂದು ನಾವು ಊಹಿಸ ಬಹುದಾದರೂ ಎಷ್ಟೋ ಸಲ ಇದೂ ಒಂದು ಸಂಪ್ರದಾಯ ಪಾಲನೆಯ ಅಂಗವಾಗಿರಬಹುದೆಂಬ ಗುಮಾನಿಯನ್ನು ತಳ್ಳಿ ಹಾಕುವಂತಿಲ್ಲ. ಮತ್ತು ಹಿಂದಿನ ಕವಿಗಳಲ್ಲಿ ಅವರವರ ಕಾವ್ಯದ

ವಿಶಿಷ್ಟ ಗುಣಗಳೆಂದು ಎತ್ತಿ ತೋರಿಸುವ ವಿಶೇಷಣಗಳು, ನಿಜವಾದ ಯೋಜನೆಯ ಪರಿಣಾಮಗಳಾಗಿರುವ ಬದಲು ಕೇವಲ ಭಾವನೆಯ ಫಲಗಳೂ ಆಗಿರಬಹುದು. ಕೆಲವರು ಪಂಪನ ಕಾವ್ಯದ ಇಂಪನ್ನು ಹೇಳಿದರೆ, ಕೆಲವರು ಪಂಪನ ದೇಸಿಯನ್ನು, ಮತ್ತೆ ಕೆಲವರು ಅವನ ಅಪೂರ್ವವಾದ ರಸವನ್ನು ಕುರಿತು ಹೇಳುತ್ತಾರೆ. ನಿಜ, ಪಂಪನ ಕೃತಿಯಲ್ಲಿ ಈ ಎಲ್ಲ ಲಕ್ಷಣಗಳೂ ಇದೆ. ಆದರೆ ಒಬ್ಬ ಕವಿ ಪೊನ್ನನ ಮಹೋನ್ನತಿವೆತ್ತ ಬೆಡಂಗು' ಎಂದಾಗ ಅಲ್ಲಿ ಅದು ಅನುಮಾನಕ್ಕೆ ಎಡೆ ಕೊಡುತ್ತದೆ. ಇದು ಇತರರ ಕಾವ್ಯವನ್ನು ಕುರಿತ ಮಾತಾದರೆ, ಅನೇಕರು ತಮ್ಮ ಕಾವ್ಯಗಳ ಲಕ್ಷಣಗಳನ್ನು ಕುರಿತು ತಾವೇ ಹೇಳಿಕೊಳ್ಳುತ್ತಾರೆ. ಇಂಥ ಹೇಳಿಕೆಗಳಲ್ಲಿ ನಿಜವಾದ ಆತ್ಮಪ್ರತ್ಯಯದ ಮಾತುಗಳಿರುವಂತೆಯೇ ತೀರಾ ಪೊಳ್ಳಾದ ಮಾತುಗಳೂ ಇವೆ. ಪಂಪ, ರನ್ನ, ಕುಮಾರವ್ಯಾಸರಂಥವರ ಅಗ್ಗಳಿಕೆಯ ಉಕ್ತಿಗಳ ಜತೆಗೆ 'ಕಾಳಿದಾಸಂಗನೂರ್ಮಡಿ' ಎಂದ ಪೊನ್ನನ ಉಕ್ತಿಯನ್ನು ಹೋಲಿಸಿ ನೋಡಬಹುದು.[೪]

ಕವಿರಾಜಮಾರ್ಗಕಾರನು ಪೂರ್ವಕವಿಗಳನ್ನು ಪ್ರಶಂಸಿಸುತ್ತ–

ಪರಮ ಅಲಂಕಾರೋಚಿತ
ವಿರಚನೆಗಳ್ ನೆಗಟ್ಟುಂ
ಮಾರ ಪದನ ಉದರದೊಳ್
ನೆರಮಕ್ಕಾ, ಪರಮ ಕವೀಶ್ವರ
ಎಮಗೆ ಈ ಕೃತಿಯೊಳ್
ಕೃತಂ ಆಚಾರಪರರ್

**ಕವಿರಾಜಮಾರ್ಗ(೧.೪)**

ಅಂದರೆ ಯಾರ ಮುಖದಿಂದ ಹೊರಬಂದ ಪದಗಳು ಉತ್ತಮ ಅಲಂಕಾರಗಳಿಂದ ಕೂಡಿರುವವೋ, ಅಂತಹ ಶ್ರೇಷ್ಠ ಹಾಗೂ ಸಂಪನ್ನರಾದ ಕವಿಗಳು ಅಥವಾ ಕವೀಶ್ವರರು ಈ ಕೃತಿ ರಚನೆಗೆ ನೆರವಾಗಲಿ ಹಾಗೂ ಪೂರ್ವಕವಿಗಳು ಹಾಕಿದ ಮಾರ್ಗದಲ್ಲೆ ಕೃತಿ ರಚನೆಯಾಗಿದೆ ಎನ್ನುತ್ತಾನೆ. ಈ ಪದ್ಯದಲ್ಲಿ 'ಕವೀಶ್ವರ' ಎಂಬ ಪದ ಬರುತ್ತದೆ. ಪೂರ್ವ ಕವಿಗಳನ್ನು ಶಿವನಿಗೆ(ಈಶ್ವರ) ಸಮಾನಾರ್ಥಕವಾಗಿ ಸಂಭೋಧನೆ ಮಾಡಿರುವುದು ಉಚಿತವಾಗಿದೆ.

ಇನ್ನು ವೀರಶೈವ ಸಾಹಿತ್ಯ ಸಂದರ್ಭದಲ್ಲಿ ವೀರಶೈವ ಕವಿಗಳು ಹರಿಹರ ರಾಘ ವಾಂಕಾದಿ ಕವಿಗಳನ್ನು ಸ್ಮರಿಸುವುದರ ಜತೆಗೆ ಬಸವ, ಅಲ್ಲಮ, ಅಕ್ಕಮಹಾದೇವಿ, ಚನ್ನಬಸವ,

ಸಿದ್ದರಾಮರಂಥ ಶರಣ, ಶರಣೆಯರನ್ನು ಸ್ಮರಿಸಿದ್ದಾರೆ. ಚಾಮರಸನು ಅಲ್ಲಮಪ್ರಭುದೇವರ ಸ್ತುತಿಯೊಂದಿಗೆ ತನ್ನ ಪ್ರಭುಲಿಂಗ ಲೀಲೆಯನ್ನು ಪ್ರಾರಂಭಿಸುತ್ತಾನೆ. ನಂತರದ ಹಲವು ಪದ್ಯಗಳಲ್ಲಿ ಇತರ ಶರಣರನ್ನು ಸ್ತುತಿಸುತ್ತಾನೆ. ಚಾಮರಸನ ಕೃತಿ 'ಪ್ರಭುಲಿಂಗಲೀಲೆ'ಯಾದಕಾರಣ ಪ್ರಭುದೇವರ ಸ್ತುತಿ ಉಚಿತವಾಗಿದೆ.

ಶ್ರೀಮದಮಲಜ್ಞಾನ ಭಕ್ತಿ
ಪ್ರೇಮ ವೇದ ಪುರಾಣಶಾಸ್ತ್ರ
ಸ್ತೋಮನುತ ನತ ಚಾರುಚರಣಾಂಭೋದ ಘನ ಮಹಿಮ
ನಾಮ–ರೂಪ–ಕ್ರಿಯಾಕಳಾಪವಿ
ರಾಮನನುಪಮ ದಿವ್ಯತೇಜೊ
ವ್ಯೋಮಮೂರುತಿ ಗುರುಗುಹೇಶ್ವರಲಿಂಗ ಶರಣಾರ್ಥಿ

**ಪ್ರಭುಲಿಂಗಲೀಲೆ(೧.೧)**

ಸಂಪದ್ಯುಕ್ತವಾದ ಪರಿಶುದ್ಧವಾದ ಜ್ಞಾನ–ಭಕ್ತಿ–ಪ್ರೇಮನೂ, ನಾಲ್ಕು ವೇದ ಅಷ್ಟಾದಶ ಪುರಾಣ ಹಾಗೂ ಆಗಮಾದಿ ಶಾಸ್ತ್ರ ಸಮೂಹಗಳಿಂದ ಕೀರ್ತಿತನಾದವನೂ, ಸುಂದರವಾದ ಪಾದಕಮಲಗಳನ್ನು ಹೊಂದಿರುವವನೂ, ಘನಮಹಿಮನೂ, ನಾಮ, ರೂಪ, ಕ್ರಿಯಾದಿಗಳಿಲ್ಲದೆ, ಅವ್ಯಕ್ತವಾಗಿ ಶೋಭಿಸುವವನು, ಎಣೆಯಿಲ್ಲದ ಕಾಂತಿಯಿಂದ ಕೂಡಿದವನಾದ ಆಕಾಶದೇಹಿ ಅಲ್ಲಮನಿಗೆ ಶರಣಾರ್ಥಿ ಎನ್ನುತ್ತಾನೆ. ಇಡೀ ಪದ್ಯದಲ್ಲಿ ಅಲ್ಲಮನ ವ್ಯಕ್ತಿತ್ವ ಚಿತ್ರಣವನ್ನು ಮಾಡುತ್ತ ಅವನ ಮಹಿಮೆಯನ್ನು ಕೊಂಡಾಡುತ್ತಾನೆ.

ಕಾಯದೊಳು ಗುರುಲಿಂಗ ಜಂಗಮ
ದಾಯತವನರಿಯಲ್ಕೆ ಸುಲಭೋ
ಪಾಯದಿಂದಿರಿಟ್ಟು ಬಾಹ್ಯ ಸ್ಥಲಕೆ ಕುಱಿಹಾಗಿ
ದಾಯದೋಱಿ ಸಮಸ್ತಭಕ್ತ ನಿ
ಕಾಯವನು ಪಾವನವ ಮಾಡಿದ
ರಾಯ ಪೂರ್ವಾಚಾರ್ಯ ಸಂಗನ ಬಸವ ಶರಣಾರ್ಥಿ

**ಪ್ರಭುಲಿಂಗಲೀಲೆ ೧–೨**

ದೇಹದಲ್ಲಿ ಗುರುಲಿಂಗ ಜಂಗಮರ ಸರಿಯಾದ ಕ್ರಮವನ್ನು ತಿಳಿಯಲು, ಸುಲಭೋಪಾಯವಾದ ಇಷ್ಟಲಿಂಗವನ್ನು ಬಾಹ್ಯಸ್ಥಲಕ್ಕೆ ಗುರುತಾಗಿ ತೋರಿಸಿ, ಆ ಮೂರನ್ನೂ ತಿಳಿಯುವ ಉಪಾಯವನ್ನು ತಿಳಿಸಿದ ಸಮಸ್ತ ಭಕ್ತರಿಗೆ ಪಾವನ ಮಾಡಿದ ಪೂರ್ವಾಚಾರ್ಯನಾದ

ಬಸವಣ್ಣನಿಗೆ ಶರಣಾರ್ಥಿ ಚಾಮರಸನು ಬಸವಣ್ಣನನ್ನು ಪೂರ್ವಾಚಾರ್ಯನೆಂದು ಕರೆಯುತ್ತಾನೆ. ಪೂರ್ಮಕವಿ ಸ್ಮರಣೆಯೊಂದಿಗೆ ಆಚಾರ್ಯಸ್ತುತಿಯು ಮಾಡಿರುವಂತೆ ಕಂಡುಬರುತ್ತದೆ.

ವೀರಶೈವಾಚಾರ ಮಾರ್ಗವಿ
ಚಾರದಭ್ಯಂತರದೊಳೀ ಪರಿ
ಯೋರಣಿಸಿ ಹರಕರ್ಮಭಕ್ತಿ ಜ್ಞಾನವಿಹುದೆಂದು
ಧಾರುಣಿಯೊಳಜೆವಂತೆ ಕರುಣಾ
ಕಾರವಾಗಿ ಷಡುಸ್ಥಳವನು
ದ್ದಾರಿಸಿದ ಗುರುಚೆನ್ನಸಂಗನ ಬಸವ ಶರಣಾರ್ಥಿ

**ಪ್ರಭುಲಿಂಗ ಲೀಲೆ(೧-೨)**

ವೀರಶೈವ ಧರ್ಮದ ಆಚಾರಕ್ರಮ ಹಾಗೂ ಒಳ ಹೊರಗಿನ ವಿಚಾರಗಳನ್ನು ಕ್ರಮಗೊಳಿಸಿ ಶಿವಸಂಬಂಧಿಯಾದ ಕರ್ಮ, ಭಕ್ತಿ, ಜ್ಞಾನಗಳನ್ನು ಲೋಕಕ್ಕೆಲ್ಲ ತಿಳಿಸಿ ಕರುಣೆಯೇ ರೂಪವೆತ್ತಂತಿರುವ ಷಟ್ಸಲ(ಭಕ್ತ, ಮಹೇಶ ಪ್ರಸಾದಿ, ಪ್ರಾಣಲಿಂಗ, ಶರಣ ಹಾಗೂ ಐಕ್ಯ)ವನ್ನು ಬೋಧಿಸಿದ ಚನ್ನಬಸವಣ್ಣನಿಗೆ ಶರಣಾರ್ಥಿ.

ಕಂತುವನೆ ಕಂಗೆಡಿಸಿಯೊಳಪೊ
ಕ್ಕಂತರಂಗ ವಿಚಾರವೆಲ್ಲವ
ಸಂತೆಯಂಗಡಿಯಂತೆ ಸೊನ್ನಲಪುರದೊಳೊಡ್ಡಯಿಸಿ
ಚಿಂತಿತಾರ್ಥವನರ್ಥಿಗಿತ್ತು ನಿ
ರಂತರಖಿಳರಿಗಜೆವನೀವ ಮ
ಹಂತನೆನಿಸಿದ ಸಿದ್ದರಾಮಯ್ಯನಿಗೆ ಶರಣಾರ್ಥಿ

**ಪ್ರಭುಲಿಂಗ ಲೀಲೆ(೧-೪)**

ಮನ್ಮಥ(ಕಾಮ)ನನ್ನು ಗೆದ್ದು ಮನಸ್ಸಿನೊಳಗಿನ ವಿಚಾರಗಳನ್ನೆಲ್ಲ ಸಂತೆಯ ಅಂಗಡಿಯಲ್ಲಿ ಸರಕನ್ನು ಹರಡಿದಂತೆ ಬೇಡುವವರ ಬಯಕೆಗಳನ್ನೀಡೇರಿಸಿ ಸರ್ವರಿಗೂ ಬಿಡುವಿಲ್ಲದೆ ಭೋಧನೆ ಮಾಡುವ ಮಹಾಜ್ಞಾನಿಯಾದ ಸಿದ್ಧರಾಮನಿಗೆ ಶರಣಾರ್ಥಿ.

ಗೋಮುಖ ವ್ಯಾಘ್ರಂಗಳಂದದ
ಕಾಮಮೊದಲಾದ ಖಿಳ ವಿಷಯ
ಸ್ತೋಮವನು ಮುಜೆದಿಕ್ಕಿ ಮುಂಬರಿದಂತರಂಗದಲಿ
ಆ ಮಹಾಶಿವಲಿಂಗಸಂಗ

ಪ್ರೇಮಿಯಾಗಿ ಶಿವೈಕ್ಯ ಪದವನು
ನೇಮಿಸಿದ ಮಹದೇವಿಯಕ್ಕಗೆ ಶರಣು ಶರಣಾರ್ಥಿ

**ಪ್ರಭುಲಿಂಗ ಲೀಲೆ(೧-೫)**

ಬಹಿರಂಗದಲ್ಲಿ ಹಸುವಿನಂತೆ ಸಾಧುವಾಗಿದ್ದು, ಅಂತರಂಗದಲಿ ಹುಲಿಯಂತೆ ಭಯಂಕರವಾಗಿರುವ, ಗೋಮುಖ ವ್ಯಾಘ್ರಗಳಾದ ಅರಿಷಡ್ವರ್ಗಗಳಾದ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ವೈರಿಗಳನ್ನು ನಾಶ ಮಾಡಿ ಮನದಲ್ಲಿ ಶಿವನನ್ನೆ (ಚನ್ನಮಲ್ಲಿಕಾರ್ಜುನ) ವರಿಸಲು ಇಚ್ಛಿಸಿದ ಅಕ್ಕಮಹಾದೇವಿಗೆ ಶರಣು ಶರಣಾರ್ಥಿ ಎಂದಿರುವನು. ಚಾಮರಸ ಉಳಿದ ಎಲ್ಲ ಶರಣರಿಗೆ ಒಂದೇ ಸಾರೆ ಶರಣು ಹೇಳಿ ಮಹಾದೇವಿಯಕ್ಕನಿಗೆ ಎರಡು ಸಾರೆ ಶರಣು ಶರಣಾರ್ಥಿ" ಎಂದು ಹೇಳಿದುದು ವಿಶಿಷ್ಟವಾಗಿದೆ.

ಹೀಗೆ ಜೈನರು ಜೈನಕವಿಗಳನ್ನು, ವೀರಶೈವರು ತಮಗಿಂತ ಪೂರ್ವದ ವೀರಶೈವ ಕವಿಗಳನ್ನು, ವೈದಿಕ ಕವಿಗಳು ಅಥವಾ ದಾಸರು ತಮ್ಮ ಪರಂಪರೆಯ ವ್ಯಾಸ ವಾಲ್ಮೀಕಿ ಕವಿಗಳನ್ನು ಸ್ಮರಿಸುವುದರ ಜೊತೆಗೆ ಮಧ್ವ ರಾಮಾನುಜರಂಥ ಆಚಾರ್ಯರನ್ನು ಸ್ಮರಿಸುತ್ತಾರೆ. "ಎಷ್ಟೋ ವೇಳೆ ತಾವು ಯಾರಿಗೆ ನೇರವಾಗಿ ಋಣಿಯಾಗಿರುವರೋ ಅಂಥವರ ಹೆಸರನ್ನು ಆಯಾ ಧರ್ಮದವರೇ ಹೇಳದಿರುವ ಸಂದರ್ಭಗಳೂ ಇವೆ. ನಿದರ್ಶನಕ್ಕೆ ರನ್ನ ಪೊನ್ನರು ತಮ್ಮ ಸಮೀಪಕಾಲೀನನಾದ ಪಂಪನ ಹೆಸರನ್ನೇ ಹೇಳುವುದಿಲ್ಲ. ಪಂಪ ಭಾರತದ ೧೩, ೧೪ನೇ ಆಶ್ವಾಸದ ಆಧಾರದ ಮೇಳೆ ತನ್ನ ಗದಾಯುದ್ಧವನ್ನು ರಚಿಸಿದ ರನ್ನನು ಆದಿಪುರಾಣ ಕಥಾವಸ್ತುವನ್ನು ನಿರ್ವಹಿಸಿದ ರತ್ನಾಕರನು ಪಂಪನ ಹೆಸರನ್ನೇ ಹೇಳುವುದಿಲ್ಲ. ಇನ್ನು ವಚನಕಾರರನ್ನು ತೆಗೆದುಕೊಂಡರೆ ತಾವು ತಮಗಿಂತ ಹಿಂದಿನ ಸಾಹಿತ್ಯಕ್ಕೆ ಯಾವ ರೀತಿಯಿಂದಲೂ ಸಂಬಂಧಪಟ್ಟವರಲ್ಲ ಎಂಬ ತಾಟಸ್ಥ್ಯವನ್ನು ಪ್ರಕಟಪಡಿಸುತ್ತಾರೆ. ವಚನಗಳಲ್ಲಿ ಆದ್ಯರ ವಚನಗಳ ಪ್ರಸ್ತಾಪ ಬರುವುದರಿಂದಲೂ ತಮ್ಮ ವಚನಗಳ ಸಂದರ್ಭದಲ್ಲಿ ಹಲವಾರು ಶಿವಭಕ್ತರ (ಮಾದಾರಚನ್ನಯ್ಯ, ಕುಂಬಾರ ಗುಂಡಯ್ಯ) ಹೆಸರುಗಳನ್ನು ಹೇಳುವುದರಿಂದಲೂ ಅವರು ತಮಗಿಂತ ಹಿಂದಿನ ವಚನಕಾರರೂ ಹಾಗೂ ಶಿವಭಕ್ತರೊಂದಿಗೆ ಸಂಬಂಧಿಸಿಕೊಂಡರೂ ಅವರು ಹಿಂದಿನ ಕನ್ನಡ ಸಾಹಿತ್ಯದಿಂದ ಏನೇನೂ ಪ್ರಭಾವಿತರಾಗಿಲ್ಲವೆಂದರೆ ನಂಬುವುದು ಕಷ್ಟವಾಗುತ್ತದೆ.[೫] ವಾದಿರಾಜನ ಸಂಸ್ಕೃತ ಕೃತಿಯನ್ನು ಅನುಸರಿಸಿ ಕನ್ನಡದಲ್ಲಿ ಕಾವ್ಯ ರಚಿಸಿದ ಕವಿ ಜನ್ನ ಕತೆಯ ಚೌಕಟ್ಟನ್ನು ವಾದಿರಾಜನಿಂದ ಪಡೆದರೂ ಜನ್ನನದು ವಾದಿರಾಜನ

ಪ್ರತಿಕೃತಿಯಲ್ಲ, ವಾದಿರಾಜನ ಪ್ರಭಾವ ಜನ್ನನ ಮೇಲಿದೆ. ಆದರೆ ಜನ್ನನು ನೇರವಾಗಿ ವಾದಿರಾಜನನ್ನು ಸ್ಮರಿಸದೆ ಸಂಸ್ಕೃತ, ಪ್ರಾಕೃತ ಹಾಗೂ ಕನ್ನಡ ಭಾಷೆಯಲ್ಲಿ ಯಾರು ಈ ಕೃತಿಯನ್ನು ನಿರ್ವಹಿಸಿರುವರೋ ಅವರ ಸರಸ ಪದ್ಧತಿ ಹಾಗೂ ಸನ್ಮತಿ ನನಗೆ ಬರಲೆಂದು ಪ್ರಾರ್ಥಿಸಿರುವನು. ಇದೂ ಒಂದು ರೀತಿಯ ಪೂರ್ವ ಭಾಷಾ ಕವಿಗಳ ಸ್ಮರಣೆಯಾಗಿದೆ. ಪೂರ್ವಕವಿ ಸ್ಮರಣೆಯೊಂದಿಗೆ ತಮ್ಮ ಕಥಾವಸ್ತುವನ್ನು ಬೇರೆ ಭಾಷೆಯಲ್ಲಿ ನಿರ್ವಹಿಸಿದ ಕವಿ ಸ್ಮರಣೆಯೂ ಒಂದು ಎಂದೆನಿಸುತ್ತದೆ. ಪೂರ್ವಕವಿಗಳ ಪದ್ಧತಿ ಸರಸವಾಗಿತ್ತು, ಆ ಕಾರಣವಾಗಿ ಅವರ ಸರಸ ಪದ್ದತಿ ಹಾಗೂ ಸನ್ಮತಿಗಳೆರಡೂ ನನ್ನ ಕೃತಿಯಲ್ಲಿ ನೆಲಸಲೆಂದು ಆಶಿಸುತ್ತಾನೆ.

ಮಹಾಬಲನೆಂಬ ಕವಿಯು ತನ್ನ 'ನೇಮಿನಾಥ ಪುರಾಣಂ'ಎಂಬ ಗ್ರಂಥದಲ್ಲಿ ಭೂತ ಬಲಿ, ಪುಷ್ಪದಂತ ಜಿನಸೇನ, ವೀರಸೇನ, ಸಮಂತಭದ್ರ, ಕವಿಪರಮೇಷ್ಠಿ ಪೂಜ್ಯಪಾದ, ನಂದಿ, ಅಕಳಂಕ, ಶುಭಚಂದ್ರ, ಕುಮುದೇಂದು ವಿನಯಚಂದ್ರ ಇತ್ಯಾದಿ ಪೂರ್ವ ಕವಿಗಳನ್ನು ಸ್ಮರಿಸುತ್ತಾನೆ. ಭೂತಬಲಿ ಎಂಬ ಹೆಸರಿನ ಕವಿಯೇ ಇರಬಹುದೆಂದು ಕಂಡುಬರುತ್ತದೆ. ಸುಮಾರು ಮೂರು ಪದ್ಯಗಳಲ್ಲಿ ಪೂರ್ವಕವಿಗಳನ್ನು ಸ್ಮರಿಸುತ್ತಾನೆ.

ನಂದಿಸುಗೆ ಭೂತಬಲಿ ಪು
ಷ್ಪದಂತ ಜೀನಸೇನ ವೀರಸೇನಾಖ್ಯ ಶ್ರೀ
ಪದನಖರ ಕಾಂತಿಗಂಗಾ
ಹ್ರದಿನಿಮಹದೇನುಃ ಕೃಶಾನುತಾಪೋದಯಮಂ

**ನೇಮಿನಾಥ ಪುರಾಣ ೧೧**

ತ್ರಿಭುವನ ಜನವಿನುತ ಸಮಂ
ತಭದ್ರ ಕವಿನಿವಕಮಲ ಕಾಂತಾರಖರ
ಪ್ರಭ ಕವಿಪರಮೇಷ್ಠಿ ಮುನಿ
ಪ್ರಭುಪದನಖಕಾಂತಿ ಲೋಕೆ‍ರ್ ಕವಿತಾಪದಮಂ

**ನೇಮಿನಾಥ ಪುರಾಣ ೧೨**

ಧೈರ್ಯಪರ ಗೃದ್ಧ ಪಿಂಛಾ
ಚಾರ್ಯ ಜಟಾಸಿಂಹನಂದಿ ಜಗಲೇಖಾತಾ

ಚಾರ್ಯ ಪ್ರಭಾವಮತ್ಯಾ

ಶ್ಚರ್ಯಮದಂ ಪೊಗವ್ವಿಡಬ್ಬಜಂಗಮಸಾಧ್ಯಂ

**ನೇಮಿನಾಥ ಪುರಾಣ ೧೪**

ಹರಿಹರ ಕವಿಯು ತನ್ನ ಏಕೈಕ ಚಂಪೂ ಕೃತಿಯಾದ 'ಗಿರಿಜಾಕಲ್ಯಾಣ'ದಲ್ಲಿ ಪೂರ್ವ ಕವಿಗಳನ್ನು ವಿಶಿಷ್ಟಪೂರ್ಣವಾಗಿ ಸ್ತುತಿಸಿದ್ದಾನೆ.

ಘನ ಕವಿತಾ ವಿಳಾಸದೊಳೆ ಸಂದ ಮಯೂರನ ರೇಖೆ ಕಾಳಿದಾ

ನ ರಸವೃತ್ತಿ ಬಾಣನ ಮೃದೂಕ್ತಿ ಹಲಾಯುದನಾಶಂ ಕೇಶಿರಾ

ಜನ ಬಗೆಯುದ್ಭಟಯ್ಯನ ಗಭೀರತೆ ಮಲ್ಹಣನೇಳ್ಗೆ ಬೋಜರಾ

ಜಗ ಜಸ ಮೆನ್ನ ಕಾವ್ಯರಸದೊಳ್ ನೆಲಸಿರ್ಕೆಸಂತತನಲವಿಂ

**ಗಿರಿಜಾ ಕಲ್ಯಾಣ(೧.೮)**

ಶ್ರೇಷ್ಠವಾದ ಕವಿತಾ ವಿಲಾಸವನ್ನು ಮೈಗೂಡಿಸಿಕೊಂಡಿರುವ ಮಯೂರ ಕವಿಯ ಕಾವ್ಯ ಪದ್ಧತಿ, ಕಾಳಿದಾನ ರಸೋತ್ಕರ್ಷ ಅಥವಾ ರಸಾಭಿವ್ಯಕ್ತಿ, ಬಾಣಕವಿಯ ಮೃದು ನುಡಿಗಳು, ಹಲಾಯುದನ ಪ್ರತ್ಯುತ್ಪನ್ನ ಮತಿ, ಕೇಶಿರಾಜನ ರೀತಿ, ಉದ್ಭಟ ಕವಿಯ ಗಾಂಭೀರ್ಯ, ಮಲುಹಣನ ವಿಶಿಷ್ಟತೆ, ಭೋಜರಾಜನ ಯಶಸ್ಸುಗಳೆಲ್ಲವೂ ನನ್ನ ಕಾವ್ಯರಸ ದಲ್ಲಿ ನಿರಂತರವಾಗಿ ನೆಲಸಿರಲಿ ಎಂದಿರುವನು. ಹರಿಹರನು ಸಂಸ್ಕೃತ ಮತ್ತು ಕನ್ನಡ ಭಷೆಯ ಕವಿಗಳ ಸ್ಮರಣೆಯೊಂದಿಗೆ ಅವರ ಕಾವ್ಯ ಲಕ್ಷಣಗಳು ನನ್ನ ಕಾವ್ಯದಲ್ಲಿ ನೆಲಸಲಿ ಎನ್ನುವನು ಹಾಗೂ ಕಾಳಿದಾನಲ್ಲಿ ರಸೋತ್ಕರ್ಷ ಬಾಣನಲ್ಲಿ ಮೃದುಪದಗಳ ರಚನೆಯಿತ್ತು ಎಂಬ ಅಂಶವನ್ನು ತಿಳಿಸುತ್ತಾನೆ.

ದಾಸಪಂಥ ಅಥವಾ ವೈಷ್ಣವ ಪಂಥದಲ್ಲಿ ಪುರಂದರ ದಾಸ, ಕನಕದಾಸರು ಮುಖ್ಯರಾದವರು. ಪುರಂದರದಾಸರು ಕೀರ್ತನೆಗಳಿಂದ ಪ್ರಸಿದ್ಧರಾದರೆ, ಕನಕದಾಸರು ಕೀರ್ತನೆ ಮತ್ತು ಹಲವು ಕೃತಿಗಳಿಂದಲೂ ಜನಪ್ರಿಯರಾದವರು. ಕನಕದಾಸರ ಕೃತಿಗಳಲ್ಲಿ ಮೋಹನ ತರಂಗಿಣಿ, ನಳಚರಿತ್ರೆ, ಹರಿಭಕ್ತಸಾರ, ರಾಮಧಾನ್ಯ ಚರಿತ್ರೆಗಳು ಮುಖ್ಯವಾಗಿವೆ. ಮೋಹನ ತರಂಗಿಣಿಯ ಒಂದು ಪದ್ಯದಲ್ಲಿ

ಉರಗಾಲಯವ ಪೆಸರ್ವಡೆವನ ಮತ್ಸೋ

ದರಜಾತೆಯಾತ್ಮ ಸಂಭವನ

ವರಪುರಾಣಂಗಳ ಕನ್ನಡಿಸಿದ ಕವಿ
ವರರ ಕೊಂಡಾಡುವೆ ಮುದದಿ

**ಮೋಹನ ತರಂಗಿಣಿ(೧-೧೧)**

ಈ ಪದ್ಯದಲ್ಲಿ ಮತ್ಸ್ಯೋದರಜಾತೆಯಾತ್ಮ ಸಂಭವರೆಂದರೆ ವ್ಯಾಸ, ವಾಲ್ಮಿಕಿಯರು ಅವರ ಕಾವ್ಯಗಳು ಮಹಾಭಾರತ ಮತ್ತು ರಾಮಾಯಣಗಳು ಆ ಮಹಾಕಾವ್ಯಗಳನ್ನು ಕನ್ನಡಿಸಿದವರು. ಕುಮಾರವ್ಯಾಸ ಮತ್ತು ಕುಮಾರ ವಾಲ್ಮೀಕಿಯರು ಕನಕದಾಸರು ಇತ್ತೀಚಿನ ಕವಿಗಳಾಗಿದ್ದರಿಂದ ಅನುವಾದ ಕವಿಗಳನ್ನು ಸ್ಮರಿಸುತ್ತಾರೆ. ಇದು ಒಂದು ರೀತಿಯ ವಿಶೇಷತೆಯಾಗಿದೆ.

ಪಂಚತಂತ್ರದ ಕವಿ ದುರ್ಗಸಿಂಹನು ತನ್ನ ಕೃತಿಯ ಪ್ರಾರಂಭದಲ್ಲಿ ಪೂರ್ವಾಚಾರ್ಯರ ಸಂಸ್ತುತಿಯನ್ನು ಈ ರೀತಿ ಮಾಡಿರುವನು ಸಂಸ್ಕೃತ, ಕನ್ನಡ ಕವಿಗಳ ಸ್ತುತಿ ಈ ಕೆಳಗಿನಂತಿದೆ.

ನೆಗಟ್ದಿ ಗುಣಾಡ್ಯನ ಮೃದು ಮಧುರ
ಗಂಭೀರತರ ಪ್ರಸನ್ನ ಕವಿತಾ ಗುಣಮಂ
ಪೊಗಟ್ಟಜನುಂ ನೆಜೆಯಂ
ಜಗದೊಳಗಿನ್ನುಟಿದ ಜಡರದೆ ನೆಜೆದಪರೋ

**ಪಂಚತಂತ್ರ(೧-೧೦)**

ಈ ಪದ್ಯದಲ್ಲಿ ಗುಣಾಡ್ಯನೆಂಬ ಕವಿಯ ಮೃದು ಮಧುರವಾದ ಗಂಭೀರವಾದ ಪ್ರಸನ್ನವಾದ ಕವಿತಾ ಗುಣವನ್ನು ಹೊಗಳಲು ಬ್ರಹ್ಮನಿಂದಲೂ ಸಾಧ್ಯವಿಲ್ಲ ಅಂದಮೇಲೆ ಜಡಮಾನವರೇನು ಅರಿಯುವರು ಎಂದಿರುವುದು. ಗುಣಾಡ್ಯನ ಮೇಲಿನ ಅಭಿಮಾನದಿಂದ.

ಪರಮ ಕವೀಂದ್ರ ವೃಂದವಿನುತೋತ್ರಮವಾಗಿ ಸರಸ್ವತಿ ಸ್ವಯಂ
ವರ ವರನಬ್ಬ ಚೋಪಮದ ಪಾಸ್ತರಜ ನಿಜವಾಗ್ವಿಲಾಸಬಾ
ಸುರತರ ಚಂದ್ರಿಕಾದ್ಯುತಿನಿರಸ ಸಮಸ್ತ ಜಗತ್ತಮಂ ಕಳಾ
ಪರಿಣತನೆಂದೊಡೆ ಪೋಗವ್ವೆನುನ್ನತಿಯಂ ಕವಿ ಕಾಳಿದಾಸನಾ

**ಪಂಚತಂತ್ರ(೧-೧೧)**

ಕವಿಂದ್ರರ ವೃಂದದಲ್ಲಯೇ ಉತ್ತಮನಾದ ನಿಜವಾದ ವಾಗ್ವಿಲಾಸವನ್ನು ಹೊಂದಿರುವ ಸಮಸ್ತ ಜಗತ್ತಿನ ಕಲಾ ಪರಿಣಿತನಾದ ಕವಿ ಕಾಳಿದಾಸನನ್ನು ಹೊಗಳುವೆನೆಂದು ಹೇಳುತ್ತ ಕಾಳಿದಾಸ ಸಮಸ್ತ ಜಗತ್ತಿನ ಪರಿಣಿತ ಕವಿ ಎನ್ನುತ್ತಾನೆ.

ಶ್ರೀ ವಿಜಯರ ಕವಿಮಾರ್ಗ
ಭಾವಿಪ ಕವಿಜನದ ಮನಕೆ ಕನ್ನಡಿಯುಂ ಕೆ
ಯ್ದೀವಿಣೆಯು ಮಾದುಪದಜಿಂ
ಶ್ರೀ ವಿಜಯರ್ ದೇವರ ನೇವಣ್ಣಿಪುದೋ

**ಪಂಚತಂತ್ರ(೧–೧೨)**

ಶ್ರೀ ವಿಜಯನ ಕವಿಮಾರ್ಗ ಕವಿಜನರ ಮನಸ್ಸಿಗೆ ಕನ್ನಡಿಯಂತೆಯು ಕೈದೀಪದಂತಿರಲು ಶ್ರೀ ವಿಜಯನನ್ನು ಏನೆಂದು ಬಣ್ಣಿಸಲಿ ಹೇಗೆ ಬಣ್ಣಿಸಲಿ ಶ್ರೀ ವಿಜಯನ ವರ್ಣನೆಗೆ ಪದಗಳೇ ಸಾಲವು ಎಂದಿರುವನು. ಶ್ರೀ ವಿಜಯನ ನಂತರ ದುರ್ಗಸಿಂಹನು ಪಂಪನನ್ನು ಸ್ತುತಿಸುತ್ತಾನೆ.

ಮಾರ್ಗದ್ವಯಂ ಪರಿಣತಕವಿ
ಮಾರ್ಗ ಮನೋಹಾರಿಯಾದುದೆಂದಖಿಳ ಬುದರ್
ನಿರ್ಗರ್ಗರಾಗಿ ಪಂಪನ
ಗೀರ್ಗಂಪದ ಪೆಂಪನಾಗಳುಂ ಬಣ್ಣಿಸುವರ್

**ಪಂಚತಂತ್ರ(೧–೧೩)**

ಮಾರ್ಗದ್ವಯ ಪರಿಣತ ಕವಿ ಎಂದರೆ ಪಂಪನ ಕಾವ್ಯದಲ್ಲಿ ಬರುವ ದೇಶಿ ಮತ್ತು ಮಾರ್ಗಶೈಲಿ, ಪಂಪನ ಶೈಲಿಯು ಮನೋಹರವಾಗಿರುವುದರಿಂದ ವಿದ್ವಾಂಸರು ಪಂಪನ ಪಾಂಡಿತ್ಯವನ್ನು ಬಣ್ಣಿಸುವರು. ಮಾರ್ಗ–ದೇಶಿ ಛಂದಸ್ಸಿನ ಹಾದಿಯಲ್ಲಿ ನಡೆಸಿದವನೇ ಪಂಪ. ಹಾಗಾಗಿ ಪಂಪನು ನಡೆದ ಮಾರ್ಗವೇ ರಾಜಮಾರ್ಗವಾಯಿತು.

ಕವಿ ಗಮಕಿ ವಾದಿ ವಾಗ್ಮಿ
ಪ್ರವರರ್ ಶ್ರೀಮಾದಿರಾಜ ಮುನಿಪುಂಗವರು
ತ್ಸವದಿಂ ತಿರ್ದಿದರೆನೆ ಭೂ
ಭುವನದೊಳಿದನೆಟ್ಟು ಕೊಂಡು ಕೊನೆಯದರೊಳರೇ

**ಪಂಚತಂತ್ರ(೧–೧೪)**

ಕವಿ, ಗಮಕಿ, ವಾದಿ ಹಾಗೂ ವಾಗ್ಮಿಗಳಾದ ಶ್ರೀ ಮಾದಿರಾಜ ಮುನಿಶ್ರೇಷ್ಠರು ನನ್ನನ್ನು ಉತ್ಸಾಹದಿಂದ ತಿದ್ದಿದರು. ಎಂದು ಮಾದಿರಾಜ ಕವಿಗಳನ್ನು ಸ್ಮರಿಸುತ್ತ ಇದನ್ನು ಮರೆಯಲು ಸಾಧ್ಯವಿಲ್ಲ ಎನ್ನುತ್ತಾನೆ. ಹೀಗೆ ದುರ್ಗಸಿಂಹ ಗುಣಾಢ್ಯ, ಕಾಳಿದಾಸ ಶ್ರೀವಿಜಯ, ಪಂಪ ಹಾಗೂ ಮಾದಿರಾಜನಂತಹ ಪ್ರಸಿದ್ಧ ಕವಿಗಳನ್ನು ಸ್ತುತಿಸುತ್ತಾನೆ.

ಶೃಂಗಾರ ಕವಿ ರತ್ನಾಕರನು ಭರತೇಶ ವೈಭವದ ಎರಡನೇ ಪದ್ಯದಲ್ಲಿ ಗುರುಸ್ತುತಿಯನ್ನು ಮಾಡುತ್ತಾನೆ.

ಬಿನ್ನಹ ಗುರುವೆ ಧ್ಯಾನಕೆ ಬೇಸರಾದಾಗ
ನಿನ್ನನಾದಿಯ ಮಾಡಿಕೊಂಡು
ಕನ್ನಡದೊಳಗೊಂದು ಕಥೆಯಪೇಳುವೆನದ
ನಿನ್ನಾಜ್ಞೆ ಕಂಡಾ ಎನ್ನೊಡೆಯಾ

**ಭರತೇಶ ವೈಭವ(೧–೨)**

ಕನ್ನಡದೊಳಗೊಂದು ಕಥೆಯ ಹೇಳುವೆನೆಂದ ರತ್ನಾಕರ ಕಥನಕಾವ್ಯವನ್ನು ಬರೆಯುತ್ತಾನೆ. ಈ ಪದ್ಯದಲ್ಲಿ ಪೂರ್ವ ಕವಿಸ್ಮರಣೆಯಿಲ್ಲ. ಆದರೇ ಗುರುಸ್ತುತಿಯನ್ನು ಮಾಡುತ್ತಾನೆ ಹಾಗೂ ಇನ್ನೊಂದು ಪದ್ಯದಲ್ಲಿ ತನ್ನ ಕಾವ್ಯ ಪ್ರಸಂಶೆ ಮಾಡಿಕೊಳ್ಳುವುದರೊಂದಿಗೆ, ಕನ್ನಡ ತೆಲುಗು ಹಾಗೂ ತಮಿಳು ಕವಿಗಳನ್ನು ನೆನೆಯುತ್ತಾನೆ.

ಅಯ್ಯಯ್ಯ ಚೆನ್ನಾದುದೆನೆ ಕನ್ನಡಿಗ
ರಯ್ಯ ಮುಂದಿಚಿಯೇನೆ ತೆಲುಗ
ಅಯ್ಯಯ್ಯ ಎಂಚಪೊಲಾಂಡೆಂದು ತುಳುವರು
ಮೈಯ್ಯುಬ್ಬಿ ಕೇಳಬೇಕಣ್ಣಾ

**ಭರತೇಶ ವೈಭವ(೧–೪)**

ಹಾಗೂ ತನ್ನ ಕಾವ್ಯವನ್ನು ಕನ್ನಡಿಗರು ತೆಲುಗರು ಹಾಗೂ ತುಳುವರು ಮೆಚ್ಚಿಕೊಳ್ಳುವುದರಲ್ಲಿ ಸಂದೇಹವಿಲ್ಲವೆನ್ನುತ್ತಾನೆ. ಶೃಂಗಾರ ಪ್ರಧಾನವಾದ ಕಾವ್ಯವನ್ನು ರಚಿಸಿ ಶೃಂಗಾರ ಕವಿ ಎನಿಸಿಕೊಂಡಿರುವ ರತ್ನಾಕರನ ಭರತೇಶ ವೈಭವ ಕಾವ್ಯವನ್ನು ಮೆಚ್ಚಿಕೊಳ್ಳದವರಾರು? ರಸವತ್ಕಾವ್ಯ ಕನ್ನಿಕೆಯನ್ನು ಭರತನಿಗರ್ಪಿಸಿದ ರತ್ನಾಕರ ಪುಣ್ಯವಂತನೇ ಸರಿ.

ಕವಿ ಸೋಮನಾಥನು ಅಕ್ರೂರ ಚರಿತೆಯಲ್ಲಿ ಕವಿ ವ್ಯಾಸಸ್ತುತಿಯನ್ನು ಮಾಡಿ ನಂತರ ಇನ್ನೊಂದು ಪದ್ಯದಲ್ಲಿ ಕುಮಾರವ್ಯಾಸನ ಸ್ತುತಿ ಮಾಡುವನು.

ತಾಮರಸಭವನರಸಿ ಭಾರತಿ
ಸಾಮಜಾನನ ವಿಷಮಕರ ನಿಸ್ಸೀಮ
ವೇದವ್ಯಾಸಮುನಿ ಸುರಗುರುಗಳೊಲವಿನ ಲಿ
ರಾಮಣೀಯಕ ಮತಿಗೆ ನಯಸುಖ

ಕಾಮಿತಾರ್ಥ ಜ್ಞಾನ ಸರಸೋ
ದ್ಧಾಮ ಚತುರೋಕ್ತಿಯನು ನೀಡುಗುಪಕ್ರಮಂಗಳಲಿ

**ಅಕ್ರೂರ ಚರಿತೆ(೧-೪)**

ಮೇಲ್ನೋಟಕ್ಕೆ ಇದು ವ್ಯಾಸಮುನಿಗಳ ಸ್ತುತಿಯಂತೆ ಕಂಡರೂ ಇದರಲ್ಲಿ ವ್ಯಾಸರನ್ನು, ಸರಸ್ವತಿಯನ್ನು ಅಷ್ಟೇ ಅಲ್ಲದೇ ಸುರಗುರುಗಳು ನನ್ನ ಮತಿಗೆ ಚತುರ ಪದರಚನೆಯನ್ನು ದಯಪಾಲಿಸಲಿ ಎಂದಿರುವನು.

ಕವಿ ಕುಮಾರವ್ಯಾಸ ರಾಯನ
ಕವಿತೆ ಜಾಣರ ಸೊಬಗು ರಸ
ಭಾವವನು ಸದಲಂಕೃತಿಯನತಿ ಮಧುರೋಕ್ತಿ ಕೌಶಲವ
ಸವಿನುಡಿಯ ಗಮಕಿಗಳ ಚರಣಾ
ಬ್ಜವನ ಪಿಡಿದಕ್ರೂರ ಚರಿತೆಯ
ವಿವರಿಸಿದನಾ ಸೋಮನಾಥ ಕವೀಂದ್ರ ನೊಲವಿನಲಿ

**ಅಕ್ರೂರ ಚರಿತೆ(೧-೫)**

ಕವಿ ಕುಮಾರವ್ಯಾಸನ ಕವಿತೆ ಜಾಣರ ಸೊಬಗು, ರಸ, ಭಾವ, ಅಲಂಕಾರ ಸಹಿತವಾದ ಮಧುರ ಉಕ್ತಿಗಳಿಂದ ಕೂಡಿದ ಸವಿನುಡಿಯಾಗಿದೆ. ಇಂತಹ ಕವಿಗಳ, ಗಮಕಿಗಳ ಪಾದಾರವಿಂದಗಳಿಗೆ ಪೊಡಮಟ್ಟು ಅಕ್ರೂರಚರಿತೆಯನು ಒಲವಿನಿಂದ ರಚಿಸಿರುವೆನು.

ಹೀಗೆ ಪ್ರಾಚೀನ ಕವಿಗಳ ಕಾವ್ಯದ ಕೆಲವು ವಿಶೇಷ ಲಕ್ಷಣಗಳನ್ನು ಗುರುತಿಸಿ ಪೂರ್ವಕವಿ ಸ್ಮರಣೆ ಸಂಪ್ರದಾಯದ ಮೂಲಕ ನಮ್ಮ ಕನ್ನಡ ಕವಿಗಳು ಪ್ರಾಚೀನ ಕಾವ್ಯದ ಸಂಪ್ರದಾಯ ಮತ್ತು ಪರಂಪರೆಯ ವಿಷಯದಲ್ಲಿ ಗೌರವವನ್ನು ತೋರಿಸಿದ್ದಾರೆ. ಪೂರ್ವಕವಿ ಸ್ಮರಣೆಯನ್ನು ಮಾಡದೆ ಕಾವ್ಯ ರಚನೆ ಸಾಧ್ಯವಿಲ್ಲವೇನೋ ಎನ್ನುವ ರೀತಿಯಲ್ಲಿ ಕಾವ್ಯ ಆರಂಭವಾಗುತ್ತದೆ.

ಪೂರ್ವ ಕವಿಸ್ತುತಿಯ ಸೂಕ್ತಿ ಸುಧಾರ್ಣವದ ಪದ್ಯ ಹೀಗಿದೆ.
ಕೃತಿಯಂ ನಿರ್ಮಿಸಿ ಮುನ್ನ ಮಾದರಿಯೊಳ್ ಶ್ರೀಹರ್ಷನುಂ ಭೋಜಭೂ
ಪತಿಯುಂ ಸತ್ಕವಿ ವಜ್ರಹಸ್ತ ನೃಪನುಂ ಸರ್ವಜ್ಞ ಸೋಮೇಶ್ವರನು।
ನ್ನತಿವೆತ್ತಂ ದರೆಗಿಂದು ಮಲ್ಲಬಂಧರನಿಂದ ಕಾವ್ಯಸಾರಜಗ
ನ್ನುತ ಮಾಯ್ತೆಂದೆನೆ ಮಾಡಿ ಕೀರ್ತಿವಡೆದಂ ಶ್ರೀವೀರ ಸೋಮೇಶ್ವರ॥

**ಸೂಕ್ತಿ ಸುದಾರ್ಣವ(೧.೨೪)**

ಮುನ್ನ ಕೃತಿಯನ್ನು ನಿರ್ಮಿಸಿದವರು ಹರ್ಷ, ಭೋಜ ವಜ್ರಹಸ್ತ ಸರ್ವಜ್ಞ ಸೋಮೇಶ್ವರ ಅವರ ಮಾದರಿಯಂತೆಯೇ ಕವಿಮಲ್ಲ ಇಂದು ಸೂಕ್ತಿ ಸುದಾರ್ಣಾವ ಎಂಬ ಕೃತಿಯನ್ನು ರಚಿಸಿ ಕೀರ್ತಿ ಪಡೆದ.

ಜನ್ನನ ದೇಸೆ ಪಂಪನ ಗುಣಂ ಗುಣನಂದಿಯ ತೊಂಡು
ಪೊನ್ನನೊಳ್ ಸನ್ನಿದಮಾದ ಜಾಣ್ನುಡಿ ಗಜಾಂಕುಶ ರಾಜನ ಚಿತ್ತ।
ವೃತ್ತಿ ತಾನುನ್ನತಮಾಗಿ ಸಂದ ಗುಣವರ್ಮನ ಜತಿ ಸಮಾನರಕ್ತಿಯಿಂ
ದ ನೆಲಸಿರ್ಪುವೀ ಸುಕವಿ ಮಲ್ಲನ ಕಾವ್ಯ ವಿಳಾಸ ಗೇಹದೊಳ್॥

**ಸೂಕ್ತಿ ಸುದಾರ್ಣವ (೧.೨೬)**

ಜನ್ನನಲ್ಲೂ ದೇಸಿಯತೆ ಇತ್ತು ಪಂಪನ ಕಾವ್ಯಗುಣ ಗುಣನಂದಿಯ ತೊಂಡು, ಪೊನ್ನನ ಒಳಿತು, ಸನ್ನಿದಮಾ ಜಾಣ್ನುಡಿ, ಗಜಾಂಕುಶನ ಚಿತ್ತವೃತ್ತಿ ಇತ್ಯಾದಿ ಲಕ್ಷಣಗಳೆಲ್ಲ ಸುಕವಿ ಮಲ್ಲನ ಕಾವ್ಯ ವಿಳಾಸದಲ್ಲಿ ನೆಲೆಸಿವೆ.

ಗಜಗನ ಗುಣನಂದಿಯ ಮನಸಿಜನಸಗನ ಚಂದ್ರಭಟ್ಟ ಗುಣವರ್ಮಶ್ರೀ
ವಿಜಯರ ಹೊನ್ನನ ಹಂಪನ ಸುಜನೋತ್ತಂಸನ ಸುಮಾರ್ಗವಿದಜೊಳೆ ಲಕ್ಷ್ಯಂ॥

**ಶಬ್ದಮಣಿದರ್ಪಣಂ(೧.೫)**

ಈ ಎಲ್ಲಾ ಪ್ರಮುಖ ಕವಿಗಳ ಪದ್ಯಗಳನ್ನು ಉದಾಹರಣೆಯಾಗಿ ನನ್ನ ವ್ಯಾಕರಣ ಕೃತಿಯಲ್ಲಿ ಪ್ರಯೋಗಿಸಿದ್ದೇನೆ. ಅವುಗಳನ್ನು ತಾವು ಗಮನಿಸಬೇಕು ಎಂದಿರುವನು.

ರಾಘವಾಂಕ ತನ್ನ ಹರಿಶ್ಚಂದ್ರ ಕಾವ್ಯದಲ್ಲಿ ಪೂರ್ವಕವಿ ಸ್ಮರಣೆಯನ್ನು ಸುದೀರ್ಘವಾಗಿಯೇ ಮಾಡಿದ್ದಾನೆ.

ಮನವಚನ ಕಾಯದೊಳಗೊಮ್ಮೆಯುಂ ಬಾಳಲೋ
ಚನನಲ್ಲದೆ ಪೊಗಳದುದ್ಭಟಯ್ಯನ ಮಯೂ
ರನ ಕಾಳಿದಾಸನ ಹಲಾಯುದನ ಕೇಶಿರಾಜನ ಮಲುಹಣನ ಬಾಣನ।
ವಿನುತ ಭೋಜನ ಭಲ್ಲಟನ ಭಾರವಿಯ ಪದವ
ನೆನೆದು ಬಲಗೊಂಡು ತೊಡಗಿದೆನೀ ಮಹಾಕೃತಿಯ
ನನಗೆ ನೆರವಾಗಿ ನಡೆಸುಗೆ ರಸಂಗೊಡುಗೆ ತಿರ್ದುಗೆ ಸುನಿರ್ವಿಘ್ನದಿಂದ॥

**ಹರಿಶ್ಚಂದ್ರ ಕಾವ್ಯ(೧–೧೪)**

ಉದ್ದಟಯ್ಯ, ಮಯೂರ, ಕಾಳಿದಾಸ, ಹಲಾಯುದ, ಕೇಶಿರಾಜ ಮಲುಹಣ, ಬಾಣ ಭೋಜ, ಭಲ್ಲಟ ಮತ್ತು ಭಾರವಿ ಎಂಬ ಕವಿಗಳ ಹೆಸರನ್ನು ಸ್ಮರಿಸಿ ಮಹಾಕೃತಿಯ

ರಚನೆಗೆ ತೊಡಗಿದೆನು. ಪೂರ್ವಕವಿಗಳು ನನಗೆ ನೆರವಾಗಿ ನನ್ನ ಕೃತಿಯನ್ನು ನಡೆಸಬೇಕು. ಹಾಗೂ ನನ್ನ ಕೃತಿಯನ್ನು ತಿದ್ದಬೇಕು ಎನ್ನುವನು.

ಕಾಲುವಿಡಿವೆ ವಾಲ್ಮೀಕಿಯ ಚಾಚುವೆ
ಭಾಳವ ಬಾಣನಡಿಗಳಲ್ಲಿ|
ಕಾಳಿದಾಸಗೆ ದಾಸನಪ್ಪೆ ನುಳಿದ ಕವಿ
ಜಾಲದ ಜಯವೆಂದು ಬಲಗೊಂಬೆ॥

**ಸೊಬಗಿನ ಸೋನೆ(೧-೧೩)**

ದೇಪರಾಜನು ತನ್ನ ಸೊಬಗಿನ ಸೋನೆಯ ೧೩ನೇ ಪದ್ಯದಲ್ಲಿ ಕವಿ ವಾಲ್ಮೀಕಿ ಬಾಣ ಮತ್ತು ಕಾಳಿದಾಸರಿಗೆ ದಾಸನಾಗುತ್ತೇನೆ. ಉಳಿದ ಕವಿಗಳಿಗೆ ಜಯವಾಗಲೆಂದು ಹಾರೈಸುತ್ತಾನೆ.

ಷಡಕ್ಷರದೇವನು ಪೂರ್ವ ಕವಿಸ್ತುತಿಯನ್ನು ಸ್ವಲ್ಪ ವಿವರವಾಗಿಯೇ ಮಾಡಿದ್ದಾನೆ. ಸೋಮನಾಥ ಹರಿಹರ ಮತ್ತು ಪದ್ಮರಸರನ್ನು ಸಾಮಾನ್ಯವಾಗಿ ತನ್ನ ಎಲ್ಲ ಕಾವ್ಯಗಳಲ್ಲಿಯೂ ಭಕ್ತಿಯಿಂದ ಸ್ಮರಿಸುತ್ತಾನೆ. ಹರಿಹರನುದಿತ ಮಾರ್ಗದಲ್ಲಿ ಕಾವ್ಯವನ್ನೊರೆದ ಷಡಕ್ಷರಿಯ ಮಾತುಗಳನ್ನು ಅವನ ವಾಣಿಯಲ್ಲಿಯೇ ಕೇಳಬೇಕು.

ಗುರು ಸೋಮನಾಥ ಹರಿಹರ
ಹರಕವಿ ಪದ್ಮರಸ ಮುಖ್ಯರಂ ಬಲವಂದಾ
ದರದಿಂದೆ ಮಣಿದು ನೆಗಟ್ದಿರೆ
ನುರುತರ ಶಿವಲೀಲೆ ಮಿಸುಪ ಸತ್ಕೃತಿಯನಿದಂ

**ಶಬರ ಶಂಖರ ವಿಳಾಸ(೧.೫)**

ಕುಮಾರ ವಾಲ್ಮೀಕಿ ತನ್ನ ತೊರವೆ ರಾಮಾಯಣದಲ್ಲಿ ಆದಿಕವಿಯಾದ ಕವಿರಾಜ ಹಂಸನನ್ನು ಸ್ತುತಿಸುತ್ತಾನೆ. ಕವಿರಾಜನೆಂಬುವನು ಆದಿಕವಿಯಾಗಿರಬಹುದು. ಕವಿ ಕುಲಕಮಲಕ್ಕೆ ಮಿತ್ರನಂತಿರುವ ಮಹಾದಿವೌಕಸ ಪ್ರಸಿದ್ಧ ಬಾಷಾ ಪಂಡಿತನಾದ ಕವಿಜನೋತ್ತಂಸ ವೇದ ಗಳನ್ನು ಅಧ್ಯಯನ ಮಾಡಿದ ಮಹಾಮುನಿ ಪ್ರಾಚೇತಸಂ ಎಂಬುವವನಿಗೆ ವಂದಿಸುತ್ತಾನೆ.

ಆದಿಕವಿ ಕವಿರಾಜ ಹಂಸನ
ನಾದಿಕವಿ ಕವಿ ಕುಲಕಮಲ ಮಿತ್ರ ಮ
ಹಾದಿ ವೌಕಸ ಪ್ರಚುರ ಭಾಷಾ ಕವಿಜನೋತ್ತಂಸ
ವೇದಗರ್ಭ ವರಪ್ರಸಾದಾ

ಹ್ಲಾದ ರಘುವರ ಕಥಾರ್ವಿಯ
ಲೋದದಿಂದು ಮಹಾಮುನಿ ಪ್ರಾಚೇತಸಂ ವಂದೇ

**ತೊರವೆ ರಾಮಾಯಣ(೧-೮)(ಕುಮಾರವಾಲ್ಮೀಕಿ)**

ಷಡಕ್ಷರ ತನ್ನ ಇನ್ನೊಂದು ಪ್ರಸಿದ್ಧವಾದ ಕೃತಿ ರಾಜಶೇಖರ ವಿಳಾಸದಲ್ಲಿ ಪೂರ್ವದ ಹಲವು ಕವಿಗಳನ್ನು ಉಲ್ಲೇಖಿಸಿ ಅವರನ್ನು ಬಣ್ಣಿಸುವನು.

ರೇಣುಕ ರಾಮಪಂಡಿತ ಮಹಾಮರುಳಾರ್ಯರ ಮಾಯಿದೇವರಂ
ಜಾಣನ ಜಕ್ಕಣಾರ್ಯನ ಜಗನ್ನುತ ಮಲ್ಹಣ ಮಲ್ಲಣಾರ್ಯರಂ।
ಪ್ರೀಣಿತ ಶಂಭುಶಂಕರ ಹರೀಶ್ವರ ರಾಘವ ಕೇಶಿರಾಜರಂ
ಮಾಣದೆ ಬಣ್ಣಿಸುತ್ತೆಱಗಿ ಮೇಣ್ ಪಡೆವೆಂ ಪರಮಾರ್ಥ ಸಿದ್ಧಿಯಂ॥

**ರಾಜಶೇಖರ ವಿಳಾಸ(೧-೭)**

ಪಂಪನ ಪ್ರಭಾವ ಕವಿ ನಂಜುಂಡನ ಮೇಲೂ ಆಗಿದೆ. ಅದಕ್ಕಾಗಿಯೇ ಕನ್ನಡ ಕಾವ್ಯಕ್ಕೆ ಮೊದಲಿಗನಾದ ಪಂಪರಾಜನ ಚೆನ್ನುಡಿಗಳಿಗೆಱಗುವೆನು ಎಂದಿರುವನು. ನಂತರದ ಪದ್ಯಗಳಲ್ಲಿ ನೇಮಿಚಂದ್ರ ಜನ್ನ, ಗುಣನಂದಿ, ನಾಗಚಂದ್ರ, ರನ್ನ, ಹರಿಹರ ಮಧುರ, ಬಾಣ ಮತ್ತು ಕವಿ ಕಾಳಿದಾಸನನ್ನು ಕುರಿತು ಸ್ಮರಿಸುತ್ತಾನೆ.

ಕನ್ನಡ ಕವಿತೆಗೆ ಮೊದಲಿಗನೆಂದೆಂ
ಬುನ್ನತ ಕೀರ್ತಿ ಕಾಮಿನಿಯ।
ಬೆನ್ನ ಬಿಡದೆ ತೊಳಲುವ ಪಂಪರಾಜನ
ಚೆನ್ನುಡಿಗಳಿಗೆಱಗುವೆನು॥

**ರಾಮನಾಥ ಚರಿತಂ(೧-೩೦)**

ಪಂಪನಿಂದಲೇ ಕನ್ನಡ ಕಾವ್ಯ ಪ್ರಾರಂಭವಾಗಿದ್ದರೂ ಪಂಪನ ಕೀರ್ತಿಯೆಂಬ ಕಾಮಿನಿ ಅವನನ್ನು ಬಿಟ್ಟಿಲ್ಲ ಎಂಬುದು ಅಕ್ಷರಶಃ ನಿಜವಾದುದು. ಪಂಪನ ನುಡಿ ಚೆನ್ನ ಎಂದು ನಂಜುಂಡ ಕವಿಯ ಮಾತನ್ನು ಮೆಚ್ಚಲೇಬೇಕು. ಮೃದು ಮಧುರವಾದ ಪಂಪನ ನುಡಿ ಗಳಿಂದ ಆಕರ್ಷಿತನಾದ ಕವಿ ನಂಜುಂಡ ಪಂಪನ ಸ್ಮರಣೆ ಮಾಡುವುದರ ಮೂಲಕ ಪೂರ್ವ ಕವಿ ಸ್ಮರಣೆ ಮಾಡಿದ್ದಾನೆ.

ಕಾದಂಬರಿಯ ಸುಡಿಸಿ ಲೀಲಾವತಿ
ಗಾದರದಿಂ ಕಪ್ಪನಿಟ್ಟು।
ಮೇದಿನಿಯನು ಮೆಚ್ಚಿಸಿದ ನೇಮಿಚಂದ್ರನ
ಪಾದಗಳನು ಬಲಗೊಂಬೆ॥

**ರಾಮನಾಥ ಚರಿತ(೧-೩೧)**

ಕಾದಂಬರಿಯನ್ನು ಸುಡಿಸಿ ಲೀಲಾವತಿ ಎಂಬ ಕಾವ್ಯವನ್ನು ಕಾಣಿಕೆಯಾಗಿ ಕೊಟ್ಟು ಭೂಮಿಯ ಜನರಿಂದ ಮೆಚ್ಚುಗೆ ಪಡೆದ ನೇಮಿಚಂದ್ರನ ಪಾದಗಳಿಗೆ ನಮಸ್ಕರಿಸುತ್ತೇನೆ. ಬಹುಶಃ ಕಾದಂಬರಿಯನ್ನು ಮರೆಸಿ ಲೀಲಾವತಿ ಎಂಬ ಕಾವ್ಯಕನ್ನಿಕೆಗೆ ದೃಷ್ಟಿ ಬೊಟ್ಟನಿಟ್ಟಿರ ಬಹುದು ಕವಿ ನೇಮಿಚಂದ್ರ.

ಬಲ್ಲಿದ ಕರ್ಣಾಟ ಕವಿಗಳೆಲ್ಲರ ಗೆಲ್ದು
ಬಲ್ಲಾಳ ಭೂಮೀಶ್ವರನ।
ನಿಲ್ಲದೆ ಮೆಚ್ಚಿಸಿಕೊಂಡ ಜನ್ನನ ಪಾದ
ಪಲ್ಲವಗಳಿಗೆಱಗುವೆನು॥

ರಾಮನಾಥ ಚರಿತ(೧–೩೨)

ಕರ್ನಾಟಕ ಕವಿಗಳೆಲ್ಲರ ಗೆಲ್ದು ಅಂದರೆ ಬಹುಶಃ ಕರ್ಣಾಟಕದ ಎಲ್ಲ ಕವಿಗಳ ಮನವನ್ನು ಜನ್ನ ಕವಿ ಗೆದ್ದಿರಬಹುದು. ಅದಕ್ಕಾಗಿಯೇ ಬಲ್ಲಾಳ(ಆಶ್ರಯದಾತ)ನಿಂದ ಮೆಚ್ಚುಗೆ ಪಡೆದ ಜನ್ನ ಕವಿಯ ಪಾದ ಪಲ್ಲವಗಳಿಗೆ ವಂದಿಸುವೆ ಎಂದಿರುವನು. ಇಂದಿಗೂ ಅವನ ಯಶೋಧರ ಚರಿತೆ ಹಾಗೂ ಅನಂತನಾಥ ಪುರಾಣಗಳು ಸಾಹಿತ್ಯಾಭ್ಯಾಸಿಯ ಮನವನ್ನು ಕಲಕುವಂತಿವೆ.

ಇಂಪುವಡೆದ ಕವಿತಾರಸ ಲಹರಿಯ
ಸೊಂಪಿನಿಂ ವಾದಿಗಳೆರ್ದೆಗೆ।
ಕಂಪನವನು ಪುಟ್ಟಿಸುತ ಗುಣನಂದಿಯ
ನಾಂ ಪೊಗಳುತ ಬಲಗೊಂಬೆ॥

ರಾಮನಾಥ ಚರಿತ(೧–೨೩)

ಇಂಪಾದ ಕಾವ್ಯರಸ ಲಹರಿಯನ್ನೆ ಸೊಂಪಾಗಿಸಿ ವಾದಿಗಳ ಎದೆಗೆ ಕಂಪನ ಹುಟ್ಟಿಸುವ ಗುಣನಂದಿಯನ್ನು ಹೊಗಳುತ ಕಾವ್ಯ ಪ್ರಾರಂಭಿಸುವೆ ಎನ್ನುತ್ತಾನೆ.

ಗಜಗನ ಗುಣವರ್ಮನ ನಾಗಚಂದ್ರನ
ಸುಜನೋತ್ತಂಸನಸಗನ।
ಸುಜನರತ್ನನ ಶಾಂತಿವರ್ಮನ ಪದಸರ
ಸಿಜಗಳಿಗಾನೆಱಗುವೆನು॥

ರಾಮನಾಥ ಚರಿತೆ(೧–೩೪)

ಈ ಮೇಲಿನ ನಾಲ್ಕು ಪದ್ಯಗಳಲ್ಲಿ ಒಂದೊಂದು ಪದ್ಯದಲ್ಲಿ ಒಬ್ಬೊಬ್ಬ ಕವಿಯನ್ನು ಪಂಪ, ನೇಮಿಚಂದ್ರ, ಜನ್ನ ಮತ್ತು ಗುಣನಂದಿಯರನ್ನು ನೆನೆದ ನಂಜುಂಡಕವಿ ಈ

ಪದ್ಯದಲ್ಲಿ ಗಜಗ, ಗುಣವರ್ಮ, ನಾಗಚಂದ್ರ, ಸುಜನೋತ್ತಂಸ, ಅಸಗ, ರನ್ನ, ಶಾಂತಿವರ್ಮ ಇತ್ಯಾದಿ ಕವಿಗಳ ಪಾದ ಕಮಲಗಳಿಗೆ ನಮಸ್ಕರಿಸಿ ಕಾವ್ಯ ರಚನೆಗೆ ತೊಡಗುತ್ತಾನೆ.

ರಗಳೆಯ ಕವಿಯಂದು ತೆಗಳೆ ವಾದಿಗಳೆಲ್ಲ
ಸೊಗಸೊಗುವಂತೆ ವಸ್ತುಕವ।
ನೆಗಳಿದ ಹಂಪೆಯ ಹರಿಯಣ್ಣನ ಪದ
ಯುಗಳಕೆಟಿಗುವೆನಟ್ತಿಯೊಳು॥

**ರಾಮನಾಥ ಚರಿತ(೧-೩೫)**

ರಗಳೆಯ ಕವಿಯೆಂದೆ ವಾದಿಸುವ ಕವಿಗಳು ತೆಗಳಿದರು. ಸೊಗಸಾದ ವಸ್ತುಕವನ್ನು ಬಳಸಿ ಕಾವ್ಯ ರಚಿಸಿದ ಹರಿಯಣ್ಣ(ಹರಿಹರ)ನ ಪಾದಗಳಿಗೆ ಎರಗುವೆನು. ವರ್ಣಕದ ಬದಲಾಗಿ ವಸ್ತುಕವನ್ನು ಬಳಸಿದ ಕವಿ ಎಂದು ಹೇಳಿರುವನು. ಮೂವತ್ತಾರನೇ ಪದ್ಯದಲ್ಲಿ ಮಧುರಕವಿಯನ್ನು ಸ್ತುತಿಸುತ್ತಾನೆ.

ಹಿಂದಣವರ ಸವಿವಾತುಗಳಿಗೆ ಸರಿ
ಬಂದಿದೆ ಮೆಲ್ನುಡಿ ನಿನ್ನ
ಎಂದು ಕೊಂಡಾಡಿಸಿಕೊಂಡ ಮಧುರನಾ
ನಂದದಿ ಬಲಗೊಂಬೆನೊಲಿದು
ಸರಸತಿ ಬಾಣೀ ಶಬ್ದಕದಂತತೆ
ಇರವ ಪುಟ್ಟಿಸಿ ಬಾಣನೆಂದು
ಕರೆಯಿಸಿಕೊಂಡಳೆಂಬಂತಿರ್ದ ಬಾಣನ
ಚರಣಕಾನೊಲಿದೆಱಗುವೆನು

**ರಾಮನಾಥ ಚರಿತ(೧-೩೭)**

ಕ್ಷೋಣಿಯ ತಲೆದೂಗಿಸುವ ಕವಿತೆಯ ಪೇಳ್ದು
ಮಾಣದೆ ಬಲ್ಲವರಿಂದ
ಬಾಣೋಚ್ಛಿಷ್ಟಂ ಜಗತ್ರಯ ಮೆನಿಸಿದ
ಬಾಣನ ಬಲಗೊಂಬೆನೊಲಿದು

**ರಾಮನಾಥ ಚರಿತ(೧-೩೮)**

ಮೇಲಿನ ಮೂವತ್ತೇಳು ಮತ್ತು ಮೂವತ್ತೆಂಟನೆ ಪದ್ಯದಲ್ಲಿ ಕವಿ ನಂಜುಂಡ ಬಾಣಭಟ್ಟನನ್ನು ಸ್ಮರಿಸುತ್ತಾನೆ. ಸರಸ್ವತಿಯೇ ವಾಣೀ ಎಂಬ ಶಬ್ದರೂಪವೇ ಬಾಣ ಎಂದೆನಿಸಿ, ಹುಟ್ಟಿದ ಬಾಣನ ಚರಣಕೆ ವಂದಿಸುವೆನೆಂದೂ, ಇನ್ನೊಂದು ಪದ್ಯದಲ್ಲಿ ಭೂಮಿಯ ಜನರು

ತಲೆದೂಗುವಂತೆ ಕಾವ್ಯರಚಿಸಿ ಬಾಣ ಉಗುಳಿದ್ದರಿಂದಲೇ ಜಗತ್ತಿನ ಸಾಹಿತ್ಯ ಸೃಷ್ಟಿಯಾಯಿತು ಎನಿಸಿಕೊಂಡ ಬಾಣನ ಪಾದಗಳಿಗೆರಗುವೆನು ಎಂದಿರುವನು.

ಕವಿತಾ ವನಿತೆಯ ಸಂಗಕೆ ಪೆಣ್ತನ
ಸವಿಯಲ್ಲವೆಂದಾ ವಾಣಿ
ತವಕದಿಂ ಗಂಡುರೂಪಾತಳೆಂಬಂತಿರ್ದ
ಕವಿಕಾಳಿದಾಸಗೆಱಗುವೆ

ರಾಮನಾಥ ಚರಿತ(೧-೩೯)

ಕಾವ್ಯ ಎಂಬ ವನಿತೆಯ ಸಂಗಕ್ಕಾಗಿ ಹಾತೊರೆದು ವಾಣಿಯೇ ಹೆಣ್ಣು ರೂಪ ತೊರೆದು ತವಕದಿಂದ ಗಂಡು ರೂಪವನ್ನು ಧರಿಸಿದಳೆಂಬಂತಿರುವ ಅಂದರೆ ಸರಸ್ವತಿಯೇ ಕಾಳಿದಾಸನಾಗಿ ಜನಿಸಿದಳೊ ಎನ್ನುವ ಹಾಗಿರುವ ಕವಿ ಕಾಳಿದಾಸನಿಗೆ ಎರಗುವೆನು.

ಆ ಸರಸ್ವತಿ ನೊಲಿಸಿಯವಳಿಂ ಕಾಳಿ
ದಾಸೋಹಮೆಂದಾಡಿಸಿದ॥
ಬಾಸುರ ಸಕಲ ಕಲಾಕೋವಿದ ಕಾಳಿ
ದಾಸನಡಿಗಳಿಗೆಱಗುವೆ॥

ರಾಮನಾಥ ಚರಿತ(೧-೪೦)

ಮೇಲಿನ ೩೯ ಮತ್ತು ೪೦ನೇ ಪದ್ಯಗಳಲ್ಲಿ ಕಾಳಿದಾಸನಿಗೆ ಸ್ಮರಿಸುತ್ತಾನೆ. ಸರಸ್ವತಿಯನ್ನು ಒಲಿಸಿಕೊಂಡು, ಕಾಳಿಯಿಂದಲೇ ಕಾಳಿದಾಸನೆನಿಸಿಕೊಂಡಿರುವ ಸಕಲ ಕಲಾಕೋವಿದನಾದ ಕಾಳಿದಾಸನ ಅಡಿಗಳಿಗೆ ಎರಗುತ್ತಾನೆ.

ನಂಜುಂಡ ಕವಿಯು ತನ್ನ ರಾಮನಾಥ ಚರಿತ ಅಥವಾ ಕುಮಾರರಾಮನ ಸಾಂಗತ್ಯದಲ್ಲಿ ಸುಮಾರು ಹದಿಮೂರು ಪದ್ಯಗಳ ವ್ಯಾಪ್ತಿಯನ್ನು ಬಳಸಿ ಪೂರ್ವಕವಿಗಳನ್ನು ಸ್ಮರಿಸಿರುವನು. ಗಜಗ, ಗುಣನಂದಿ, ಗುಣವರ್ಮ ಇತ್ಯಾದಿ ಪೂರ್ವದ ಹಳಗನ್ನಡದ ಕವಿಗಳು, ಪಂಪ, ನೇಮಿಚಂದ್ರ, ನಾಗಚಂದ್ರ, ಜನ್ನ ಇತ್ಯಾದಿ ಹಳಗನ್ನಡದ ಕವಿಗಳು ಹರಿಹರ ಇತ್ಯಾದಿ. ನಡುಗನ್ನಡದ ಕವಿಗಳು ಹಾಗೂ ಸಂಸ್ಕೃತದ ಕವಿಗಳಾದ ಬಾಣ, ಕಾಳಿದಾಸ ಇತ್ಯಾದಿ ಕವಿಗಳನ್ನು ಹೆಸರಿಸಿ ಸುದೀರ್ಘವಾಗಿ ಕವಿ ಪರಂಪರೆಯನ್ನು ಕುರಿತು ಸ್ಮರಿಸುತ್ತಾನೆ.

ಭೀಮಕವಿಯು ತನ್ನ 'ಬಸವ ಪುರಾಣ'ದಲ್ಲಿ ತನಗಿಂತ ಹಿಂದಿನ ಹಲವು ಕವಿಗಳನ್ನು ನೆನೆಯುತ್ತಾನೆ. ಅದರಲ್ಲಿ ವೀರಶೈವ ಕವಿಗಳೇ ಇರುವುದು ಕಂಡುಬರುವುದು.

ಕೊಂಡಗುಳಿ ಕೇಶಿಗಳ ಸಿರಿಪತಿ
ಪಂಡಿತರ ಶಿವಲೆಂಕ ಮಂಚಣ
ಪಂಡಿತರ ಗುರುಮಲ್ಲಿಕಾರ್ಜುನ ಪಂಡಿತರ ಕೃಪೆಯಿಂ
ಪಂಡಿತೋಕ್ತಿಯೊಳರ್ಗಳಿತ್ತು
ದ್ದಂಡ ಮತಿಯಿಂದಿಳೆಗೆ ಬಸವಣ
ದಂಡನಾಥನ ಕೃತಿಯನೊರೆವೆ ನಾಖಂಡಿತೋತ್ಸವದಿಂ

**ಬಸವಪುರಾಣ(೧-೧೧)**

## ಪೂರ್ವಕವಿಗಳ ಕಾವ್ಯಗುಣಗಳು ಹಾಗೂ ಪ್ರಾಮುಖ್ಯತೆಗಳು

ಕಾವ್ಯ ಪರಂಪರೆಗೆ ಸಂಬಂಧಿಸಿದಂತೆ ಪ್ರಾಚೀನ ಕನ್ನಡ ಭಾಷೆಯ ಕವಿಗಳಿಗೆ ಕೆಲವು ವಿಶೇಷ ಗುಣಗಳು ಇರುತ್ತವೆ. ಆ ಮೂಲಕ ಕವಿಗಳು ತಮ್ಮ ಕಾವ್ಯ ಕಲ್ಪನಾ ಕ್ರಮವನ್ನು ಕಟ್ಟಿಕೊಂಡು ಬಂದಿದ್ದಾರೆ. ಹಿಂದಿನ ಒಬ್ಬೊಬ್ಬ ಕವಿಯಲ್ಲೂ ಒಂದೊಂದು ಕಾವ್ಯ ಸಾಮರ್ಥ್ಯವಿರುವುದು ಕಂಡುಬರುತ್ತದೆ. ಅದನ್ನು ಸ್ಮರಿಸುವ ಮುಂದಿನ ಕವಿಗಳು ಪೂರ್ವ ಕವಿಗಳ ಕಾವ್ಯ ಸಾಮರ್ಥ್ಯ ತನ್ನಲ್ಲೂ ಬರಲಿ ಎಂದು ಪೂರ್ವ ಕವಿಗಳನ್ನು ಸ್ಮರಿಸುತ್ತಾರೆ.

### ೧. ಅಗಸನ ದೇಸೆ



ನಯಸೇನನು ತನ್ನ ಧರ್ಮಾಂಮೃತದಲ್ಲಿ ಅಸಗನ ದೇಸೆ ಎಂಬ ಪದವನ್ನು ಬಳಸುತ್ತಾನೆ. ಪಂಪಪೂರ್ವ ಯುಗದಲ್ಲಿ ಅಸಗ, ಗುಣನಂದಿ, ಗುಣವರ್ಮ ಎಂಬ ಕವಿಗಳಾಗಿ ಹೋಗಿದ್ದಾರೆ ಎಂಬ ಅಂಶ ಕವಿರಾಜಮಾರ್ಗದಿಂದ ಲಭ್ಯವಾಗುತ್ತದೆ. ಇವರು ಬಹುಶಃ ಕವಿರಾಜಮಾರ್ಗ ಕಾಲದಲ್ಲೇ ಇರಬಹುದು. ಅಸಗನ ವರ್ಧಮಾನ ಚರಿತಂ ಎಂಬ ಸಂಸ್ಕೃತ ಗ್ರಂಥದಿಂದ ಆತ ಸುಮಾರು ಕ್ರಿ.ಶ.೧೫೩ರಲ್ಲಿ ಇದ್ದನೆಂದು ತಿಳಿಯುತ್ತದೆ. 'ಶ್ರೀ ಅಸಗಭೂಪಕೃತೇ' ಎಂಬ ಅಲ್ಲಿನ ಹೇಳಿಕೆಯಿಂದ ಅವನು ರಾಜನಾಗಿದ್ದನೆಂದು ತಿಳಿಯುತ್ತದೆ. ಈತನು 'ಕರ್ಣಾಟ ಕುಮಾರ ಸಂಭವ' ಎಂಬ ಕಾವ್ಯವನ್ನು ರಚಿಸಿದ್ದಾನೆ. ಸಂಸ್ಕೃತ ಮತ್ತು ಕನ್ನಡ ಉಭಯ ಭಾಷಾ ಪಂಡಿತನಾಗಿದ್ದ ಅಸಗನು ದೇಶಿ ಪದಗಳನ್ನು ಹೆಚ್ಚು ಬಳಸಿ ಕಾವ್ಯವನ್ನು ರಚಿಸುತ್ತಿದ್ದನೆಂದು ಕಂಡುಬರುತ್ತದೆ. ಅದಕ್ಕಾಗಿ ಅಸಗನ ದೇಸೆ ಎಂದು ಧರ್ಮಾಂಮೃತದ ಕವಿ ನಯಸೇನನು ಅಸಗನನ್ನು ಅಚ್ಚಗನ್ನಡದ ಕವಿ ಎಂದು ಕರೆಯುತ್ತಾನೆ. ನಯಸೇನನು ಕೂಡ ಸಂಸ್ಕೃತದ ಬಾಹುಳ್ಯವಿಲ್ಲದೆ ಅಚ್ಚಗನ್ನಡ ದೇಸಿವೆತ್ತ ಕನ್ನಡದ ಅಭಿಮಾನಿ ಅವನ ಕಾವ್ಯದಲ್ಲಿ ಸಾಲು ಸಾಲು ಸರಪಣಿಯಂತೆ ಬರುವ ಉಪಮೆಗಳು ವಿಡಂಬನೆಗಳು ಹಾಸ್ಯರಸವನ್ನು ಉಕ್ಕಿಸುತ್ತವೆ.

**೨. ಪೊನ್ನನ ಮಹೋನ್ನತಿವೆತ್ತ ಬೆಡಂಗು**

ಕನ್ನಡದ ಕವಿ ಅಸಗ ಹಾಗೂ ಸಂಸ್ಕೃತದ ಕವಿ ಕಾಳಿದಾಸನಿಗಿಂತ ಮಿಗಿಲೆಂದು ಹೇಳಿಕೊಂಡ ಪೊನ್ನ ಕವಿಯಲ್ಲಿ ಒಂದು ವಿಶೇಷವಾದ ಕಾವ್ಯಗುಣವಿದೆಯೆಂದು ಕವಿ ನಯಸೇನನು ಹೇಳಿಕೊಂಡಿದ್ದಾನೆ. ತನ್ನ ಧರ್ಮಾಮೃತದ ೨೯ನೇ ಪದ್ಯದಲ್ಲಿ(ಪೀಠಿಕಾ ಪದ್ಯ) ಪೊನ್ನ ಕವಿಯು ಕಾವ್ಯಗಳಲ್ಲಿ ಅತ್ಯಂತ ಚಲುವಾದ ಪದಗಳನ್ನು ಬಳಸಿರುವ ಅಂಶ ತಿಳಿದುಬರುತ್ತದೆ. ಮಹೋನ್ನತಿ ಎಂದರೆ ಭವ್ಯವಾಗಿರುವ ಬೆಡಂಗು ಎಂದರೆ ಚೆಲುವು ಎಂದು ಅರ್ಥವಾಗುತ್ತದೆ.

**೩. ಪಂಪನ ಅಸದೃಶಮಪ್ಪ ರಸಂ**

ಕನ್ನಡ ಕಾವ್ಯ ಸಾಮ್ರಾಜ್ಯದ ಮೊಟ್ಟ ಮೊದಲ ಕವಿ ಎನಿಸಿಕೊಂಡ ಪಂಪನ ಕಾವ್ಯಗಳಲ್ಲೂ ಒಂದು ವಿಶೇಷವಾದ ಗುಣವಿದೆ ಎಂದು ಕವಿ ನಯಸೇನನು ಧರ್ಮಾಮೃತ(ಪದ್ಯ ೧.೨೯)ದಲ್ಲಿ ಹೇಳಿದ್ದಾನೆ. ಸದೃಶ ಶಬ್ದದ ವಿರುದ್ಧಾರ್ಥಕ ಪದವೇ ಅಸದೃಶ ಸದೃಶ ಎಂದರೆ ಕಾಣುವ ಅಸದೃಸವೆಂದರೆ ಕಾಣದಿರುವ ಎಂದು ಅರ್ಥ ಉಂಟಾಗುತ್ತದೆ. ಅಂದರೆ ಪಂಪನ ಎರಡೂ ಕಾವ್ಯಗಳಲ್ಲಿ ರಸಗಳು ಅಸದೃಶವಾಗಿರುತ್ತವೆ ಎಂದು ನಯಸೇನನ ಅಭಿಪ್ರಾಯ. ನಿದರ್ಶನಕ್ಕೆ ಪಂಪಭಾರತ ವೀರರಸ ಪ್ರಧಾನವಾದ ಕಾವ್ಯವಾಗಿದ್ದರೂ ಅದರಲ್ಲಿ ಆ ರಸ ಕಾಣದಂತಿರುತ್ತದೆ. ಸಾಮಾನ್ಯವಾಗಿ ಕಾವ್ಯಗಳು ನವರಸಭರಿತವಾಗಿರಬೇಕು, ಅಷ್ಟಾದಶ ವರ್ಣನೆಗಳಿಂದ ಕೂಡಿರಬೇಕೆಂಬುದು ಕಾವ್ಯ ಮೀಮಾಂಸಕರು ಹೇಳುತ್ತಾರೆ. ಆದರೆ ಕೆಲವು ಕವಿಗಳಲ್ಲಿ ರಸ ಕಂಡು ಕಾಣದಂತಿರುತ್ತದೆ. ಹಾಗಾಗಿ ಪಂಪನ ರಸ ಕಲ್ಪನೆ ಅಸದೃಶವಾದುದು.

**೪. ಗಜಾಂಕುಶ ನೊಳ್ಪುವೆತ್ತು**

ಗಜಾಂಕುಶನು ಪಂಪಪೂರ್ವಯುಗದ ಕವಿ. ಗಜಾಂಕುಶದಲ್ಲಿ ಒಳ್ಳೆಯ ಗುಣಗಳಿವೆ ಎಂದು ನಯಸೇನ ತನ್ನ ಕಾವ್ಯದಲ್ಲಿ ಸಮರ್ಥಿಸುತ್ತಾನೆ. ಒಳ್ಪುವೆತ್ತು ರಂಜಿಸುವ ಅರ್ಥದೃಷ್ಟಿ ಎಂಬ ಪದದಿಂದ ಗಜಾಂಕುಶನ ಕಾವ್ಯದಲ್ಲಿ ಒಳ್ಳೆಯ ಅರ್ಥವನ್ನು ಪದಗಳಿರುತ್ತವೆ ಎಂಬುದು ತಿಳಿದುಬರುತ್ತದೆ. ಕಾವ್ಯಾರಾಧಕರನ್ನು ರಂಜಿಸುವ ಗುಣಗಳು ಗಜಾಂಕುಶನ ಕಾವ್ಯಗಳಲ್ಲಿವೆ. ಅವು ತನಗೆ ಬರಲೆಂದು ನಯಸೇನನು ಪ್ರಾರ್ಥಿಸುತ್ತಾನೆ.

**೫. ಗುಣವರ್ಮನ ಜಾಣ್**

ಜಾಣ್ ಎಂಬ ಪದ ಕಾವ್ಯ ಸಾಮರ್ಥ್ಯವಾಗಿದೆ. ಗುಣವರ್ಮನ ಕಾವ್ಯದಲ್ಲಿ ಕಾವ್ಯರಚನಾ ಕೌಶಲವಿದೆ. ಹಾಗಾಗಿ ನಯಸೇನನು ಗುಣವರ್ಮನ ಜಾಣ್ನುಡಿ ತನ್ನಲ್ಲೂ ಬರಲೆಂದು ಪ್ರಾರ್ಥಿಸುತ್ತಾನೆ. ಜನ್ನ ಕವಿಯೂ ತನ್ನ ಅನಂತನಾಥಪುರಾಣ(೧-೩೦)ದಲ್ಲಿ ತುಣವರ್ಮನ ಜಾಣ್ಣುಡಿ ಎನ್ನುತ್ತಾನೆ. ಜಾಣ್ನುಡಿ ಎಂಬ ಪದ ಕಾವ್ಯಗಳಲ್ಲಿ ಪುನಃ ಪುನಃ ಬಂದಿದೆ.

**೬. ರತ್ನನ ಓಜೆ**

ಒಬ್ಬೊಬ್ಬ ಕವಿಯ ಒಂದೊಂದು ಕಾವ್ಯ ರಚನಾ ವಿಶಿಷ್ಠ ಪ್ರತಿಭೆಯನ್ನು ಕುರಿತು ಹೇಳುವ ನಯಸೇನನು ಕವಿ ರತ್ನನ ಅಥವಾ ರನ್ನನ ಕಾವ್ಯ ರಚನಾ ಸಾಮರ್ಥ್ಯದಲ್ಲಿ ಕವಿ ರನ್ನನ 'ಓಜೆ' ಎಂದು ಹೇಳುತ್ತಾನೆ. ಓಜೆ ಎನ್ನುವ ಪದ ಸಾಹಿತ್ಯ ಎಂದಾಗುತ್ತದೆ. 'ಓಜರು' ಎಂದರೆ ಗುರುಗಳು ಗುರುತ್ವ ಶಕ್ತಿಯನ್ನು ಹೊಂದಿದವರನ್ನು ಓಜರು ಎಂದು ಕರೆಯಲಾಗುತ್ತಿತ್ತು. ಕಾವ್ಯ ರಚನಾ ಕೌಶಲವನ್ನು ಹೊಂದಿದ ಅಥವಾ ಪಾಂಡಿತ್ಯವಿರುವ ಕವಿಗಳು ಮಾತ್ರ ಓಜರೆನಿಸಿಕೊಳ್ಳುತ್ತಿದ್ದರು. ರನ್ನ ಪ್ರತಿಭಾವಂತ ಕವಿ ಹಾಗಾಗಿ ನಯಸೇನ ರನ್ನನ ಓಜೆ ಎಂಬ ಪದವನ್ನು ಉಪಯೋಗಿಸಿರುವನು.

ನಯಸೇನನು ಪೂರ್ವಕವಿಗಳು ಹೇಳುವ ಎಲ್ಲಾ ಲಕ್ಷಣಗಳು ಅಂದರೆ ಅಸಗನ ದೇಸಿಯತೆ ಪೊನ್ನನ ಬೆಡಗು ಪಂಪನ ರಸ ಗಜಾಂಕುಶನ ಅರ್ಥದೃಷ್ಟಿ ಗುಣವರ್ಮನ ಜಾಣ್ನುಡಿ ರನ್ನನ ಓಜೆ ಇವುಗಳೆಲ್ಲ ಪೂರ್ವಕವಿಗಳು ಕಟ್ಟಿಕೊಂಡಿರುವ ಕಾವ್ಯಕ್ರಮಗಳು. ಇವುಗಳೆಲ್ಲ ತನ್ನ ಕಾವ್ಯದಲ್ಲೂ ನೆಲಸಲಿ ಎಂದು ಸ್ಮರಿಸಿರುವನು.

ಜನ್ನ ತನ್ನ ಅನಂತನಾತ ಪುರಾಣದಲ್ಲಿ ಗುಣವರ್ಮನ ಜಾಣ್ಣುಡಿ, ಪಂಪನ ಇಂಪು, ಪೊನ್ನನ ಬಗೆ, ನಾಗವರ್ಮನ ಬಹುಜ್ಞತೆ, ರನ್ನನ ಕಾಂತಿ, ನಾಗಚಂದ್ರನ ರಸಭಾವ, ಪುಷ್ಪಬಾಣನ ಮೃದುಬಂಧ ಎಂದು ಹೇಳುತ್ತಾನೆ.

**ಪಂಪನ ಇಂಪು**

ಜನ್ನ ಪೂರ್ವಕವಿಗಳನ್ನು ಸ್ಮರಿಸುತ್ತ ಪಂಪನ ಕಾವ್ಯವನ್ನು ಕುರಿತು ಹೇಳುವ ಪೂರ್ವ ಕವಿಕಾವ್ಯ ಲಕ್ಷಣ ಇಂಪಾಗಿದೆ ಎನ್ನುವನು. ಪಂಪನ ಶೈಲಿಯೇ ಒಂದು ವಿಶಿಷ್ಟವಾದುದು.

ಹಾಗೆಯೇ ಪೊನ್ನನ ಬಗೆ ಎಂದರೆ ರೀತಿ ಎಂದಿರಬೇಕು. ಕಾವ್ಯಮೀಮಾಂಸೆಯಲ್ಲಿ 'ರೀತಿ ರಾತ್ಮಾ ಕಾವ್ಯಸ್ಯಃ' ಎಂದು ವಾಮನ ಹೇಳಿರುವಂತೆ ಕಾವ್ಯದಲ್ಲಿ ಬರುವ ರೀತಿಯೇ ವಿಶೇಷ ಗುಣವಾಗಿದೆ.

**ನಾಗವರ್ಮನ ಬಹುಜ್ಞತೆ**

ಜನ್ನ ಇನ್ನೊಂದು ವಿಶೇಷವಾದ ಪದವನ್ನು ಬಳಸುತ್ತಾನೆ. ಅದೇ ಬಹುಜ್ಞತೇ. ಕಾವ್ಯಮೀಮಾಂಸಕರು 'ಬಹುಜ್ಞತಾ ವ್ಯುತ್ಪತ್ತಿ', ಇತ್ಯಾಚಾರ್ಯ ಎಂದು ಹೇಳುತ್ತಾರೆ. ಏಕೆಂದರೆ ಕಾವ್ಯ ರಚನಕಾರನಿಗೆ ಅಪಾರವಾದ ಜ್ಞಾನವಿರಬೇಕು. ಹಲವು ರೀತಿಯ ವಿಷಯಗಳನ್ನು ಅರಿತುಕೊಳ್ಳುವುದೇ ಬಹುಜ್ಞತೆ ಎನಿಸುತ್ತದೆ. ಹಾಗೂ ರನ್ನನಲ್ಲಿ ಕಾಂತಿ ಇದೆ ಎನ್ನುತ್ತಾನೆ. ಕಾಂತಿ ಎಂದರೆ ಅವನ ಕಾವ್ಯಗಳ ಹೊಳಪು ಎಂದು ಅರ್ಥವಾಗುತ್ತದೆ. ಎಂಥವರನ್ನು ಸೆಳೆಯುವ ಒಂದು ರೀತಿಯ ಆಕರ್ಷಣ ಶಕ್ತಿ ರನ್ನನ ಕಾವ್ಯಗಳಿಗಿದೆ ಎಂಬುದನ್ನು ಪ್ರಸ್ತುತ ಪಡಿಸುತ್ತಾನೆ. ಹಾಗೆಯೇ ನಾಗಚಂದ್ರನಲ್ಲಿ ರಸಭಾವವಿದೆ. ಮೀಮಾಂಸಕರು ವಾಕ್ಯ ರಸಾತ್ಮಕಂ ಕಾವ್ಯ ಎಂದು ಹೇಳುತ್ತಾರೆ(ವಿಶ್ವನಾಥ). ರಸಾತ್ಮಕವಾದ ವಾಕ್ಯಗಳೇ ಕಾವ್ಯ ಎನಿಸಿಕೊಳ್ಳುತ್ತದೆ. ನಾಗಚಂದ್ರನ ಕಾವ್ಯಗಳು ರಸಾತ್ಮಕವಾಗಿದೆ ಎಂದು ಜನ್ನ ತನ್ನ ಅನಂತನಾತ ಪುರಾಣದ ಪೀಠಿಕೆಯಲ್ಲಿ ಹೇಳಿದ್ದಾನೆ.

**ಪುಷ್ಪಬಾಣನ ಮೃದುಬಂಧ**

ಮೃದುಬಂಧವು ಕಾವ್ಯದ ಒಂದು ವಿಶಿಷ್ಟವಾದ ಲಕ್ಷಣವಾಗಿದೆ. ಈ ಅಂಶ ಪುಷ್ಪಬಾಣನಲ್ಲಿದೆ. ಕಾವ್ಯದ ಶಬ್ದಾರ್ಥವನ್ನು ಮೃದುವಾದ ರಚನೆಯಿಂದ ಕೂಡಿರಬೇಕು ಅಂತಹ ಪದಾರ್ಥಗಳ ಸಮೂಹವೇ ಕಾವ್ಯವೆನಿಸಿಕೊಳ್ಳುತ್ತದೆ ಎಂದಿರುವನು. ಪುಷ್ಪಬಾಣದಲ್ಲಿ ಕಾವ್ಯಬಂಧ ಮೃದುಬಂಧವಾಗಿದ್ದರಿಂದಲೇ ಜನ್ನ ಕವಿ ತನ್ನ ಅನಂತನಾಥ ಪುರಾಣದಲ್ಲಿ ಪುಷ್ಪಬಾಣನ ಕಾವ್ಯ ಲಕ್ಷಣವನ್ನು ಸ್ಮರಿಸುತ್ತಾನೆ.

**ಉಭಯಕವಿ**

'ಉಭಯಕವಿ' ಎಂಬುದು ಕೂಡಾ ಚರ್ಚೆಯಾಗಿದೆ. ಒಂದು ಕಡೆ ಉಭಯಕವಿ ಎಂಬುದಕ್ಕೆ ಕೆ.ವಿ.ನಾರಾಯಣ ಅವರು ತೆಲುಗು ಮತ್ತು ಕನ್ನಡ ಭಾಷೆಯಲ್ಲಿ ಪಾಂಡಿತ್ಯವನ್ನು ಪಡೆದವರು ಎಂದಿದ್ದರು. ಅದಕ್ಕೆ ಚಿದಾನಂದಮೂರ್ತಿಯವರು ಅದಲ್ಲ ಎಂದಿದ್ದರು.

ಉಭಯ ಕವಿ ಎಂಬುದು ಕಾವ್ಯದ ವಿಶೇಷ ಲಕ್ಷಣವಾಗಿದೆ. ಉಭಯ ಕವಿ ಎಂಬುದು ಎರಡು ಭಾಷೆಯ ಪಂಡಿತ ಕವಿಗಳು ಎಂದು ಕೆಲವು ಸಂದರ್ಭಗಳಲ್ಲಿ ಅರ್ಥವಾಗುತ್ತದೆ. ನಿದರ್ಶನಕ್ಕೆ ಸಂಸ್ಕೃತ ಮತ್ತು ಕನ್ನಡ ದ್ವಿಭಾಷಾ ಕವಿಗಳು ಇನ್ನೂ ಕೆಲವು ಸಂದರ್ಭಗಳಲ್ಲಿ ಇಬ್ಬರೂ ಕವಿಗಳನ್ನು ಸೂಚಿಸುತ್ತದೆ. ರನ್ನ ಕವಿಯ ಗದಾಯುದ್ಧ(ಪದ್ಯ ೧.೮) ಪೀಠಿಕೆಯಲ್ಲಿ ಬರುವ ಪದ್ಯ ಈ ರೀತಿಯಾಗಿದೆ.

ನೆಗೞ್ದುದು ರಾಮಾಯಣಮುಂ
ನೆಗೞ್ದುದು ಭಾರತಮುಮಾ ಮಹಾಕಾವ್ಯಗಳಿನಾ
ನೆಗೞ್ದರ್ ವ್ಯಾಸರ್ ವಾಲ್ಮೀ
ಕಿಗಳೆನೆ ನೆಗೞ್ದುಭಯಕವಿಗಳೆಮಗಭಿವಂದ್ಯರ್

ರನ್ನ(ಗದಾಯುದ್ಧ, ೧–೮)

ಎಂಬ ಪದ್ಯದಲ್ಲಿ ಬರುವ ಉಭಯಕವಿ ಎಂಬ ಪದ ನಿಶ್ಚಯವಾಗಿ ಇಬ್ಬರು ಕವಿಗಳನ್ನು ಸೂಚಿಸುತ್ತದೆ. ರಾಮಾಯಣ ಮತ್ತು ಮಹಾಭಾರತ ಮಹಾ ಕಾವ್ಯಗಳನ್ನು ರಚಿಸಿದ ವಾಲ್ಮೀಕಿ ಮತ್ತು ವ್ಯಾಸರು ಉಭಯಕವಿಗಳೆನಿಸಿಕೊಂಡಿದ್ದಾರೆ.

**ಮೃದುಪದ್ಯ**

ಮೃದು ಪದಗಳನ್ನಾರಿಸಿ ಕಾವ್ಯ ರಚಿಸುವುದು ಹಿಂದಿನ ಕಾವ್ಯದ ಒಂದು ವಿಶೇಷ ಲಕ್ಷಣವಾಗಿದೆ. ಆ ಕಾವ್ಯ ಲಕ್ಷಣವನ್ನು ಮೊದಲು ಅನುಸರಿಸಿದವನು ಸಂಸ್ಕೃತಕವಿ ಕಾಳಿದಾಸ. ಗದ್ಯರಚನೆಯಲ್ಲಿ ಬಾಣಭಟ್ಟನೆಂದು ರನ್ನನು ವಿವರಿಸಿರುವನು.

**ಚತುರೋಕ್ತಿ**

ಚತುರೋಕ್ತಿ ಎಂಬ ಪದ ಕವಿ ರುದ್ರಭಟ್ಟನ ಜಗನ್ನಾತ ವಿಜಯದಲ್ಲಿ ಕಂಡುಬರುತ್ತದೆ. ಚತುರೋಕ್ತಿ ಎಂಬುದು ಸಹ ಕಾವ್ಯದ ಒಂದು ವಿಶಿಷ್ಟ ಲಕ್ಷಣವಾಗಿದೆ. ಕಾವ್ಯಭಾಷೆ ಮತ್ತು ಶೈಲಿ ಉತ್ತಮವಾಗಿದ್ದು ಚತುರ ರುಚಿಯ ಪದರಚನೆಗಳಿಂದ ಕೂಡಿದ ಕಾವ್ಯವೇ ಉತ್ತಮ ಕಾವ್ಯ ಎನಿಸುತ್ತಿತ್ತು. ಪ್ರಾಚೀನ ಕವಿಗಳಲ್ಲಿ ಈ ಅಂಶವಿತ್ತು. ವ್ಯಾಸ, ಬಾಣ, ಹರ್ಷ ಹಾಗೂ ಮಾಘ ಇತ್ಯಾದಿ ಕವಿಗಳನ್ನು ಹೆಸರಿಸುತ್ತಾನೆ.

ಮೊಗಮಾವ ಲೀಲೆಯಿಂದೆಸುವುದಾ ಭಾವಮಂ
ಮಗುಳೆ ತೋರುವುದಲ್ಲದನ್ಯ ಪ್ರಕಾರದಿಂ
ಸೊಗಯಿಪುದೇ ರನ್ನಗನ್ನಡಿ ಧರೆಯೊಳಾರಾಜಿಸುವ ಕನ್ನಡ ನುಡಿಗಳ

ಬಗೆಯರಿದವರಾವ ಲಕ್ಷಣದಿಂದ ಮುನ್ನ ಕ
ಬ್ಬಗಳನುಸಸುರಿದರದೇ ಲಕ್ಷಮಲ್ಲದೆ ಪೆತೆ
ನಗೆ ಸಲ್ಲದದರಿಂದ ಪೂರ್ವ ಕವಿಗಳ್ಗೆ ನಮಿಸಿನಾಂ ಕೃತಿವೇಳ್ವೆನು

**ಜೈಮಿನಿ ಭಾರತ(೧-೧೦)**

ಕನ್ನಡಿ ಮುಖ ಹೇಗಿರುತ್ತದೆಯೋ ಅದೇ ರೂಪವನ್ನು ಪ್ರತಿ ಫಲಿಸುತ್ತದೆ. ನಾನೂ ಕೂಡ ಅಷ್ಟೇನೆ ಪೂರ್ವ ಕವಿಗಳು ಹೇಳಿರುವ ಕಾವ್ಯ ಲಕ್ಷಣವನ್ನೇ ಹೇಳಿರುವೆನಷ್ಟೇ ಅಲ್ಲದೆ ಬೇರೆನನ್ನು ಹೇಳಿಲ್ಲ. ಪೂರ್ವಕವಿಗಳ ಕಾವ್ಯಲಕ್ಷಣಗಳೆಂದರೆ, ದೇಸೆ, ಜಾಣ್ಣುಡಿ, ಮೃದುನುಡಿ, ಚತುರೋಕ್ತಿ, ಮಹೋನ್ನತಿ ಇತ್ಯಾದಿ ಕಾವ್ಯ ಲಕ್ಷಣಗಳು ಈ ಹಿಂದೆ ಕವಿಗಳು ಯಾವ ಲಕ್ಷಣಗಳನ್ನು ಹೇಳಿದ್ದಾರೊ ಅವೇ ಲಕ್ಷಣಗಳನ್ನು ಹೇಳಿರುವೆ. ಇಲ್ಲಿ ಲಕ್ಷ್ಮೀಶ ಯಾವುದು ಉತ್ತಮ ಕಾವ್ಯವೆಂದು ಹೇಳಿಲ್ಲ. ಆದರೆ ಹಿಂದಿನ ಕಾವ್ಯವನ್ನು ಅನುಸರಿಸಿಕೊಂಡು ಬಂದಿದ್ದೇನೆ ಎಂದು ಹೇಳಿಕೊಂಡಿದ್ದಾನೆ.

ಒಟ್ಟಾರೆ ಕನ್ನಡದ ಪ್ರಾಚೀನ ಕವಿಗಳು ತಮಗಿಂತ ಪೂರ್ವದ ಕವಿಗಳನ್ನು ಸ್ಮರಿಸುವುದರ ಮೂಲಕ ಪೂರ್ವ ಕವಿಗಳ ಕಾವ್ಯ ಲಕ್ಷಣಗಳು ಹಾಗೂ ಅವರ ಕಾವ್ಯ ವೈಶಿಷ್ಟ್ಯಗಳ ಪರಿಚಯವನ್ನು ಮಾಡಿಕೊಡುತ್ತಾರೆ. ಪೂರ್ವಕವಿ ಸ್ಮರಣೆಯ ಸಂಪ್ರದಾಯದ ಮೂಲಕ ತಮ್ಮ ಹಿಂದಿನ ಕವಿಗಳಿಗೆ ಗೌರವ ಸಲ್ಲಿಸಿದ್ದಾರೆ. ಪ್ರಾಚೀನ ಕನ್ನಡ ಕವಿಗಳು ಸಂಸ್ಕೃತ ಪ್ರಾಕೃತ ಕನ್ನಡ ಭಾಷೆಯ ಕವಿ ಕಾವ್ಯ ಸ್ಮರಣೆಯಿಂದ ಅವರ ಕಾವ್ಯದಂತೆಯೇ ತಮ್ಮ ಕಾವ್ಯವೂ ಯಶಸ್ಸು ಕಾಣಲಿ ಎಂಬ ಆಶಯವನ್ನು ವ್ಯಕ್ತಪಡಿಸುತ್ತಾರೆ. ಪೂರ್ವ ಕವಿ ಸ್ಮರಣೆಯ ವಿಧಾನ ಕನ್ನಡ ಕವಿಗಳ ಕೊಡುಗೆಯಾಗಿದೆ. "ಕನ್ನಡ ಸೋದರ ಭಾಷಾ ಸಾಹಿತ್ಯಗಳಾದ ತಮಿಳು ಹಾಗೂ ತೆಲುಗು ಸಾಹಿತ್ಯಗಳ ಕಾವ್ಯದ ಪೀಠಿಕಾ ಪ್ರಕರಣಗಳಲ್ಲಿ ಪ್ರಾಚೀನ ತಮಿಳು ಸಾಹಿತ್ಯದಲ್ಲಿ ಹನ್ನೆರಡನೆಯ ಶತಮಾನದವರೆಗಿನ ಕಾವ್ಯಗಳಲ್ಲಿ ಪೂರ್ವಕವಿ ಸ್ತುತಿ ಸಂಪ್ರದಾಯವಾಗಿ ಕಂಡುಬರುವುದಿಲ್ಲ. ಹನ್ನೆರಡನೆ ಶತಮಾನದವರೆಗಿನ ಕೃತಿಗಳಲ್ಲಿ ಪ್ರಾಸಂಗಿಕವಾಗಿ ಕಾಣಿಸಿಕೊಂಡಿದೆ. ಇನ್ನು ತೆಲುಗು ಕಾವ್ಯಗಳ ಪರಂಪರೆಯಲ್ಲಿ ಪೂರ್ವಕವಿ ಸ್ಮರಣೆ ಒಂದು ಸಂಪ್ರದಾಯವಾಗಿ ಮೊದಲ ಕವಿ ನನ್ನಯ್ಯ(೧೦೨೨-೧೦೬೩)ನಿಂದಲೇ ಪ್ರಾರಂಭವಾಗಿ ಉದ್ದಕ್ಕೂ ಬಂದಿದೆ. ಮುಖ್ಯವಾಗಿ ತೆಲುಗು ಕವಿಗಳೆಲ್ಲ ಸಂಸ್ಕೃತ ಹಾಗೂ ತಮಗಿಂತ ಪೂರ್ವದ ತೆಲುಗು ಕವಿಗಳನ್ನು ಸ್ಮರಿಸುತ್ತಾರೆ.[೬] ತಮಗಿಂತ ಪೂರ್ವದ ಕವಿಗಳನ್ನು ಸ್ಮರಿಸುವುದು ಪರಂಪರೆಯ ದ್ಯೋತಕವಾಗಿದ್ದು ಕವಿಗಿರಬೇಕಾದ ಪೂರ್ವ ಪರಂಪರೆಯ ಪ್ರಜ್ಞೆಯಾಗಿದೆ.

**ಅಡಿಟಿಪ್ಪಣಿಗಳು**

೧. ಡಾ.ಜಿ.ಎಸ್.ಶಿವರುದ್ರಪ್ಪ, **ಕನ್ನಡ ಕವಿಗಳ ಕಾವ್ಯತತ್ವ ಚಿಂತನೆ,** ಪು.೬೭

೨. ಅದೇ, ಪು.೬೭

೩. ಅದೇ, ಪು.೬೨

೪. ಅದೇ, ಪು.೬೯

೫. ಅದೇ, ಪು.೬೯

೬. ಅದೇ, ಪು.೭೦

## ಅಧ್ಯಾಯ ನಾಲ್ಕು

## ನಾಂದಿ ಪದ್ಯಗಳಲ್ಲಿ ನಿರೂಪಿತವಾಗಿರುವ ದೈವಿಕ ಕಲ್ಪನೆ
## ಇಷ್ಟದೇವತಾ ಸ್ತುತಿಗಳು ಮತ್ತು ಇತರ ದೇವತಾ ಸ್ತುತಿಗಳು

ಅಧ್ಯಾಯ ನಾಲ್ಕು

# ನಾಂದಿ ಪದ್ಯಗಳಲ್ಲಿ ನಿರೂಪಿತವಾಗಿರುವ ದೈವಿಕ ಕಲ್ಪನೆ ಇಷ್ಟದೇವತಾ ಸ್ತುತಿಗಳು ಮತ್ತು ಇತರ ದೇವತಾ ಸ್ತುತಿಗಳು

ಕನ್ನಡ ಕವಿಗಳ ಸಾಂಸ್ಕೃತಿಕ ಪರಂಪರೆಯಲ್ಲಿ ದೇವರು ಧರ್ಮದ ಪಾತ್ರ ಬಹುಮುಖ್ಯವಾದದ್ದು. ಅದರಲ್ಲೂ ಧರ್ಮೋ ರಕ್ಷತಿ ರಕ್ಷತಃ ಎಂಬ ಮಾತುಗಳು ಪ್ರಚಲಿತವಾಗಿದೆ. ಅಂದರೆ ನಾವು ಧರ್ಮವನ್ನು ರಕ್ಷಿಸಿದರೇ ನಮ್ಮನ್ನು ಧರ್ಮ ರಕ್ಷಿಸುತ್ತದೆ ಎಂಬುದನ್ನು ನಂಬಿದವರು. ದೈವಾನುಗ್ರಹದಿಂದಲೇ ಯಾವುದೇ ಒಂದು ಕಾರ್ಯ ಕೈಗೂಡುತ್ತದೆಂಬ ನಂಬಿಗೆಯಿಂದ ದೇವತಾಸ್ತುತಿಯನ್ನು ಮಾಡುತ್ತಿದ್ದರು. ಜೈನರು, ವೀರಶೈವರು ಹಾಗೂ ವೈಷ್ಣವರು ತಮ್ಮ ಧರ್ಮಕ್ಕೆ ಅನುಗುಣವಾಗಿ ಪೂಜೆ ಪುನಸ್ಕಾರಗಳನ್ನು ಮಾಡುವುದರೊಂದಿಗೆ ತಮ್ಮ ಕಾವ್ಯಗಳಲ್ಲಿ ಆಯಾ ಧರ್ಮದ ಕವಿಗಳು ತಮ್ಮ ಧರ್ಮದ ದೇವರನ್ನು ಸ್ತುತಿ ಮಾಡುತ್ತ ಬಂದಿದ್ದಾರೆ. ತಾವು ಕೈಗೊಂಡ ಕಾರ್ಯವು ನಿರ್ವಿಘ್ನವಾಗಿ ಮುಗಿಯಲು ತಮ್ಮ ಇಷ್ಟ ದೇವರನ್ನು ಹಾಗೂ ಇತರ ದೇವತೆಗಳನ್ನು ಸ್ಮರಿಸುವುದು ರೂಢಿಯಾಯಿತು.

ಪ್ರಾಚೀನ ಶಾಸನಗಳಲ್ಲಿ ಸ್ವಸ್ತಿ, ಸ್ವಸ್ತಿಶ್ರೀ, ಶ್ರೀ, ಸಿದ್ದಂ ಎಂಬ ಪದಗಳನ್ನು ಬಳಸುತ್ತಿದ್ದರು. ಇವೆಲ್ಲ ಶುಭ ಸೂಚಕ ಚಿಹ್ನೆಗಳು ನಂತರ ಶಾಸನಗಳಲ್ಲಿ ದೇವತಾ ಶ್ಲೋಕಗಳನ್ನು ಬಳಸುತ್ತಿದ್ದರು ಶಿವೋಪಾಸಕರು ಸಾಮಾನ್ಯವಾಗಿ

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೆ
ತ್ರೈಲೋಕ್ಯ ನಾಗರಾರಂಭ ಮೂಲಸ್ತಂಭಾಯ ಶಂಭವೇ॥

ಎಂದು ವೈಷ್ಣವರು

ಜಯತ್ಯು ವಿಷ್ಕತಂ ವಿಷ್ಣೋರ್ವಾರಾಹಂ ಕ್ಷೋಭಿ
ತಾರ್ಣವಂ ದಕ್ಷಿಣೋನ್ನತ ವಂಷ್ಟ್ರಾಗೇ ವಿಶ್ರಾಂತ
ಭುವನಂವಪು॥

ಎಂಬ ಶ್ಲೋಕವನ್ನು ಶಾಸನಗಳ ಪ್ರಾರಂಭದಲ್ಲಿ ಬರೆಯುತ್ತಿದ್ದರು ಹಾಗೂ ಆ ದೇವತೆಗ ತಮಗೆ ಶುಭವನ್ನುಂಟು ಮಾಡಲೆಂದು ಬೇಡಿಕೊಳ್ಳುತ್ತಿದ್ದರು. ಜೈನರ ಕಾಲದ ಶಾಸನಗಳಲ್ಲಿ

ಶ್ರೀ ಮತ್ಪರಗಭೀರ ಸ್ಯಾದ್ವಾದಾಮೋಘ ಲಾಂಛನಂ
ಜೀಯಾತ್ ತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ॥

ಎಂದು ಆರಂಭವಾಗುತ್ತವೆ. ಕ್ರಿ.ಶ.೯ ಮತತು ೧೦ನೇ ಶತಮಾನದ ಕೆಲವು ಶಾಸನಗಳಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರ ತ್ರೈಪುರುಷ ಸುತ್ತಿ ಇದೆ ಹಾಗೂ ಶಿವ ಮತ್ತು ಕೇಶವರನ್ನು ಒಟ್ಟಿಗೆ ಸ್ತುತಿಸಲಾಗಿದೆ.

ಶ್ರೀ ಮತ್ರೈಲೋಕ್ಯ ಪೂಜ್ಯಾಯ ಸರ್ವಕರ್ಮ ಸುಸಾಕ್ಷಿಣಿ
ಫಲದಾಯ ನಮೋ ನಿತ್ಯ ಕೇಶವಾಯ ಶಿವಾಯಚ॥

ನಮಸ್ತುಸಂಗ ಶಿರಶ್ಚುಂಬಿ ಎಂದು ಪ್ರಾರಂಭವಾಗುವ ಶಿವಸ್ತುತಿಯು ಬಾಣಭಟ್ಟನಿಂದ ರಚಿತವಾದ ಹರ್ಷಚರಿತಮ್ ಎಂಬ ಗ್ರಂಥದಲ್ಲಿ ಮೊದಲ ಬಾರಿಗೆ ಕಂಡುಬಂದಿದೆ. ಅವನ ತರುವಾಯ ಬಂದ ಶಾಸನಕಾರರು ತಮ್ಮ ಶಾಸನಗಳಲ್ಲಿ ಈ ಸ್ತುತಿಯನ್ನು ಬಳಸುತ್ತಾ ಬಂದಿರುವರು. ವೀರನಾರಾಯಣನೇ ಕವಿ ಲಿಪಿಕಾರ ಕುಮಾರವ್ಯಾಸ ದೇವರು ಉಸಿರಾದರೆ, ಕವಿ ಅವನ ಕೊಳಲಾಗಿ ಅವನು ಲಕ್ಷ್ಮಿರಮಣ ಅವನು ಗುರುರಾಯ ಎಂದು ದಾಸರು ಗುಹೇಶ್ವರಲಿಂಗ, ಕೂಡಲಸಂಗಮದೇವನೆಂದು ಶರಣರು ದೇವರ ಮಹಿಮೆಯನ್ನು ಕೊಂಡಾಡಿರುವರು.

ಕಾವ್ಯಗಳಲ್ಲಿ ಆರಂಭದ ಪ್ರಾರ್ಥನೆಗಳ ಜೊತೆಗೆ ಕಾವ್ಯದ ಒಳಗೂ ಹತ್ತು ಹಲವು ರೀತಿಯ ಪ್ರಾರ್ಥನಾ ಪದ್ಯಗಳು ದೊರೆಯುತ್ತವೆ. ಇವುಗಳಲ್ಲಿ ಭಕ್ತಿರಸವೇ ಪ್ರಧಾನವಾಗಿದ್ದು, ದೇವಿ ಅನುಗ್ರಹಕ್ಕಾಗಿ ಹಾತೋರೆಯುವ ಮಾನವನ ಅಂತರಂಗದ ಸೂಪ್ತವಾದ ಬಯಕೆಗಳಿವೆ.

ಕಾವ್ಯದ ಕರ್ತೃ ಭಕ್ತನಾಗಿದ್ದರೆ, ಅಂಥ ಪ್ರಸಂಗದಲ್ಲಿ ಭಕ್ತಿಯ ಭಾವೋನ್ಮಾದಕ್ಕೆ ಮೈ ಮರೆತು ಆರಾಧಿಸುತ್ತಾನೆ. ಉದಾಹರಣೆಗೆ ಆದಿಪುರಾಣ, ಅಜಿತಪುರಾಣ, ಸೊಬಗಿನ ಸೋನೆ, ಛಂದೋಂಬುದಿ, ಕುಮಾರವ್ಯಾಸ ಭಾರತ, ಬಸವಪುರಾಣ, ರಾಜಶೇಖರ ವಿಳಾಸ ಇತ್ಯಾದಿ ಕೃತಿಗಳನ್ನು ಹೆಸರಿಸಬಹುದು. "ಕೆಲವು ಕವಿಗಳು ತಮ್ಮ ಕಾವ್ಯಗಳಲ್ಲಿ ನಿಯತವಾಗಿ ಪ್ರತಿ ಸಂಧಿಯ ಆರಂಭ ಮತ್ತು ಅಂತ್ಯಗಳಲ್ಲಿ ಪ್ರಾರ್ಥನಾ ಪದ್ಯಗಳನ್ನು ಸೇರಿಸಿದ್ದಾರೆ. ನಿದರ್ಶನಕ್ಕೆ ಅಜಿತಪುರಾಣದಲ್ಲಿ ಚರಿತನಾಪಗತ ದುರಿತಂ ಎಂದು ಮುಗಿಯುವ ಹನ್ನೆರಡು ಕಂದ ಪದ್ಯಗಳು,

ಧರ್ಮಾಂಮೃತದ ಪ್ರತಿ ಆಶ್ವಾಪಾಂತ್ಯದಲ್ಲಿ ಸುರವಿ ಮನ ಪದ್ಮಿನಿರಾಜ ಹಂಸ ಎಂದು ಮುಗಿಯುವ ಹದಿನಾಲ್ಕು ವೃತ್ತಗಳು ಶಾಂತಿಶ್ವರ ಪುರಾಣದಲ್ಲಿ ಜಿನಪದ ಪಯೋಜ ಮತ್ತು ಮರಾಳ ಎಂದು ಮುಗಿಯುವ ಹದಿನಾರು ಕಂದ ಪದ್ಯಗಳು ಇವೆ. ಷಡಕ್ಷರ ಕವಿ ತನ್ನ ಮೂರು ಕಾವ್ಯಗಳಲ್ಲಿ ಆಶ್ವಾಸಾರಂಭದಲ್ಲಿ ಶಿವಸ್ತುತಿಯನ್ನು ಆಶ್ವಾಸಾಂತದಲ್ಲಿ ಪಾರ್ವತಿಸ್ತುತಿಯನ್ನು ಕ್ರಮವಾಗಿ ಮಾಡಿರುವವನು. ಹಾಗಾಗಿ ವೃಷಬೇಂದ್ರ ವಿಜಯದಲ್ಲಿ ೪೨ ರಾಜಶೇಖರ ವಿಳಾಸದಲ್ಲಿ ೧೪ ಶಭರ ಶಂಕರ ವಿಳಾಸದಲ್ಲಿ ೫ ಹೀಗೆ ಒಟ್ಟು ೬೦ಕ್ಕೂ ಹೆಚ್ಚು ಶಿವನ ಪ್ರಾರ್ಥನೆಗಳು ಹಾಗೂ ಅಷ್ಟೇ ಸಂಖ್ಯೆಯ ಪಾರ್ವತಿ ಸ್ತುತಿಗಳು ದೊರೆಯುತ್ತವೆ.[೧] ಚನ್ನಬಸವ ಪುರಾಣದ ಆರಂಭದಲ್ಲೂ ಅನೇಕ ಉತ್ತಮವಾದ ನಾಂದಿ ಪದ್ಯಗಳಿವೆ.

ಜೈನ ಪುರಾಣಗಳು ಜಿನನೇ ಜಗದೊಡೆಯನೆಂದು ಸಾರಿದರೆ, ವಿಷ್ಣು ಪುರಾಣಗಳು ನಾರಾಯಣನ ನಾಮ ಮಹಿಮೆಯನ್ನು ಸಾರುತ್ತವೆ. ಶೈವ ಪುರಾಣಗಳು ಶಿವಭಕ್ತಿಯ ಹಿರಿಮೆಯನ್ನು ಸಾರುತ್ತವೆ. ಈ ರೀತಿ ಧರ್ಮದ ವಿಷಯದಲ್ಲಿ ಕವಿಗಳು ಪರಂಪರೆಯನ್ನು ತೊರೆಯದೆ ನಾಂದಿ ಪದ್ಯಗಳ ಮೂಲಕ ಮತ ಪ್ರಚಾರವನ್ನು ಮಾಡಿರುವಂತೆ ಕಂಡುಬರುತ್ತದೆ. ಜೈನರು ಜೈನಮತವನ್ನು, ಶರಣರು(ಶೈವರು) ವೀರಶೈವ ಮತವನ್ನು ವೈಷ್ಣವರು ವೈಷ್ಣವ ಧರ್ಮವನ್ನು ಪ್ರಚಾರ ಮಾಡಿದ್ದಾರೆ. ನಿದರ್ಶನಕ್ಕೆ ಬೊಪ್ಪಣ ಪಂಡಿತನು ತನ್ನ ನಿರ್ವಾಣ ಲಕ್ಷ್ಮೀಪತಿ ನಕ್ಷತ್ರಮಾಲಿಕೆಯಲ್ಲಿ ಹೇಳಿರುವ ಈ ಪದ್ಯ ಎಲ್ಲರ ಗಮನ ಸೆಳೆಯುವಂತಿದೆ.

ಪರಮೇಪಂ ಪರಮೇಷ್ಠಿ ಶಂಭು ಆಭವಂ
ಶಿವಂ, ಶಂಕರಂ ಸ್ಮರ ಸಂಹಾರಕ ನಚ್ಚುತಂ ಮುರ
ಹರಂ ಬುದ್ದಂ ಜಿನಂ ವಿಷ್ಣುವೇದರಹಸ್ಯ
ಪ್ರಭು ಶುದ್ದನೆಂದು ನೆಗಳ್ದಂತಪ್ಪ ನಾಮಾಳಿಯಿಂ
ಪರಮಾರ್ಥಂ ತಳೆದರ್ಥವಪ್ಪುದೆ ವಲಂ ನಿರ್ವಾಣ
ಲಕ್ಷ್ಮೀಪತಿ

ನಿರ್ವಾಣ ಲಕ್ಷ್ಮೀಪತಿ ನಕ್ಷತ್ರ ಮಾಲಿಕೆ

ಹೀಗೆ ಕವಿವಾಣಿ ಒಬ್ಬ ದೇವರನ್ನು ಹಲವು ನಾಮಾವಳಿಗಳಿಂದ ಸ್ಮರಿಸಿರುವುದು ಕಂಡುಬರುತ್ತದೆ. ಶರಣವಾಣಿಯೂ ದೇವನೊಬ್ಬ ನಾಮ ಹಲವು ಎಂದು ಸಾರುತಿದೆ. ಹರಿಹರದಲ್ಲಿರುವ ಹರಿಹರೇಶ್ವರನು ಏಕದೇವತಾ ಭಾವನೆಯ ಪ್ರತಿರೂಪದಂತಿದೆ. "ಹರಿಯಿಂದ ಬಿಟ್ಟು ದೈವಂಧರಣಿತಳದೊಳಿಲ್ಲೆಂದು ಪೇಳ್ವರ್ ಕೆಲಂಬರ್ ನರನಾ ಸಂದೇಹಮಂ

ಪಿಂಗಿಸಲತಿಶಯದಿಂ ಕೂಡಲೂರಲ್ಲಿ ಶೋಭಾಕರಮಪ್ಪುತೊಂದೆ ರೂಪಂ ತಳೆದಂ ಹರಿಹರಂ ಕೂರ್ತು ರಕ್ಷಿಸ್ಯೆ ನಮ್ಮಂ"[೨]

ಅವರವರ ಭಾವಕ್ಕೆ
ಅವರವರ ಪೂಜೆಗಂ
ಅವರವರಿಗೆಲ್ಲ ಗುರು ನೀನೊಬ್ಬನೆ
ಹೋರಾಟ ವೀಕ್ಷಿಸಲು
ಬೇರಾದೆಯಲ್ಲದೆ
ಬೇರುಂಟೆ ಜಗದೊಳಗೆ ಎಲೆದೇವನೆ

**ಮುಪ್ಪಿನ ಷಡಕ್ಷರಿ**

ಎಂಬ ದಿವ್ಯವಾಣಿಯನ್ನು ಗಮನಿಸಿದರೆ ನಾಂದಿ ಪದ್ಯಗಳಲ್ಲಿ ಅಂಗರ್ತತವಾಗಿರುವ ಮೊರೆಯಲ್ಲಿ ಹಲವು ನಾಮಗಳಿಂದ ಭಜಿಸುವ ಏಕದೇವನನ್ನು ಸ್ತುತಿಸಿದಂತೆ ಕಂಡುಬರುತ್ತದೆ. ವಿಚಿತ್ರವೆಂದರೆ ತಾವು ನಂಬಿದ್ದ ಧರ್ಮದ ಬಗ್ಗೆ ಏಕನಿಷ್ಠೆಯುಳ್ಳ ಕವಿಗಳೂ ಕೂಡ ಸರ್ವಧರ್ಮ ಸಮನ್ವಯದ ಸಂದೇಶವನ್ನು ಸಾರಿದ್ದಾರೆ. ಭಕ್ತರ ಇಷ್ಟದ ಮೇರೆಗೆ ದೇವರು ಹಲವು ರೂಪ ತೋರಿ ತಮ್ಮ ಇಷ್ಟಾರ್ಥವ್ನನು ಪೂರೈಸುವನೆಂಬ ನಂಬಿಕೆಯಿಂದ ದೇವರನ್ನು ಸ್ತುತಿಸುತ್ತಿದ್ದರು.

"ನಾನು ಬಡ ಪಶು ಪಂಕದಲ್ಲಿ ಬಿದ್ದಿರುವೆ ಪಶುಪತಿ ನೀನು ರಕ್ಷಿಸು" ಎನ್ನುವ ಶರಣವಾಣಿ ದೀನ ನಾನು ನಮಸ್ತಲೋಕಕ್ಕೆ ದಾನಿ ನೀನು, ಕೈವಲ್ಯಪತಿ ನೀನು ರಕ್ಷಿಸು ನಮ್ಮ ನನವರತಾ ಎಂಬ ದಾಸವಾಣಿಯಲ್ಲಿ ಮಾನವನ ಅಂತರಂಗದ ಸುಪ್ತ ಬಯಕೆಯ ಆತ್ಮ ನಿವೇದನೆಯಿದೆ. ದೇವಮಾನವರ ನಡುವಿನ ಮಧುರ ಸಂಬಂಧವನ್ನು ಪ್ರಾರ್ಥನೆಯಿಂದಲೇ ಗಟ್ಟಿಗೊಳಿಸಬಹುದು. ದೇವರು ಮನುಷ್ಯನ ಬೇಡಿಕೆಗಳನ್ನು ಪೂರೈಸಲಿ ಅಥವಾ ಬಿಡಲಿ ದೇವರ ದರ್ಶನದಿಂದ ಮಾನಸಿಕ ನೆಮ್ಮದಿಯನ್ನಂತು ಪಡೆಯಬಹುದು.

ಏಳು ನಾರಾಯಣಾ ಏಳು ಲಕ್ಷ್ಮಿರಮಣಾ
ಏಳು ಶ್ರೀ ಗಿರಿಯೊಡಿಯಾ ವೆಂಕಟೇಶ

ಎಂದು ಹಾಡುವುದು ದೇವರನ್ನು ಎಬ್ಬಿಸುವ ನೆಪದಲ್ಲಿ ನಮ್ಮ ಮನಸ್ಸಿನ ಭಕ್ತಿಯ ಜಾಗೃತಿ ಯನ್ನುಂಟು ಮಾಡಿಕೊಳ್ಳುವುದು. ಅದಕ್ಕಾಗಿಯೇ ಪ್ರಾಚೀನ ಕನ್ನಡ ಕಾವ್ಯದ ಆರಂಭದಲ್ಲಿ ಕವಿಗಳು ದೇವತಾ ಸ್ತುತಿಗಳನ್ನು ಮಾಡುತ್ತಾರೆ. ಪ್ರಾರ್ಥನಾ ಪದ್ಯಗಳಲ್ಲಿ ಮುಖ್ಯವಾಗಿ ಮೂರು ವಿಧಗಳು

೧. **ಅನುಗ್ರಹ ಯಾಚನ ಪದ್ಯಗಳು:** ಇವುಗಳಲ್ಲಿ ದೇವರು ನಮಗೆ ಒಳ್ಳೆಯದನ್ನುಂಟು ಮಾಡಲಿ ಎಂಬ ಬೇಡಿಕೆ ಇರುತ್ತದೆ.

೨. **ನಮಸ್ಕಾರ ಸೂಚನೆಯ ಪದ್ಯಗಳು:** ದೇವರಿಗೆ ಗೌರವವನ್ನು ಸೂಚಿಸಿ ತಮ್ಮ ಭಕ್ತಿ ಕಾಣಿಕೆಯನ್ನು ಸಮರ್ಪಿಸುವ ಪ್ರಾರ್ಥನೆಗಳಿರುತ್ತದೆ.

೩. **ವಸ್ತು ನಿರ್ದೇಶ ಪದ್ಯಗಳು:** ಇವುಗಳಲ್ಲಿ ದೇವರ ಮಹಿಮೆಯನ್ನು ಕೊಂಡಾಡುವ ಪದ್ಯಗಳಿರುತ್ತವೆ.೩

ನಾಂದಿ ಪದ್ಯಗಳಲ್ಲಿ ಕೆಲವು ಆಡಂಬರವಲ್ಲದ ಹಾಗೂ ಕೃತಕವಲ್ಲದ ಶೈಲಿಯ ಪದ್ಯಗಳಿದ್ದರೆ ಇನ್ನೂ ಕೆಲವು ಪದ್ಯಗಳು ಪಾಂಡಿತ್ಯಪೂರ್ಣವಾದ ಪದಪುಂಜಗಳಿಂದ ಕೂಡಿದ್ದು ಹಾಗೂ ಕೃತಕವಾದ ವೈಭವದ ಪ್ರಾರ್ಥನಾ ಪದ್ಯಗಳಿವೆ. ಉದಾಹರಣೆಗೆ ಬಸವೇಶ್ವರ ರಗಳೆ, ಜೀವಂಧರ ಸಾಂಗತ್ಯ, ವರ್ಧಮಾನ ಚರಿತೆ ಮೊದಲಾದ ಕೃತಿಗಳು ಇದಕ್ಕೆ ವ್ಯತಿರಿಕ್ತವಾದ ಕೆಲವು ನಾಂದಿಪದ್ಯಗಳು ಅರ್ಥೈಸಲು ಕಷ್ಟಕರವಾದ ಚಂಪೂ ಸಂಪ್ರದಾಯದ ಪಂಡಿತ ಮಾನ್ಯ ಕವಿಗಳಿಂದ ರಚಿತವಾದ ನಾಂದ್ಯಗಳು ತಮ್ಮ ಆಶ್ರಯದಾತ ರಾಜರನ್ನೊ ಅಥವಾ ಕಾವ್ಯದ ನಾಯಕನನ್ನೊ ಸ್ತುತಿಸುವ ಹಾಗೂ ಕಾವ್ಯದ ನಾಯಕನನ್ನು ಪುರಾಣ ಕಾವ್ಯದ ನಾಯಕನೊಂದಿಗೆ ಅಭೇದ ಸ್ತುತಿಸುವ ಒಂದು ವಿಶೇಷ ಲಕ್ಷಣ ಕಂಡುಬರುತ್ತದೆ. ಪಂಪಭಾರತ, ಕವಿರಾಜಮಾರ್ಗ, ಗದಾಯುದ್ಧ, ಜಗನ್ನಾಥ ವಿಜಯ, ರಾಜಶೇಖರ ವಿಳಾಸ ಇತ್ಯಾದಿ ಕೃತಿಗಳು ಈ ಪ್ರಾರ್ಥನಾ ಪದ್ಯಗಳನ್ನು ಹಲವು ಪ್ರಕಾರಗಳಲ್ಲಿ ವರ್ಗೀಕರಿಸಬಹುದು.

## ಇಷ್ಟಾ ದೇವತಾ ಸ್ತುತಿಗಳು

೧. ಆಶ್ರಯದಾತನ ಸ್ತುತಿ, ೨. ಗುರುಸ್ತುತಿ, ೩. ಸರಸ್ವತಿ ಸ್ತುತಿ, ೪. ಜಿನಸ್ತುತಿ, ೫. ದುರ್ಗಾ ಸ್ತುತಿ, ೬. ಗಣಪತಿ ಸ್ತುತಿ, ೭. ಕಾಳಿ ಸ್ತುತಿ, ೮. ಮನ್ಮಥ ಸ್ತುತಿ, ೯. ಸೂರ್ಯ ಸ್ತುತಿ, ೧೦. ಶಿವಸ್ತುತಿ, ೧೧. ಬ್ರಹ್ಮ ಸ್ತುತಿ, ೧೨. ವಿಷ್ಣು ಸ್ತುತಿ, ೧೩. ವಿರೂಪಾಕ್ಷ ಸ್ತುತಿ ಇತ್ಯಾದಿ ದೇವತೆಗಳ ಸ್ತುತಿಗಳಿರುತ್ತವೆ.

ಜೈನ ಕಾವ್ಯ ಪರಂಪರೆಯ ಇಷ್ಟದೇವತಾ ಸ್ತುತಿಯಲ್ಲಿ ಒಂದು ವಿಶೇಷ ಇದೆ. ಇಲ್ಲಿ ರಾಜನೇ ಇಷ್ಟ ದೇವತೆಯಾಗಿ, ಇತರ ದೇವತೆಗಳಿಗಿಂತ ಹೆಚ್ಚಿನವನು. ಈತನು ಕವಿಗಳಿಂದ ಸ್ತುತಿಸಲ್ಪಡುತ್ತಾನೆ. ಇದು ಲೌಕಿಕ ಕೃತಿಯಲ್ಲಿ ವಿಶೇಷವಾಗಿ ಕಂಡುಬರುತ್ತದೆ.

ಕನ್ನಡ ಸಾಹಿತ್ಯದ ಮೊದಲ ಉಪಲಬ್ದ ಲಾಕ್ಷಣಿಕ ಕೃತಿಯಾದ ಕವಿರಾಜ ಮಾರ್ಗದಲ್ಲಿ ಪ್ರಾರಂಭದ ಎರಡು ಪದ್ಯಗಳಲ್ಲಿ ಕಾವ್ಯದ ನಾಯಕನಾದ ಅಮೋಘವರ್ಷ ನೃಪತುಂಗನನ್ನು

ಮಹಾವಿಷ್ಣುವಿನೊಂದಿಗೆ ಅಭೇದ ಕಲ್ಪಿಸಿ ಸ್ತುತಿಸಲಾಗಿದೆ. ಮಹಾವಿಷ್ಣುವಿಗೆ ಅಭೇದ ಕಲ್ಪಿಸಿದರೂ ಇಲ್ಲಿ ಆಶ್ರಯದಾತನ ಸ್ತುತಿಯೇ ಆಗಿರುತ್ತದೆ.

**೧. ಆಶ್ರಯದಾತನ ಸ್ತುತಿ**

ಶ್ರೀ ತಳ್ತುರದೊಳ್ ಕೌಸ್ತುಭ
ಜಾತದ್ಯುತಿ ಬಳಸಿ ಕಾಂಡಪಟದಂತಿದೆ ಸಂ।
ಪ್ರೀತಿಯಿನಾವನಗಲಳ್
ನೀತಿ ನಿರಂತನುದಾರನಾ ನೃಪತುಂಗ॥

**ಕವಿರಾಜ ಮಾರ್ಗ(೧-೧)**

ಈ ಪದ್ಯದಲ್ಲಿ ಕವಿರಾಜಮಾರ್ಗಕಾರನು ತನ್ನ ದೊರೆಯು ಹಾಗೂ ಆಶ್ರಯದಾತನೂ ಆದ ನೃಪತುಂಗನನ್ನು ನಾರಾಯಣನೊಂದಿಗೆ ಅಭೇದ ಕಲ್ಪಿಸಿ ಆಶ್ರಯದಾತನ ಸ್ತುತಿ ಮಾಡುತ್ತಾನೆ. ವಿಷ್ಣುವಿನ ಎದೆಯ ಮೇಲಿನ ಕೌಸ್ತುಭ ಎಂಬ ಮಣಿಯಿಂದ ಕಾಂತಿಯು ತೆರೆಯಂತೆ ಹೊಮ್ಮಿರಲು ಲಕ್ಷ್ಮಿಯು ಯಾವನನ್ನು ಅಗಲದೆ ಪ್ರೀತಿಯಿಂದ ತಬ್ಬಿಕೊಂಡಿರುವಳೋ ಆ ರಾಜಶ್ರೇಷ್ಠನೂ ನೀತಿ ನಿರಂತರನೂ, ಉದಾರನೂ, ಕೀರ್ತಿಶಾಲಿಯೂ ಆಗಿರುವ ನೃಪತುಂಗ ದೇವನು ನಮಗೆ ಉತ್ಸಾಹವನ್ನುಂಟು ಮಾಡಲೆಂದು ಹೇಳಿರುವನು. ಎರಡನೇ ಪದ್ಯದಲ್ಲಿ ಒಡೆಯನ ಪ್ರಶಂಸೆ ಇದೆ.

**೨. ಆಶ್ರಯದಾತನ ಸ್ತುತಿ**

ಕೃತ ಕೃತ್ಯ ಮಲ್ಲನ ಪ್ರತಿ
ಹತ ವಿಕ್ರಮನೊಸೆದು ವೀರನಾರಾಯಣನ
ಪ್ಪತಿಶಯದವಳಂ ನಮಗೀ।
ಗತರ್ಕಿತೋಪಸ್ಥಿತಿ ಪ್ರತಾಪೋದಯಂ॥

**ಕವಿರಾಜಮಾರ್ಗ(೧-೨)**

ಕೃತಕೃತ್ಯಮಲ್ಲ, ಅಪ್ರತಿಹತ ವಿಕ್ರಮ ಅತಿಶಯದವಳ ಇತ್ಯಾದಿ ಬಿರುದಾಂಕಿತನಾದ ವೀರನಾರಾಯಣನು ನಮಗೆ ಸಕಲ ಸಾಹಸವೂ ತಾನಾಗಿಯೇ ಬಂದೊದಗುವಂತೆ ದಯ ತೋರಲಿ ಎನ್ನುತ ದೇವತಾ ಸ್ತುತಿ ಹಾಗೂ ಪ್ರಭು ಪ್ರಶಂಸೆಯನ್ನು ಏಕಕಾಲಕ್ಕೆ ಮಾಡಿರುವನು. ಈ ರೀತಿ ದೇವತಾ ಹಾಗೂ ಪ್ರಭು ಪ್ರಶಂಸೆಯಿರುವ ಮೊದಲ ಕನ್ನಡ ಕೃತಿ ಎಂದರೆ ಕವಿರಾಜ

ಮಾರ್ಗವೇ ಎಂದು ಕಂಡುಬರುತ್ತದೆ. ಮುಂದೆ ಬಂದ ಇತರ ಕಾವ್ಯಗಳಿಗೂ ಕವಿರಾಜ ಮಾರ್ಗವೇ ರಾಜಮಾರ್ಗವನ್ನು ಒದಗಿಸಿತು. ಪಂಪ ರನ್ನಾದಿಗಳ ಕಾವ್ಯಗಳು ಕವಿರಾಜ ಮಾರ್ಗದ ದಾರಿಯಲ್ಲೆ ಉಪಕ್ರಮಿಸಿದಂತೆ ಕಂಡುಬರುತ್ತವೆ. ಕನ್ನಡದಲ್ಲಿ ಇಷ್ಟದೇವತಾ ಹಾಗೂ ಆಶ್ರಯದಾತನ ಪ್ರಶಂಸೆಯನ್ನು ಒಟ್ಟಿಗೆ ಮಾಡಿದ ಮೊದಲ ಕಾವ್ಯವೇ ಕವಿರಾಜ ಮಾರ್ಗವೆನಿಸುತ್ತದೆ.

ಕನ್ನಡದ ಮೊದಲ ಕವಿ ಮತ್ತು ಆದಿಕವಿ ಎಂಬ ಹೆಗ್ಗಳಿಕೆಗೆ ಪಾತ್ರನಾದ ಮಹಾಕವಿ ಪಂಪನು ತನ್ನ ಎರಡನೆಯ ಮತ್ತು ಕೊನೆಯ ಕಾವ್ಯವಾದ ವಿಕ್ರಮಾರ್ಜುನ ವಿಜಯ ಅಥವಾ ಪಂಪಭಾರತದಲ್ಲಿ ಆಶ್ರಯದಾತನಾದ ಚಾಲುಕ್ಯ ಇಮ್ಮಡಿ ಅರಿಕೇಸರಿಯನ್ನು ಉದಾತ್ತ ನಾರಾಯಣನೆಂದು ಸಂಬೋಧಿಸಿದ್ದಾನೆ ಹಾಗೂ ಮಹಾಭಾರತದ ಅರ್ಜುನನೊಂದಿಗೆ ಸಮೀಕರಿಸುತ್ತಾನೆ.

**ಆಶ್ರಯದಾತನ ಸ್ತುತಿ(ವಿಷ್ಣು ಸ್ತುತಿ)**

ಶ್ರೀಯನರಾತಿ ಸಾಧನ ಪಯೋನಿಧಿಯೊಳ್ ಪಡೆದುಂ ದರಿತ್ರಿಯಂ
ಜೀಯನೆ ಬೇಡಿಕೊಳ್ಳದೆ ವಿರೋಧಿ ನರೇಂದ್ರರ ನೊತ್ತಿಕೊಂಡುಮಾ
ತ್ಮೀಯ ಸುಪುಷ್ಪವೃಷ್ಟಿಯನೊಡಂಬಡೆ ತಾಳ್ದಿಯುಮಿತುದಾತ್ತನಾ
ರಾಯಣನಾದ ದೇವನೆಮಗೀಗರಿಕೇಸರಿ ಸೌಖ್ಯಕೋಟಿಯಂ

**ಪಂಪಭಾರತ**(೧-೧)

ಸಮುದ್ರಮಥನ ಕಾಲದಲ್ಲಿ ಉದ್ಭವವಾದ ಲಕ್ಷ್ಮೀಯನ್ನು ಶ್ರಮವಿಲ್ಲದೆ ಪಡೆದ ಸುಪುಷ್ಪಪಟ್ಟವೆಂಬ ಸಾಮಾನ್ಯ ಶಿರೋಭೂಷಣವನ್ನು ಪಡೆದ ನಾರಾಯಣನಂತೆ ಶತ್ರು ಸೈನ್ಯವೆಂಬ ಸಮುದ್ರಮಥನದಿಂದ ಜಯಲಕ್ಷ್ಮಿಯನ್ನು ಪಡೆದು ಶತ್ರು ರಾಜರನ್ನು ಮೆಟ್ಟಿನಿಂತು ಭೂಮಿಯನ್ನು ಪಡೆದು ಉದಾತ್ರ ನಾರಾಯಣನೆನಿಸಿಕೊಂಡಿರುವ ಅರಿಕೇಸರಿಯು ನಮಗೆ ಸೌಖ್ಯಗಳನ್ನು ದಯಪಾಲಿಸಲಿ ಎಂದಿರುವನು. ಇಲ್ಲಿ ಪಂಪನಿಗೆ ತನ್ನ ದೊರೆಯಾದ ಅರಿಕೇಸರಿಯನ್ನು ಉದಾತ್ತ ಎಂಬ ಗುಣ ವಿಶೇಷಣದಿಂದ ಕರೆಯಬೇಕಾಗಿದೆ. ಹಿಂದೆ ಕವಿರಾಜಮಾರ್ಗಕಾರ ಹೇಳಿದ ಉದಾರ ಎಂಬ ಪದದಿಂದ ಪ್ರೇರಣೆ ಹೊಂದಿರಬೇಕು. ಉದಾರನಾರಾಯಣನೆಂಬ ಪದ ಪಂಪನಲ್ಲಿ ಉದಾತ್ತ ನಾರಾಯಣ ಎಂದಾಗಿದೆ. ತನ್ನ ಆಶ್ರಿತ ದೊರೆಯನ್ನು ಕಾವ್ಯದ ಪ್ರಾರಂಭದಲ್ಲಿ ಸ್ತುತಿಸುವುದು ಹಾಗೂ ಅವರ ಗುಣ ವಿಶೇಷಗಳನ್ನು ಕಾವ್ಯದ ಪ್ರಾರಂಭದಲ್ಲಿ ತಿಳಿಸಿ ದೇವತೆಗಳೊಂದಿಗೆ ಅಭೇದವಾಗಿ ಕಲ್ಪಿಸಿ ಪದ್ಯ ರಚಿಸುವುದು ಪ್ರಾಚೀನ ಕನ್ನಡ ಕಾವ್ಯದ ಒಂದು ವಿಶಿಷ್ಟತೆ ಎಂದು ಕಂಡುಬರುತ್ತದೆ.

**ಆಶ್ರಯದಾತನ ಸ್ತುತಿ(ಈಶ್ವರನ ಸ್ತುತಿ)**

ಮುಳಿಸು ಲಲಾಟ ನೇತ್ರಶಿಖಿ ಮೆಚ್ಚೆವಿನೂತ ರಸಪ್ರಸಾದಮ
ಜ್ಜಳ ಜಸಮಂಗ ಸಂಗತ ಲಸದ್ಭಸಿತಂ ಪ್ರಭುಶಕ್ತಿ ನಿ।
ರ್ಮಳ ಮಣಿಭೂಷಣಂ ಫಣಿ ವಿಭೂಷಣ ಮಾಗೆನೆಗಳ್ತೆಯಂಪುದುಂ
ಗೊಳಿಸಿದನೀಶ್ವರಂ ನೆಗಳ್ದುದಾರ ಮಹೇಶ್ವರನೀಗೆ ಭೋಗಮಂ

**ಪಂಪಭಾರತ**(೧–೨)

ಪಂಪನು ಮೇಲ್ಕಂಡ ಈ ಪದ್ಯದಲ್ಲೂ ಅರಿಕೇಸರಿಯನ್ನು ಉದಾರ ಮಹೇಶ್ವರನೆಂದು ಸಂಬೋಧಿಸಿದ್ದಾನೆ. ಅವನ ಸಿಟ್ಟು ಹಣೆಗಣ್ಣಿನ ಬೆಂಕಿಯಾಗಿರಲು, ವಿನೂತನವಾದ ರಸಪ್ರಸಾದವನ್ನು, ಉಜ್ವಲವಾದ ಯಶಸ್ಸನ್ನು ಹೊಂದಿ ಪ್ರಭುಶಕ್ತಿಯೇ ಶಕ್ತಿದೇವರ ಆಭರಣ ವಾಗಿರಲು(ಶಿವನ ನಾಗಾಭರಣ) ಹೀಗೆ ಉದಾತ್ತ ಮಹೇಶ್ವರನೆಂದು ಪ್ರಖ್ಯಾತನಾಗಿರುವ ಅರಿಕೇಸರಿದೇವನು ನಮಗೆ ಭೋಗವನ್ನು ದಯಪಾಲಿಸಲಿ ಎಂದಿರುವನು.

ಕವಿಗಳು ಈ ರೀತಿ ಆಶ್ರಯದಾತನನ್ನು ಪ್ರಶಂಸೆ ಮಾಡುವುದು ಅಂದಿನ ಜೋಳದ ವಾಳಿ ಅಥವಾ ಆಶ್ರಯದಾತನ ಅನ್ನದ ಋಣ ತೀರಿಸುವುದು ಒಂದು ಮೌಲ್ಯವಾಗಿತ್ತು. ಕವಿಗಳು ಪ್ರಭುಗಳನ್ನು ಹಾಡಿ ಹರಸುವುದು ಅಚ್ಚರಿಯೇನಲ್ಲ. ಆದರೆ ದೇವತೆಗಳೊಂದಿಗೆ ದೊರೆಗಳನ್ನು ಹೊಗಳುವುದು ವಿಶೇಷವಾಗಿದೆ. 'ರಾಜಾ ಪ್ರತ್ಯಕ್ಷ ದೇವತಾ'ಎಂಬ ಮಾತು ಇಂದಿಗೂ ಬಳಕೆಯಲ್ಲಿದೆ. ಹಾಗಾಗಿ ಕವಿಗಳು ಹತ್ತು ಹಲವು ದೇವರೊಂದಿಗೆ ಪ್ರಭುವನ್ನು ಪ್ರಶಂಸಿಸಿರುವುದು.

**ಆಶ್ರಯದಾತ ಸ್ತುತಿ(ಸೂರ್ಯಸ್ತುತಿ)**

ಚಂಡ ವಿರೋಧಿ ಸಾಧನ ತಮಸ್ತಮಮೋಚ್ಚೆ ವಿಶಿಷ್ಟ ಪದ್ಮಿನೀ
ಷಂಡ ಮರಲ್ದು ರಾಗವಿನೊಲ್ದಿರೆ ಯಾಚಕ ಭೃಂಗಕೋಟಿ ಕೈ।
ಕೊಂಡು ನಿರಂತರ ತಗುಳ್ದು ಕೀರ್ತಿಸೆ ಮಿಕ್ಕೆಸೆವ ಪ್ರಚಂಡ ಮಾ
ರ್ತಾಂಡ ನಲರ್ಚುಗೆನ್ನ ಹೃದಯಾಂಬುಜಮಂ ನಿಜ ವಾಙ್ಮರೀಚಿಯಿಂ॥

**ವಿಕ್ರಮಾರ್ಜುನ ವಿಜಯ**(೧–೩)

ಪಂಪ ಕವಿಯು ತನ್ನ ಭಾರತದ ಮೂರನೇ ಪದ್ಯದಲ್ಲಿ ಆಶ್ರಯದಾತನಾದ ಅರಿಕೇಸರಿ ಯನ್ನು ಸೂರ್ಯನಿಗೆ ಹೋಲಿಸಿ ಸ್ತುತಿಸುವನು. ಕ್ರೂರವಾದ ಶತ್ರು ಸೈನ್ಯವೆಂಬ ಕತ್ತಲು ಚದುರಿ

ಹೋಗಲು ವಿಶೇಷ ಬಗೆಯ ಪದ್ಮಿನೀ(ಸ್ತ್ರೀ)ವೃಂದ ಅರಳಿ ಕೆಂಪು ಕೆಂಪಾಗಿ ಒಲಿಯಲು ಯಾಚಕ ವೃಂದ ನಿರಂತರ ಹೊಗಳಲಾಗಿ ಪ್ರಚಂಡ ಮಾರ್ತಾಂಡನಂತಿರುವ ಅರಿಕೇಸರಿಯು ನನ್ನ ಹೃದಯವನ್ನು ಅರಳಿಸಲಿ ಎಂದಿರುವನು

**ಆಶ್ರಯದಾತನ ಸ್ತುತಿ(ಕಾಮಸ್ತುತಿ)**

ಸಹಜ ಚಲ್ವಿನೊಳ್ ರತಿಯ ಸೋಲದ ಕೇಳಿಕೆಯೊಳ್ ಪೊದಳ್ದು ಸ
ನ್ನಿಹಿತವೆನಿಪ್ಪ ಪೂರ್ವಶುಭ ಲಕ್ಷಣ ದೇಹದೊಳೊಳ್ಪನಾಳ್ದು ಸಂ।
ದಹಿ ಕಟಕ ಪ್ರಸಾದದೆ ಮನೋಜನುಮಂ ಗೆಲೆವಂದನಾಗಳುಂ
ಸಹಜ ಮನೋಜನೋಜಗೆಮುಗೀಗೆ ವಿಚಿತ್ರ ರತೋತ್ಸವಗಳಂ॥

**ಪಂಪಭಾರತ**(೧-೪)

ಈ ಪದ್ಯದಲ್ಲಿ ಸಹಜ ಚಲುವಿನಿಂದ ಕೂಡಿರುವ ಅರಿಕೇಸರಿಯು ಕಾಮನಂತೆ ಸುಂದರವಾಗಿರುವನೂ ಅಪೂರ್ವವಾದ ಶುಭ ಲಕ್ಷಣಗಳಿಂದ ಕೂಡಿದ ದೈಹಿಕ ನಿಲುವು, ಸಹಜವಾದ ಚಲ್ವಿನ ಶೋಭಾಯಮಾನವಾಗಿರುವ ಮನ್ಮಥ(ಅರಿಕೇಸರಿ) ನಮಗೆ ಶೃಂಗಾರವನ್ನು ದಯಪಾಲಿಸಲಿ ಎಂದಿರುವನು. ಪಂಪ ನಿಜವಾಗಿಯೂ ಸೌಂದರ್ಯ ಪ್ರಿಯ ತನ್ನ ಚಲುವಿಕೆಯನ್ನು ಕಾವ್ಯದಲ್ಲಿ ವರ್ಣಿಸಿಕೊಂಡಂತೆ ಈ ಪದ್ಯದಲ್ಲಿ ದೊರೆಯಾಧ ಅರಿಕೇಸರಿಯನ್ನು ಮನ್ಮಥನಿಗೆ ಹೋಲಿಸಿರುವನು.

**ಆಶ್ರಯದಾತನ ಸ್ತುತಿ(ನಾರಾಯಣ ಸ್ತುತಿ)**

ಶ್ರೀಯುವತೀ ಪ್ರಿಯಂ ಬಲಯುತ ಬಲಿದರ್ಪಹರಂ ಜಿತಾರಿದೈ
ತೇಯನನಂತ ಭೋಗ ನಿಲಯಂ ಪ್ರತಿಪಾಲಿತ ಧರ್ಮಚಕ್ರನ
ಬ್ಜಾಯತನೇತ್ರನಾದಿ ಪುರುಷಂ ಪುರುಷೋತ್ತಮನೀಚಳುಕ್ಯನಾ
ರಾಯಣದೇವನೀಗೆಮಗೆ ಮಂಗಳಕಾರಣ ಮುತ್ಸವಂಗಳಂ

**ಗದಾಯುದ್ಧ**(೧-೧)

ಈ ಪದ್ಯದಲ್ಲಿ ರಾಜನ ಪ್ರಶಂಸೆ ಮತ್ತು ದೇವತಾ ಸ್ತುತಿಯನ್ನು ಏಕಕಾಲಕ್ಕೆ ಮಾಡಿರುವನು. ಪಂಪಕವಿಯು ಉದಾತ್ತ ನಾರಾಯಣನೆಂದು ಅರಿಕೇಸರಿಯನ್ನು ಸಂಬೋಧಿಸಿದಂತೆ ರನ್ನ ಕವಿಯು ಚಾಳುಕ್ಯನಾರಾಯಣನೆಂದು ಸತ್ಯಾಶ್ರಯನನ್ನು ಸಂಬೋಧಿಸಿರುವನು.

ರಾಜ್ಯ ಸಂಪತ್ತಿಗೆ ಒಡೆಯನೂ, ಸೈನ್ಯ ಸಮೇತನೂ ಬಲಿಷ್ಠ ಶತ್ರುವಿನ ಸೊಕ್ಕನ್ನಡಗಿಸಿದವನೂ, ಶತ್ರುಗಳೆಂಬ ರಾಕ್ಷಸರನ್ನು ಗೆದ್ದವನೂ, ಕಡೆಯಿಲ್ಲದ ಸುಖಕ್ಕೆ ಆವಾಸವಾದವನೂ, ಧರ್ಮ ಸಾಮ್ರಾಜ್ಯವನ್ನು ಪ್ರತಿಪಾಲಿಸಿದವನೂ, ಕಮಲದಂತ ವಿಶಾಲವಾದ ಕಣ್ಣಿನವನೂ, ತನ್ನ ರಾಷ್ಟ್ರಕ್ಕೆ ಪ್ರಥಮನೂ ಪುರುಷ ಶ್ರೇಷ್ಠನೂ ಆದ ಚಾಳುಕ್ಯ ನಾರಾಯಣನಾದ ಸತ್ಯಾಶ್ರಯನು ಮಂಗಳಕರವಾದ ಉತ್ಸವಗಳನ್ನು ನೀಡಲಿ ಎಂದಿರುವನು.

**ಆಶ್ರಯದಾತನ ಸ್ತುತಿ(ಶಂಕರಸ್ತುತಿ)**

ತರುಣೋತ್ತುಂಗ ಶಶಾಂಕಖಂಡಮೆ ಸುಧಾಬೀಜಂ ಭುಜುಂಗೇಂದ್ರನಂ
ಕುರಮುನ್ಮೀಲಿತ ಮಟ್ಟಹಾಸವೇ ದಳಾನೀಕಂ ವೃಷಂಪುಷ್ಪಮೀ।
ಶ್ವರ ಶೈಲಂ ಫಲಮಾಗೆ ಕೋಮಲಮುಖೀ ಗೌರಿಲತಾಶ್ಲಿಷ್ಟ ಶಂ
ಕರ ಕಲ್ಪದ್ರುಮನೀಗಭೀಷ್ಟ ಫಲಮಂ ಚಾಳುಕ್ಯ ನಾರಾಯಣಂ॥

**ಗದಾಯುದ್ಧ**(೧-೨)

ತನ್ನ ಆಶ್ರಯದಾತನು ಶಂಕರನಿಗೆ ಸಮಾನನೆಂದು ಹೇಳುವ ಈ ಪದ್ಯದಲ್ಲಿ ಬಾಲಚಂದ್ರನೇ ಅಮೃತದ ಬೀಜವಾಗಿರಲು, ಹೆಡೆಯೆತ್ತಿ ನಿಂತ ಸರ್ಪವೇ ದಳಗಳಾಗಿರಲು, ವೃಷಭವೇ ಹೂವುಗಳಾಗಿರಲು ಕೈಲಾಸ ಪರ್ವತವೇ ಅದರ ಫಲವಾಗಿರಲು ಕೋಮಲೆಯಾದ ಗೌರಿ ಎಂಬ ಲತೆಯಿಂದ ಸುತ್ತುವರಿದಿರುವ ಶಂಕರ ಕಲ್ಪವೃಕ್ಷವು ನಮ್ಮ ಅಭಿಷ್ಟಗಳನ್ನು ನೆರವೇರಿಸಲಿ ಎನ್ನುವುದರ ಮೂಲಕ ಸತ್ಯಾಶ್ರಯನು ಶಂಕರ ಸ್ವರೂಪಿ ಎಂದಿರುವನು.

**ಆಶ್ರಯದಾತನ ಸ್ತುತಿ(ಬ್ರಹ್ಮಸ್ತುತಿ)**

ವರಪದ್ಮಸನದೊಳ್ ಕನನ್ಮಣಿಮಯಂ ಸಿಂಹಾಸನ ಬ್ರಾಹ್ಮಿಯೊಳ್
ಪರಮಶ್ರೀ ಗಣನಾಕ್ಷಸೂತ್ರ ಮಣಿಯೊಳ್ ರತೋಜ್ವಲಂಭೂಷಣಂ
ದೊರೆಯಾಗಿರ್ಪಿನ ಮೊಂದುಗುಂದದಖಿಳಂ ವಿಜ್ಞಾನದಿಂದಂ
ಜಗದ್ಗುರುವಾದಂ ನಮಗೀಗೆ ಬೇಟ್ಪಿ ವರಮಂ ಶ್ರೀರಾಜಕಂಜಾಸನಂ

**ಗದಾಯುದ್ಧ**(೧-೨)

ಕುಳಿತ ತಾವರೆಯೇ ಹೊಳೆಯುವ ಮಣಿ ಖಚಿತವಾದ ಸಿಂಹಾಸನವಾಗಿರಲು ಹಿಡಿದ ಜಪಮಣಿಮಾಲೆಯೇ ರತ್ನಾಭರಣವಾಗಿರಲು, ಸಕಲ ಜ್ಞಾನವನ್ನು ಹೊಂದಿದ ಜಗದ್ಗುರುವಾದ

ಬ್ರಹ್ಮದೇವನು ಕಮಲಾಸನನಾಗಿ ನಮಗೆ ವರವನ್ನು ನೀಡಲಿ ಎನ್ನುವುದರ ಮೂಲಕ ಸತ್ಯಾಶ್ರಯನು ಬ್ರಹ್ಮದೇವನಿಗೆ ಸಮಾನ ಎಂದಿರುವನು.

**ಆಶ್ರಯದಾತನ ಸ್ತುತಿ(ಸೂರ್ಯಸ್ತುತಿ)**

ಬಲದ್ವೇರಿತ ಮೋಹರಾತಿ ಪಟುಗಳ್ ಪದ್ಮಾಸನ ಸ್ಪರ್ಶಸ
ಲ್ಲಲಿತಂಗಳ್ ಜಿತಚಕ್ರವಾಕ ನಿವಹ ಪ್ರೇಮಾವಹಂಗಳ್ ಮಹೀ।
ವಲಯೋದ್ದ್ಯೋತಕರಣಗಳಾ ನತಜನಕ್ಕಾನಂದಮಂ ಮಾಳ್ಕೆ
ಮಂಗಲ ಮುಚ್ಚಂಡಕರಂ ಮಹಿವಲಯದೊಳ್ ಚಾಳುಕ್ಯ ಮಾರ್ತಾಂಡನಾ॥

**ಗದಾಯುದ್ಧ**(೧-೪)

ಬಲಿಷ್ಠ ಶತ್ರುವಾದ ಕತ್ತಲೆಯನ್ನು ಓಡಿಸುವವನು, ಪದ್ಮಾಸನದಲ್ಲಿ ಕುಳಿತು ಆಶ್ರಿತರನ್ನು ಸಲಹುವವನು ಪ್ರಿಯರಾದ ಚಕ್ರವರ್ತಿಗಳ ಪ್ರೇಮವನ್ನು ಎತ್ತಿ ಸಾರುವನು. ಪ್ರಭಾವಶಾಲಿಯಾದ ಸತ್ಯಾಶ್ರಯನೆಂಬ ಸೂರ್ಯನ ಮಂಗಳಮಯವಾದ ಕೈಗಳು ಶರಣಾಗತರನ್ನು ರಕ್ಷಿಸಲಿ, ಸೂರ್ಯನು ಕತ್ತಲೆಯನ್ನು ಓಡಿಸಿದರೆ, ಚಾಲುಕ್ಯ ಸೂರ್ಯನಾದ ಸತ್ಯಾಶ್ರಯನು ಶತ್ರುಗಳೆಂಬ ಕತ್ತಲೆಯನ್ನು ನಾಶಮಾಡಿ ಶರಣಾಗತರಾಗಿ ಬಂದವರಿಗೆ ಆಶ್ರಯ ನೀಡಿ ಬೇಡಿದವರಿಗೆ ರಕ್ಷಣೆ ನೀಡುವ ಸೂರ್ಯನೆಂದು ಪ್ರಶಂಸಿಸುವನು.

**ಆಶ್ರಯದಾತನ ಸ್ತುತಿ(ಮನ್ಮಥಸ್ತುತಿ)**

ನನೆಯಂಬ ಮಿಗೆ ಕಣ್ಮಲರ್ ಮಕರಮಂ ಕ್ರೋಡಧ್ವಜಂ ಪೋಲೆಕ
ರ್ಬಿನ ಬಿಲ್ಲಂ ಪುರ್ಬು ಚಂದ್ರಬಲಮಂ ಕೈವಾರದಿಂದಂ ತದಾ।
ನನ ಚಂದ್ರಂ ಕುಡೆ ದೇಸೆ ಪೊಚ್ಚ ಪೊಸತಾಯ್ತೆಂಬನ್ನೆಗಂ ಮಾಳ್ಕಿನು
ತನ ಕಂದರ್ಪನೂನದಾನ ಗುಣಮಂ ಚಾಳುಕ್ಯ ಕಂದರ್ಪನಾ॥

**ಗದಾಯುದ್ಧ**(೧-೬)

ಅವನ ಕಣ್ಣು ಹೂಬಾಣವನ್ನು ಮೀರಿಸಲು ಅವನ ವರಹ ಧ್ವಜವು ಮಕರ ಧ್ವಜವನ್ನು ಹೋಲಲು, ಅವನ ಹುಬ್ಬು ಕಬ್ಬಿನ ಬಿಲ್ಲಿಗೆ ಮಿಗಿಲಾಗಿರಲು, ಚಂದ್ರನಂತ ಅವನ ಮುಖವು ಚಂದ್ರನಿಗೆ ಸಮನಾಗಿರಲು, ನೂತನ ಕಂದರ್ಪ(ಕಾಮ)ದೇವನೆಂದು ಹೆಸರಾದ ಚಾಳುಕ್ಯ ಕಂದರ್ಪ ದೇವನಾದ ಸತ್ಯಾಶ್ರಯನ ಅಂದವು ಕಾಮನಿಗಿಂತ ಅಂದವಾದುದು ಅವನ ದಾನಗುಣದ ಅತಿಶಯದಿಂದ.

ಮೇಲಿನ ಎಲ್ಲಾ ನಾಂದಿ ಪದ್ಯಗಳಲ್ಲಿ ಕವಿ ರನ್ನನ್ನು ಒಂದೊಂದು ಪದ್ಯದ್ಲಲಿ ಒಂದೊಂದು ದೇವತೆಯನ್ನು ಸ್ಮರಿಸುವುದರ ಮೂಲಕ ಆ ದೇವತೆಯ ವಿಶಿಷ್ಟತೆಯನ್ನು ತನ್ನ ದೊರೆಯಾದ ಚಾಳುಕ್ಯ ಸತ್ಯಾಶ್ರಯನಿಗೆ ಹೋಲಿಸುತ್ತ ತನ್ನ ಆಶ್ರಯದಾತನು ದೇವತೆಗಳಿಗಿಂತ ಮಿಗಿಲೆಂದಿರುವನು. ಶಿವ, ಬ್ರಹ್ಮ, ವಿಷ್ಣು, ಸೂರ್ಯ, ಮನ್ಮಥ ಇತ್ಯಾದಿ ದೇವತೆಗಳ ವಿಶಿಷ್ಟ ಗುಣ ಸಂಪನ್ನತೆ ಸತ್ಯಾಶ್ರಯನಲ್ಲಿದೆ ಎಂದು ಸ್ತುತಿಸುತ್ತಾನೆ. ಈ ಎಲ್ಲಾ ಪದ್ಯಗಳಲ್ಲಿ ಗಂಡು ದೇವರನ್ನು ಅಭೇದ ಕಲ್ಪಿಸಿ ಸ್ತುತಿಸಿದರೇ ಇನ್ನೊಂದು ಪದ್ಯದಲ್ಲಿ ಹೆಣ್ಣು ದೇವತೆಯೊಂದಿಗೆ ಸತ್ಯಾಶ್ರಯನನ್ನು ಹೋಲಿಸಿದ ಪದ್ಯವಿದೆ ಅದು ಈ ಕೆಳಗಿನಂತಿದೆ.

**ಆಶ್ರಯದಾತನ ಸ್ತುತಿ(ಚಾಮುಂಡಿಸ್ತುತಿ)**

ಕೂರಸಿ ವೀರಶ್ರೀಯಂ
ಕ್ರೂರದರಂ ಕೊಂದು ಸಮರ ಜಯಮಂ ಮಾಡಲ್
ಕೂರಸಿಯೊಳ್ ನೆಲಸುಗಿ ಕಂ
ಠೀರವ ವಾಹನೆ ಚಾಳುಕ್ಯಕಂಠೀರವನಾ

**ಗದಾಯುದ್ಧ**(೧-೫)

ತನ್ನ ಹರಿತವಾದ ಖಡ್ಗದಿಂದ ರಕ್ಕಸರನ್ನು ಧ್ವಂಸಗೊಳಿಸಿದಂತೆ ವಿಜಯಲಕ್ಷ್ಮಿಯನ್ನು ಒಲಿಸಿಕೊಂಡು ಶತ್ರುಗಳನ್ನು ನಾಶಪಡಿಸಿದ ಸತ್ಯಾಶ್ರಯನ ಹರಿತವಾದ ಖಡ್ಗದಲ್ಲಿ ಆ ಸಿಂಹ ವಾಹನೆಯಾದ ಚಾಮುಂಡಿಯು ನೆಲೆಸಿರಲಿ ಎನ್ನುವ ಅರ್ಥಬರುವ ಈ ಪದ್ಯದಲ್ಲಿ ಸತ್ಯಾಶ್ರಯನು ವೈರಿಗಳನ್ನು ನಾಶಪಡಿಸಿ ವೀರತ್ವವನ್ನು ಮೆರೆದ ವಿಷಯ ತಿಳಿದುಬರುತ್ತದೆ. ಒಬ್ಬ ಕವಿಯ ಕಾವ್ಯದಿಂದ ನಿಜವಾದ ಚಾರಿತ್ರಿಕ ವಿಷಯಗಳನ್ನು ತಿಳಿಯಲು ಪ್ರಾಚೀನ ಕಾವ್ಯಗಳನ್ನು ಅನುಸರಿಸುವುದು ಅಗತ್ಯವಾಗಿದೆ. ಇಜೆವ ಬೆಂಡಂಗನೆಂಬ ಬಿರುದು ಕೂಡ ಸತ್ಯಾಶ್ರಯನು ವೈರಿಗಳನ್ನು ಇಜೆದು ಕೊಲ್ಲುವುದರಲ್ಲಿ ವೀರನಾಗಿದ್ದನೆಂಬುದನ್ನು ತಿಳಿಸುತ್ತದೆ.

**ಆಶ್ರಯದಾತನ ಸ್ತುತಿ(ಗಣೇಶ ಸ್ತುತಿ)**

ಮದಮಣಮಿಲ್ಲ ದಾನಗುಣದಿಂ ನೆಗಟ್ದಿಲ ನೃಪಸಿಂಹನಾಗಿಯುಂ
ವಿದಿತ ವಿಶುದ್ಧ ಭದ್ರಗುಣನಂತೆ ವಿರುದ್ಧಮಿ ದೇಂಬಿನಂನಿಜಾ।
ಭ್ಯುದಯ ನಿವೇದ ದೀಘಕರ ಮೊಪ್ಪೆ ಜಗತ್ರಿಯನಾದ ದೇವನಂ
ಕದ ಗಣನಾಯಕಂ ವರದನಕ್ಕೆ ಮಗಮ್ಮನ ಗಂಧವಾರಣಂ

**ಗದಾಯುದ್ಧ**(೧-೨)

ವಿಶೇಷವಾದ ದಾನಗುಣದಿಂದ ಜಗತ್ತಿಗೆ ಪ್ರಿಯನಾದ ಸತ್ಯಾಶ್ರಯನು ಗಣಪತಿಯಂತೆ ನಮಗೆ ಪ್ರಸನ್ನವಾಗಿ ವರಗಳನ್ನು ದಯಪಾಲಿಸಲಿ ಎನ್ನುವುದರ ಮೂಲಕ ತನ್ನ ಗದಾಯುದ್ಧದಲ್ಲಿ ದೇವತೆಗಳ ವಿಶಿಷ್ಟವಾದ ಗುಣಗಳನ್ನು ಸತ್ಯಶ್ರಯನಿಗೆ ಹೋಲಿಸಿ ಸ್ತುತಿಸುತ್ತಾನೆ.

ಹೀಗೆ ಹಲವು ದೇವತೆಗಳನ್ನು ಸ್ತುತಿ ಮಾಡುವುದರ ಮೂಲಕ ಆ ದೇವತೆಗಳ ವಿಶಿಷ್ಟ ಗುಣ ಸ್ವಭಾವಗಳನ್ನು ಸತ್ಯಾಶ್ರಯನಿಗೆ ಹೋಲಿಸಿ ಕೊಂಡಾಡುತ್ತಾನೆ. ಈ ಪದ್ಯದಿಂದ ಸತ್ಯಾಶ್ರಯನ ದಾನಗುಣದ ವೈಶಿಷ್ಟತೆ ಕಂಡುಬರುತ್ತದೆ.

ನಾಗವರ್ಮನು ತನ್ನ ಛಂದೋಬುದಿ ಮತ್ತು ಕರ್ನಾಟಕ ಕಾದಂಬರಿಯಲ್ಲಿ ಹಲವು ದೇವತೆಗಳ ಸ್ತುತಿ ಮಾಡುತ್ತಾನೆ. ಇವನು ಕೂಡ ಪಂಪ ರನ್ನಾದಿಗಳಂತೆ ಮೊದಲ ಪದ್ಯದಲ್ಲಿ ಆಶ್ರಯದಾತನನ್ನು ಸ್ತುತಿಸುತ್ತಾನೆ.

**ಆಶ್ರಯದಾತನ ಸ್ತುತಿ(ಚಂದ್ರ ಸ್ತುತಿ)**

ಶ್ರೀ ಮನ್ನಾಗೇಂದ್ರಭೋಗ ಸ್ಫುರದರುಣಮಣಿದ್ಯೋತಿಸಂಧ್ಯಾನಿಬದ್ಧ
ಪ್ರೇಮಂ ಪೋದ್ಯತ್ತರಂಗೋಚ್ಚರದಮರನದೀತೀರರೋದಾರತಾರಾ।
ರಾಮಂ ಹೇಮಪ್ರಭಾ ಪುಸ್ಫುರಿತ ಗಿರಿಶಚಂಚಜ್ಜಬಾಜಾಲಜೂಟ
ವ್ಯೋಮ ಪ್ರೋದ್ಭಾಸಿ ಚಂದ್ರಂ ತ್ರಿಭುವನ ಜನಕಾನಂದಮಂ ಮಾಡುಗೆಂದು॥

**ಕರ್ಣಾಟಕ ಕಾದಂಬರಿ(೧–೧)**

ಆಕಾಶದಲ್ಲಿರುವ ಚಂದ್ರನು ತನ್ನ ದೊರೆಯದ ಚಂದ್ರಾಪೀಡನು ಬೇರೆ ಬೇರೆಯಲ್ಲ ಚಂದ್ರನನ್ನು ನೋಡಿದಾಗ ಆನಂದ ಉಂಟಾಗುತ್ತದೆ. ಹಾಗೆಯೇ ತನ್ನ ದೊರೆಯಾದ ಚಂದ್ರಾ ಪೀಡನು ಆನಂದದಾಯಕನಾಗಿದ್ದಾನೆ. ಇಬ್ಬರೂ ಒಂದೇ ಎಂದು ವರ್ಣಿಸುತ್ತಾನೆ. ಪಂಪ ರನ್ನಾದಿಗಳ ಕೃತಿಗಳಂತೆ ಇಲ್ಲಿಯೂ ಆಶ್ರಯದಾತ ದೊರೆಯನ್ನು ನಾಗವರ್ಮ ಸ್ತುತಿಸಿದ್ದಾನೆ.

**ಆಶ್ರಯದಾತನ ಸ್ತುತಿ(ಕಾಮದೇವನ ಸ್ತುತಿ)**

ಅವನಗಾಡಿ ನೋಡಿದವರಂ ಸಲೆಸೋಲಿಸುತಿರ್ಪ್ಪದುರ್ಕ್ಕಿನಿಂ
ದಾವನ ಪೂವಿನಂಬದಟರಂ ತಲೆವಾಗಿಸುತ್ತಿರ್ಪುದೊಟ್ಟಿಯಿಂ।
ದಾವನ ಪಜ್ಜಳಿಪ್ಪ ಜನಮೆಣ್ದೆಸೆಯೊಳ್ ನೆಲೆಸಿರ್ಪುದಾತನೀ
ಗಾವಗಮೆನ್ನ ಜಾಣ್ನುಡಿಗೆ ಮೆಯ್ಸಿರಿಯಂನನೆವಿಲ್ಲ ಬಲ್ಲಹಂ॥

**ಕಬ್ಬಿಗರ ಕಾವ್ಯ(೧–೧)**

**ಗುರು ಸ್ತುತಿ(ಜಿನ ಸ್ತುತಿ)**

ಶ್ರೀ ದೇವೇಂದ್ರ ಮುನೀಂದರ ವಂದಿತ ಗುಣವ್ರಾತಂ ಜಗತ್ಸಾಮಿಸಂ ಸಂದಾದಿ
ಬ್ರಹ್ಮನಗಾದ ಬೋಧ ನಿಳಯಂ ದುರ್ವ್ವಾರಂ ಸಂಸಾರವಿ
ಚ್ಛೇದೋಪಾಯ ನಿಯುಕ್ತ ಸೂಕ್ತಿ ವೃಷ ಮಾರ್ಗಾಗ್ರೇಸರಂ ಪಾಪ
ಹೃತ್ಪಾದಾಜ್ಞಂ ದಯಣಿಯ್ವೆನಕ್ಕೆಮನೆ ಮುಕ್ತಿ ಶ್ರೀ ಸುಖಾವ್ಯಾಪ್ತಿಯಂ.

**ಆದಿಪುರಾಣಂ(೧.೧)**

ಶ್ರೀ ದೇವೇಂದ್ರನಿಂದಲೂ, ಮುನಿಗಳಿಂದಲೂ ವಿಶೇಷವಾಗಿ ನನ್ನ ಗುರುವಾದ ದೇವೇಂದ್ರ ಮುನಿಯಿಂದ ವಂದನೆ ಸ್ವೀಕರಿಸುವ ಗುಣವಂತನೂ, ಅಗಾದಜ್ಞಾನ ನಿಧಿಯೂ, ಈ ಸಂಸಾರ ಬಂಧನದಿಂದ ಮುಕ್ತವಾಗಲು ಉಪಾಯಗಳನ್ನು ತಿಳಿಸಬಲ್ಲವನೂ, ಉತ್ತಮ ಮಾರ್ಗದಲ್ಲಿ ಎಲ್ಲರಿಗಿಂತ ಮುಂದೆ ಇರುವವನೂ, ಪಾಪವನ್ನು ಪರಿಹರಿಸುವ ಪಾದ ಕಮಲಗಳನ್ನು ಉಳ್ಳವನೂ ಆದ ಆದಿಬ್ರಹ್ಮನಾದ ವೃಷಭನಾಥ ತೀರ್ಥಂಕರನು ಮುಕ್ತಿಶ್ರೀಯನ್ನು ದಯಪಾಲಿಸಲಿ.

ಈ ಪದ್ಯದಲ್ಲಿ ಪಂಪನು ಮಾಡಿರುವ ಅಭೇದ ಕಲ್ಪನೆ ಇನ್ನೊಂದು ತೆರನಾಗಿದೆ. ಇಲ್ಲಿ ಬ್ರಹ್ಮದೇವನಿಗೂ ಹಾಗೂ ಮೊದಲ ತೀರ್ಥಂಕರನಾದ ವೃಷಭನಾಥನಿಗೂ ಬೇರೆಯಲ್ಲವೆಂದು ಸಮೀಕರಣ ಮಾಡಲಾಗಿದೆ. ಆದಿ ಪುರಾಣದ ಎರಡನೇ ಪದ್ಯದಿಂದ ಎಂಟನೆಯ ಪದ್ಯದವರೆಗೆ ಸಿದ್ಧರನ್ನು ಆಚಾರ್ಯರನ್ನು ಉಪಾಧ್ಯಾಯರನ್ನು ಸರ್ವ ಸಾಧುಗಳನ್ನು ಚಕ್ರೇಶ್ವರಿ, ವೃಷಭ, ಯಕ್ಷರನ್ನು ಸ್ತುತಿಸುತ್ತಾನೆ.

ಪಂಪನ ಆದಿ ಪುರಾಣದಂತೆ ಪೊನ್ನನ ಶಾಂತಿ ಪುರಾಣದಲ್ಲೂ ಕಾವ್ಯಾರಂಭದ ಮೊದಲ ಪದ್ಯ ಜಿನಸ್ತುತಿಯ ಪದ್ಯವಾಗಿದೆ. ಶಾಂತಿನಾಥ ಜಿನನನ್ನು ಸ್ತುತಿಸುವ ಪದ್ಯವಾಗಿರುತ್ತದೆ. ಅನಂತರ ಪೊನ್ನನು ಸಿದ್ದರನ್ನು, ಸೂರಿಗಳನ್ನು ಹಾಗೂ ಉಪಾದ್ಯಾಯರನ್ನು ಸ್ಮರಿಸುತ್ತಾನೆ.

**ಆಶ್ರಯದಾತನ ಸ್ತುತಿ(ಜಿನಸ್ತುತಿ)**

ಪರಮ ಸ್ನೇಹಗೇಹಾಯುತ ಪದಕಮಲಂ ಚೆತನಾಚೇತನಾಂಗ
ಸ್ಫುರಿತಾ ಘೌಘಚ್ಚಿದಂ ಬಾಸುರ ಸುರ ನರ ಸದ್ದೈವ್ಯ ಸೇವ್ಯವಚೋವಿ।
ಸ್ತರಂ ತೃಪ್ತಿವ್ಯಾಪ್ತ ಲೋಕತ್ರಿತಯ ನಪಗತಾ ಶೇಷದೋಷಾಳಿ
ಸ್ಥಿರ ಸೌಖ್ಯಾಂಭ ಸ್ವಯಂಭು ರಮಣ ಜಲದಿ ರಕ್ಷಿಕ್ಕೆ ಶಾಂತೀಶನೆಮ್ಮಂ

**ಶಾಂತಿಪುರಾಣ(೧-೧)**

ಪರಮ ಸ್ನೇಹಿಯೂ ಶ್ರೇಷ್ಠವಾದ ಪಾದ ಕಮಲಗಳಿಂದ ಕೂಡಿದವನೂ, ಸುರ ನರರಿಂದ ಸೇವಿಸಿಕೊಳ್ಳುವವನೂ, ತ್ರಿಲೋಕ ಜನರಿಂದ ವಂದಿಸಿಕೊಳ್ಳುವವನು ಸ್ಥಿರವಾದ ಮುಕ್ತಿಯನ್ನು ದಯಪಾಲಿಸುವ ಶಾಂತಿನಾಥನು ನಮ್ಮನ್ನು ರಕ್ಷಿಸಲಿ ಎಂದಿರುವನು.

ಕನ್ನಡ ಸಾಹಿತ್ಯದಲ್ಲಿ ಪಂಪನ ನಂತರ ಪ್ರಸಿದ್ಧ ಕವಿಯೆಂದರೇ ರನ್ನ ಮೊದಲ ಕವಿ ಪಂಪನು ಲೌಕಿಕ ಆಗಮಿಕ ಕಾವ್ಯ ಮಾರ್ಗವನ್ನು ಅನುಸರಿಸಿದಂತೆ ಪಂಪನ ಮಾರ್ಗವನ್ನು ನಂತರ ಬಂದ ರನ್ನನೂ ಅನುಸರಿಸಿದನು. ಅಜಿತನಾಥ ಪುರಾಣದ ಮೊದಲ ಪದ್ಯದಲ್ಲಿ ಜಿನಸ್ತುತಿಯಿದೆ. ಎರಡರಿಂದ ಹನ್ನೆರಡನೆಯ ಪದ್ಯದವರೆಗೆ ಸಿದ್ದರು, ಆಚಾರ್ಯರು, ಗುರುಗಳನ್ನು ಸ್ತುತಿಸಿದ ಕವಿರನ್ನ ಹದಿಮೂರನೆಯ ಪದ್ಯದಲ್ಲಿ ಸರಸ್ವತಿಯನ್ನು ಸ್ತುತಿಸುತ್ತಾನೆ.

**ಜಿನಸ್ತುತಿ–ಮಹಾವಿಷ್ಣು**

ಶ್ರೀಮನ್ನಾಮ್ರಾಮರೇಂದ್ರರುಣಮಣಿ ಮುಕುಟದ್ಯೋತಿ ಬಾಲಾರ್ಕಲೀಲೋ
ದ್ದಾಮಂ ಕಾಶ್ಮೀರರಾಗಂ ತನಗೆ ವಿನತನಾಗೇಂದ್ರಹಸ್ರಾರುಣಾಬ್ದಂ
ಹೈಮಂ ಕರ್ನಾವತಂಸಂ ತನಗೆಗೆ ಕರಮೊಪ್ಪಿರ್ದೊಳಾರ್ಹಂತ್ಯಲಕ್ಷ್ಮೀ
ಧಾಮಂ ಮಾಟ್ಕಿಮ್ಮ ಹೃತ್ಪದ್ಮಮನಜಿತ ಜಿನೇಂದ್ರಕ್ರಮಾಂಭೋರುಹಶ್ರೀ

**ಅಜಿತಪುರಾಣ**(೧–೧)

ಶ್ರೇಷ್ಠ ದೇವತೆಗಳಿಂದ ವಂದಿಸಿಕೊಳ್ಳುವ, ಹಲವು ಲೀಲೆಗಳಿಂದ ಪ್ರಸಿದ್ಧನಾದ ಅರ್ಹಂತ ನಾದ ಶೇಷಾಚಲನಾದ ಲಕ್ಷ್ಮೀ ನಿವಾಸನಾದ, ಶ್ರೀ ಮಹಾವಿಷ್ಣುವಿನಂತಿರುವ ಅಜಿತ ಜೀನೇಂದ್ರನು ನಮ್ಮ ಹೃದಯ ಕಮಲದಲ್ಲಿ ನೆಲಸಿರಲಿ ಎಂದಿರುವನು. ಆದಿಪುರಾಣದಲ್ಲಿ ಪಂಪನ ಸಮೀಕರಣದಂತೆ ಅಜಿತ ಪುರಾಣದಲ್ಲಿ ಅಜಿತನಾಥ ಜೀನೆಂದ್ರನು ವಿಷ್ಣುವಿಗೆ ಸಮಾನ ಎಂದಿರುವನು.

**ಜಿನ ಸ್ತುತಿ**

ಶ್ರೀರಾಮಾ ರಮಣೀಯ ಪಾದ ಸರಿಸೀಜಾತಂ ನಿಲಿಂಪೇಂದ್ರವ್ಯಂ
ದಾರಾದ್ಯಂ ಭುವನತ್ರಯ ಪ್ರಭು ವಿನೇಯಾನೀಕ ಕಲ್ಪದ್ರುಮಂ
ದೀರಂ ನಿತ್ಯನನಂತ ನಕ್ಷಯಸುಖಂ ಮುಕ್ತ್ಯಂಗನೇಕಂ ಜಗ
ತ್ಸಾರಂ ವೀರಜೀನೆಂದ್ರನೀಗೆಮಗೆ ಮುಕ್ತಿಶ್ರೀ ಸುಖಾವ್ಯಾಪ್ತಿಯಂ

**ಧರ್ಮಾಮೃತ**(೧–೧)

ಶ್ರೀ ರಾಮನಂತೆ ಸುಂದರನೂ, ಸುಂದರವಾದ ಪಾದಕಮಲಗಳನ್ನು ಹೊಂದಿದವನು ಮೂರು ಲೋಕದ ಜನರಿಂದ ವಂದಿಸಿಕೊಳ್ಳುವವನೂ ಬೇಡಿದ್ದನ್ನು ನೀಡುವ ಮುಕ್ತಿಯೆಂಬ ಅಂಗನೆಯನ್ನು ಮಾತ್ರ ಆಶ್ರಯಿಸಿದ ವೀರಜಿನೇಂದ್ರನಿಗೆ ಮುಕ್ತಿಶ್ರೀಯು ಸುಖವ್ಯಾಪ್ತಿಯನ್ನು ದಯಪಾಲಿಸಲಿ

**ಜಿನಸ್ತುತಿ**

ಲೀಲಾಘಾತ್ರೈಕ ಮಲ್ಲಿಮುಕುಳಮೆನಿಸೆ ನಾಶಗ್ರದೊಳ್ ಪಾಂಚಜನ್ಯಂ
ವ್ಯಾಳಂ ಶಯ್ಯಾತಳಂ ಪೊಗಣೆಯದೊಣೆಧೃತಂ ಕರ್ವುವಿಲ್ಲಾಗೆಶಾರ್ಙ್ಗಂ
ಹೇಳಾಕೃಷ್ಣಂ ಸುಕೃಷ್ಟಂ ಹರಿಮದಹರನಪ್ಪಂತೆ ಕಂದರ್ಪದರ್ಪ
ವ್ಯಾಳೋಢ ಕ್ರೀಡೆಗಾದಂ ಕುಡುಗೆಮಗೆ ಮಹೋತ್ಸಾಹಮಂ

**ನೇಮಿನಾಥ ಪುರಾಣ(೧-೨)**

ಪಾಂಚಜನ್ಯ(ಶಂಖ)ವೆಂಬುದು ಮೂಗಿನ ತುದಿಯಲ್ಲಿಟ್ಟುಕೊಂಡು ಆಘ್ರಾಣಿಸುವ ಒಂದು ಮಲ್ಲಿಗೆ ಹೂವೆನಿಸಿತು, ಸರ್ಪವಾಗಿದ್ದರೂ ಹಾಸುಗೆಯಾಯಿತು ಶರ್ಙ್ಗವೆಂಬ ಬಿಲ್ಲನ್ನು ಮನ್ಮಥನ ಕಯಲ್ಲಿರುವ ಕಬ್ಬಿನ ಬಿಲ್ಲಿನಂತೆ ಲೀಲಾಜಾಲವಾಗಿ ಹೆದೆಯೇರಿಸಿ ಸಂಪೂರ್ಣವಾಗಿ ಸೆಳೆದುಬಿಟ್ಟನು. ಈ ರೀತಿ ಕೃಷ್ಣನ ಗರ್ವವನ್ನು ಕಾಮನದರ್ಪವನ್ನು ಭಂಗಿಸುವುದು ಯಾರಿಗೆ ಒಂದು ಅಟವಾಯಿತೋ ಅಂತಹ ನೇಮಿನಾಥನು ನಮಗೆ ಯಥೇಚ್ಚವಾಗಿ ಉತ್ಸಾಹವನ್ನು ದಯಪಾಲಿಸಲಿ.

**ಜಿನಸ್ತುತಿ**

ಶ್ರೀಯಂ ಶ್ವೇತಾತಪತ್ರಂ ಪ್ರಥಿತ ವಿಭವಂ ಚಾಮರಂ ಬೋಧಮಂವಾ
ಕ್ಷೀಯೂಷಂ ಪೆರ್ಮೆಯಂ ಭಾಸುರಸುರ ಪಟಹಂ ಶಕ್ತಿಯಂ
ಸಿಂಹ ಪೀಠಂ ಸ್ವಾಯತ್ತಂ ಮಾಟ್ಪಿನಂ ಭಾವಳಿಯ ವಿಲಸಿತಾ
ಶೋಕಮಂದಿರ ವರ್ಷಚ್ಛಾಯಾಚ್ಛನ್ನಾಂಗನಾದ್ಯಂ ತ್ರಿಭುವನ
ವಿನುತಂ ನೇಮಿ ರಕ್ಷಿಕ್ಕೆ ನಮ್ಮಂ ॥

**ನೇಮಿನಾಥ ಪುರಾಣಂ(೧-೧)**

ಇಲ್ಲಿ ಮೊದಲ ಸಾಲಿನ ಪ್ರಾರಂಭದ ವರ್ಣ ಶ್ರೀ ಎಂದು ಬಳಕೆಯಾಗಿದೆ. ಇದು ಜೈನ ಕವಿಗಳ ವಿಶೇಷ ಲಕ್ಷಣವಾಗಿದೆ. ಪಂಪನಿಂದಲೇ ಪ್ರಾರಂಭವಾದ ಈ ಶ್ರೀಕಾರದ ಬಳಕೆ ಜೈನ ಕವಿಗಳ ಕಾವ್ಯಗಳುದ್ದಕ್ಕೂ ಕಾವ್ಯ ಲಕ್ಷಣವಾಗಿ ಬಳಕೆಯಾಗಿದೆ.

ಬೆಳ್ಗೊಡೆಯ ಶೋಭೆಯನ್ನು ಚಾಮರವು, ಯಶೋವೈಭವವನ್ನು ವಚನಾಂಮೃತವು, ಜ್ಞಾನವನ್ನು ಶೋಭಿಸುವ ದೇವದುಂದುಬಿಗಳು ಘನತೆಯನ್ನು ಸಿಂಹಾಸನವು ಸಾಮರ್ಥ್ಯವನ್ನು ಹೊಂದಿರಲು ಪ್ರಭಾ ಮಂಡಲದಿಂದಲೂ, ಅಶೋಕ ವೃಕ್ಷ ಹಾಗೂ ಮಂದಾರ ವೃಕ್ಷಗಳ ಛಾಯೆಯಿಂದಲೂ ಕಂಗೊಳಿಸುವ ದೇಹವುಳ್ಳ ತ್ರಿಲೋಕ ಪೂಜ್ಯನಾದ ನೇಮಿನಾಥನು ನಮ್ಮನ್ನು ಕಾಪಾಡಲಿ ಎಂದಿರುವನು. ನೇಮಿಚಂದ್ರನು ತನ್ನ ನೇಮಿನಾಥ ಪುರಾಣದ ಒಂದು ಮತ್ತು ಎರಡನೇ ಪದ್ಯಗಳಲ್ಲಿ ಜಿನಸ್ತುತಿಯನ್ನು ಮಾಡಿರುವನು.

**ಜಿನ ಸ್ತುತಿ**

ಶ್ರೀಪಾದಾಕ್ರಾಂತಲೋಕಂ ಪರಮ ಹಿಮಕರಂ ನೂತನ ಕ್ಷತ್ರಕಾಂತಂ
ತಾಪಧ್ವಾಂತಾಪನೋದಕ್ಷಮನಮೃತಕಲಾವಲ್ಲಭ ವಿಶ್ವವಿದ್ಯಾ
ಕೂಪಾರೋಜ್ಜೀವ ಜೈವತೃಕನತನುಕೃತ ಸ್ವಾಂತ ಸೌಖ್ಯ
ದೀಪಂ ತಳ್ಕೈಸುಗನ್ಮತಿ ಕುಮುದಿನಿಯಂ ತ್ರಿಲೋಕೀ ನೇಮಿಚಂದ್ರ ಜೀನೇಂದ್ರ

**ಲೀಲಾವತಿ ಪ್ರಬಂಧ**(೧-೧)

**ಜಿನ ಸ್ತುತಿ**

ವಿಧುಕಾಂತಂ ಕಾಮದಂ ಪ್ರೋದ್ಧತಮಕರ ಪತಾಕಂ ನತಾಬ್ರೂಲತಂಸೆ
ಪ್ಪಧನುಲೇಖಂ ಮನೋಲಕ್ಷ್ಯಕಮ ಸೃಣದರಸ್ಯೆರನೇತ್ರಪ್ರಸೂನಾ
ಯುಧನುದ್ಯದ್ವಾರತೀಸಂ ಕೊಡುಗೆಮಗಮೃತಶ್ರೀ ಸಮುತ್ಕಂಠೆಯಂಸ
ಶ್ರೀನ್ಮಥ ರಾಜ ಮನೋಜ್ಞ ಜಿನವದನಮಯಂ ಮನ್ಮಥದಿವ್ಯರೂಪಂ

**ಲೀಲಾವತಿ ಪ್ರಬಂಧ**(೧-೨)

ನೇಮಿಚಂದ್ರನು ತನ್ನ ನೇಮಿನಾಥ ಪುರಾಣದಂತೆ ಲೀಲಾವತಿ ಪ್ರಬಂಧದಲ್ಲೂ ಎರಡು ಜೀನಸ್ತುತಿಯನ್ನು ಮಾಡಿರುವನು. ನಾಗಚಂದ್ರನು ತನ್ನ ಮಲ್ಲಿನಾಥ ಪುರಾಣದಲ್ಲಿ ಜೈನ ಸಂಪ್ರದಾಯದಂತೆ ದಿವ್ಯಭಾಷಾ ವ್ಯಾಪರೋದಾರನಾದ ಮಲ್ಲಿನಾಥಜಿನನು ಸ್ತುತಿಸಿದ್ದಾನೆ. ಮಲ್ಲಿನಾಥ ಪುರಾಣದ ಕೊನೆಗೂ ಚರಿತ ಪುರಾಣಮಂ ನೆಜೆಯೆ ಪೆಟ್ಟೊಡೆ ಪೇಟ್ಗೆಮ ದಿವ್ಯ ಭಾಷೆಯಂ ಪರಮ ಜೀನೇಶ್ವರರ್, ಗಣಧರರ್ ಎಂದೂ ಉಲ್ಲೇಖಿಸಿದ್ದಾನೆ. ನಂತರದ ಐದು ಪದ್ಯಗಳಲ್ಲಿ ಸಿದ್ದರನ್ನು, ಆಚಾರ್ಯರನ್ನು ಉಪಾಧ್ಯಾರನ್ನು ಸಾಧುಗಳನ್ನು ಹಾಗೂ ವಿದ್ವಾಂಸರನ್ನು ಸ್ತುತಿಸಿದ್ದಾನೆ.

**ಜಿನಸ್ತುತಿ**

ಶ್ರೀಪಾದಂ ಬಾಲಚಂದ್ರೋಜ್ವಲತರ ಸುಮನೋವರ್ಷದಿಂ ಪಾದಪೀಠಂ
ಭೂಪಾಲೋತ್ತಂಸತಾರಾತರಳ ಮಣಿಗಳಿಂದುತ್ತಮಾಂಗ ಶರಜ್ಞೋ।
ತ್ಸ್ನಾ ಪಾಂಡುಚ್ಛತ್ರ ರತ್ನಂಗಳಿನಡಿಪೆ ನಿಜೈಶ್ವರ್ಯಮಂ ದಿವ್ಯಭಾಷೆ
ವ್ಯಾಪಾರೋದಾರನಾದಂ ಕೊಡುಗೆಮಗೆ ಸುಖಾವ್ಯಾಪ್ತಿಯಂ ಮಲ್ಲಿನಾಥಂ॥

**ಮಲ್ಲಿನಾಥ ಪುರಾಣ**(೧-೧)

**ಜಿನಸ್ತುತಿ**

ಶ್ರೀ ಮದನಂತಬೋದದಿನಂತ ವಿಳೋಕನದಿಂದನಂತ ಸೌ
ಖ್ಯಾಮೃತದಿಂದನಂತೆ ಬಲದಿಂ ತನಗಾದುದನಂತನಾಮಮು।
ದ್ದಾಮದನಂತ ಕರ್ಮಜಯದಿಂ ದೊರೆವೆತ್ತುದು ಮತ್ತನಂತಜಿ
ನ್ನಾಮನೆನಿಪ್ಪನೀಗೆಮಗನಂತ ಜಿನೇಂದ್ರನನಂತ ಸೌಖ್ಯಮಂ॥

**ಅನಂತನಾಥ ಪುರಣ**(೧-೧)

ಈ ಪದ್ಯದಲ್ಲಿ ಕವಿ ಜನ್ನನು ಅನಂತ ಎಂಬ ಪದವನ್ನು ಅನಂತಬಾರಿ ಬರುವಂತೇ ರಚಿಸಿ ಆ ಅನಂತ ಜಿನೇಂದ್ರನು ಅನಂತ ಸುಖ ಸೌಖ್ಯವನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತಾನೆ. ಹೀಗೆ ಕನ್ನಡ ಕಾವ್ಯದಲ್ಲಿ ಜಿನಸ್ತುತಿಯನ್ನು ಮಾಡುವುದರ ಮೂಲಕ ಕಾವ್ಯಾರಂಭವನ್ನು ಮಾಡಿರುವರು

**ಇಷ್ಟಾದೇವತಾ ಸ್ತುತಿ(ಗಣೇಶ ಸ್ತುತಿ)**

ದೇವತಾ ಸ್ತುತಿಗಳಲ್ಲಿ ಪಂಪ ಕೊನೆಯದಾಗಿ ಗಣೇಶನನ್ನು ಸ್ತುತಿಸಿ ವಿನಾಯಕನು ನಿರ್ವಿಘ್ನವಾಗಿ ತನ್ನ ಕಾವ್ಯವನ್ನು ನಡೆಸಿಕೊಡಬೇಕೆಂದು ಪ್ರಾರ್ಥಿಸುತ್ತಾನೆ.

ಎನ್ನದಾನಮಿದಾಗಳುಂ ಮಧುಪಾಶ್ರಯಂ ಧರೆಗವ್ಯವ
ಚ್ಛಿನ್ನ ದಾನಮಿದುಗಳು ವಿಭುದಾಶ್ರಯಂ ಗೆಲೆವಂದನೆ।
ನ್ನನ್ನಿಜೋನ್ನತಿಯಿಂದು ಮೀಪತಿಯೆಂದು ಮೆಚ್ಚಿ ವಿನಾಯಕಂ
ತಾನ್ನಿಮಿರ್ಚುಗೆ ಕಬ್ಬಮಂ ನಯದಿಂ ಗುಣಾರ್ಣವ ಭೂಪನಾಂ॥

**ಪಂಪಭಾರತ**(೧.೫)

ನನ್ನ ದಾನ ಯಾವಾಗಲೂ ಮಧುಪ(ಕುಡುಕದುಂಬಿ)ಗಳಿಗೆ(ಕಾವ್ಯ ರಸಾಸ್ವಾಧನೆ ಮಾಡುವವರಿಗೆ) ಕೊಡುವಂಥದು. ಆದರೆ ಅರಿಕೇಸರಿಯ ದಾನವಾದರೋ ಯಾವಾಗಲೂ ವಿದ್ವಾಂಸರಿಗೆ ಆಶ್ರಯ ಕೊಡುವಂಥದು ಹೀಗೆ ನಮ್ಮನ್ನು ತನ್ನ ಉನ್ನತಿಯಿಂದಲೇ ಅರಿಕೇಸರಿಯು ಜಯಶಾಲಿಯಾಗಿರುವನು. ಗುಣಾರ್ಣವನೆಂದು ಬಿರುದಾಂಕಿತನಾದ ಅರಿಕೇಸರಿಯ ಕಾವ್ಯವನ್ನು ವಿನಾಯಕನು ನಯವಾಗಿ ಮುನ್ನಡೆಸಲಿ ಎಂದಿರುವನು.

ನಮ್ಮ ದೇಶದಲ್ಲಿ ಸೌಮ್ಯ ದೇವತೆಗಳನ್ನು ಪೂಜಿಸುವಂತೆ ಉಗ್ರ ದೇವತೆಗಳನ್ನು ಪೂಜಿಸುತ್ತಾರೆ. ಹಾಗೆಯೇ ಸೌಮ್ಯ ದೇವತೆಗಳಾದ ಗಣೇಶ ಸರಸ್ವತಿ ನಾರಾಯಣ ಇತ್ಯಾದಿ ದೇವತೆಗಳನ್ನು ಸ್ಮರಿಸಿದ ಪಂಪಕವಿ ಉಗ್ರದೇವತೆಯಾದ ಕಾಳಿಯನ್ನು ಒಂದು ಪದ್ಯದಲ್ಲಿ(೧–೬) ಸ್ತುತಿಸಿದ್ದಾನೆ.

**ಆಶ್ರಯದಾತನ ಸ್ತುತಿ(ಕಾಳಕಾ ಸ್ತುತಿ)**

ತಿಸುಳದೊಳುಚ್ಚಳಿಪ್ಪ ಪೊಸನೆತ್ತರೆ ಕೆಂದಳಿರಾಗೆ ಕಣ್ಣಗು
ರ್ವಿಸುವಮೊಕ್ಕು ನೊಲ್ವ ಕರುಳೋಳಿಯೇ ವಾಳ ಮೃಣಾಳ ಮೊಗೆಮಿ।
ಕ್ಕಸುರ ಮೆಯ್ಯೊಳಾದ ವಿರಹಾಗ್ನಿಯನನಾಜಿಸುತಿಂತೆ ತನ್ನಕೂ
ರಸಿಯೊಳಡುರ್ತ ಕೊಂದಸಿಯೋಳೀ ಕಣಪಿಯೊಳ್ ಪಡೆಮೆಚ್ಚಗಂಡನಾ

**ಪಂಪ ಭಾರತ**(೧–೬)

ತನ್ನ ತ್ರಿಶೂಲದಿಂದಮೇಲಕ್ಕೆ ಚಿಮ್ಮುತ್ತಿರುವ ಹೊಸರಕ್ತವೇ ಕೆಂಪಾದ ಚಿಗುರಾಗಿರಲು ಕಣ್ಣಿಗೆ ಭಯವನ್ನುಂಟು ಮಾಡುತ್ತ ನೇತಾಡುತ್ತಿರುವ ಕರುಳ ಮೊಲೆಯೇ ದಂಟಾಗಿರಲು ರಾಕ್ಷಸರ ದೇಹದಲ್ಲುಂಟಾದ ಅಗಲಿಕೆಯೆಂಬ ವಿರಹಾಗ್ನಿಯನ್ನು ಆರಿಸುತ್ತಾ ತನ್ನ ಹರಿತವಾದ ಖಡ್ಗವನ್ನು ಆಶ್ರಯಿಸಿಕೊಂಡಿರುವ ಕೃಶಾಂಗಿಯಾದ ಕಾಳಿಯು ಪಡೆಮೆಚ್ಚ ಗಂಡನೆಂಬ ಬಿರುದಾಂಕಿತನಾದ ಅರಿಕೇಸರಿಯ ಖಡ್ಗವನ್ನು ಸೇರಿಕೊಂಡಿರಲಿ ಎಂದಿರುವನು.

**ಚಾಮುಂಡಿ ಸ್ತುತಿ**

ಕೂರಸಿ ವೀರಶ್ರೀಯಂ
ಕೂರದರಂ ಕೊಂದು ಸಮರ ಜಯಮಂ ಮಾಡಲ್
ಕೂರಸಿಯೊಳ್ ನೆಲಸುಗೆ ಕಂ
ಠೀರವವಾಹನೆ ಚಳುಕ್ಯಕಂಠೀರವನಾ

**ಗದಾಯುದ್ಧ**(೧–೫)

ಕವಿ ಪಂಪನು ಕಾಳಿಯನ್ನು ಸ್ತುತಿಸಿದರೆ ರನ್ನನು ಚಾಮುಂಡಿಯನ್ನು ಸ್ತುತಿಸುತ್ತಾನೆ. ಇವೆರಡೂ ಉಗ್ರದೇವತೆಗಳೆ ಹಾಗೂ ಪಂಪ ರನ್ನಾದಿಗಳೇ ರಚಿಸಿದ ಉಗ್ರ ದೇವತೆಗಳ ಆಶಯವೂ ಒಂದೇ ಆಗಿದೆ.

ತನ್ನ ಹರಿತವಾದ ಖಡ್ಗದಿಂದ ರಕ್ಕಸರನ್ನು ಧ್ವಂಸಗೊಳಿಸಿದಂತೆ ವಿಜಯಲಕ್ಷ್ಮಿಯನ್ನು ಒಲಿಸಿಕೊಂಡು ಶತ್ರುಗಳನ್ನು ನಾಶಪಡಿಸಿದ ಸತ್ಯಾಶ್ರಯನ ಹರಿತವಾದ ಖಡ್ಗದಲ್ಲಿ ಆ ಸಿಂಹವಾಹನೆಯಾದ ಚಾಮುಂಡಿಯು ನೆಲಸಿರಲಿ ಎನ್ನುವುದರ ಮೂಲಕ ತನ್ನ ಲೌಕಿಕ ಕಾವ್ಯವಾದ ಗದಾಯುದ್ಧದ ಕಾವ್ಯಾರಂಭದಲ್ಲಿ ಹಲವು ದೇವತೆಗಳನ್ನು ಸ್ತುತಿ ಮಾಡುವುದರ ಮೂಲಕ ಆ ದೇವತೆಗಳ ವಿಶೇಷ ಗುಣದೊಂದಿಗೆ ಅರಸನ ಗುಣವನ್ನು ಹೋಲಿಸಿ ಕಾವ್ಯ ರಚಿಸುತ್ತಾನೆ.

೧. **ಇಷ್ಟದೇವತೆ(ಮಹಾವಿಷ್ಣು)**

ಶ್ರೀ ವಧುವಂ ಪಯೋಧಿಮಥನೋದ್ಭವಂ ವಸ್ತುಸಮೂಹದೊಳುಮಹ
ದೇವ ಸಮೇತಮಿರ್ದಸುರರುಂ ಸುರರುಂ ಕುಡೆ ತನ್ನ ಮೆಚ್ಚುಗೋ
ಡಾವನ ಶೇಷ ಭೂಭುವನ ಮಂಡಲ ವಲ್ಲಭನಾದ ದೇವನೀ
ಗಾವಗಮೆಮ್ಮ ಬೇಟ್ಪವರದುನ್ನತಿಯಂ ಸುಕವೀಪ್ರವಲ್ಲಭ

**ಛಂದೋಂಬುದಿ**(೧-೨)

ಲಕ್ಷ್ಮೀಯ ಗಂಡನೂ, ಸುರವಂದಿಪನೂ ಭುವನಾದಿ ಪತಿಯೂ, ಬೇಡುವ ವರವನ್ನು ದಯಪಾಲಿಸುವನಾದ ಮಹಾವಿಷ್ಣು ತನ್ನ ಕೃತಿಯನ್ನು ಮುನ್ನಡೆಸಲಿ ಎನ್ನುವ ಮಹಾವಿಷ್ಣುವಿನ ಸ್ತುತಿಯನ್ನು ಮಾಡಿರುವನು.

೨. **ಶಿವಸ್ತುತಿ**

ಜಡೆಗಳ ಬಿಂಬಲೋಪ್ಪುವಳ ಕಾವಳಿ ಭೀಷಣಮಪ್ಪ ಪಾವಿನೊ
ಳ್ದುಡಿಗೆ ಪೊದಳ್ದ ಪೊಂದುಡಿಗೆ ಶಕ್ತಿ ವಿರಾಜಿಪ ಶಕ್ತಿ ಶೂಲಮೊ॥
ಳ್ಪಿಡಿದ ಕರಾಸಿ ಗೌರಿ ನಿಜವಲ್ಲಭೆಯಾಗಿರೆ ಮಿಕ್ಕ ನಾಕಿ
ಸಯ್ಯಡಿಯ ಪಿನಾಕಿ ಕೂರ್ತು ನಮಗೀಗೆ ವರಂಗಳನುತ್ತಮಂಗಳಂ॥

**ಛಂದೋಬುದಿ**(೧-೨)

ಜಟಾವಳಿಗಳಿಂದೊಪ್ಪುವ, ಭಯಂಕರ ಹಾವಿನ ಆಭರಣಗಳನ್ನು ಧರಿಸಿದ, ಶೂಲವನ್ನು ಹಿಡಿದ ಗೌರಿಯ ಗಂಡನಾದ ಶಿವನು ನಮಗೆ ವರಗಳನ್ನು ದಯಪಾಲಿಸಲಿ ಎನ್ನುವುದರ ಮೂಲಕ ಶಿವನ ಸ್ವರೂಪವನ್ನು ತಿಳಿಸುತ್ತ, ಶಿವಸ್ತುತಿಯಿಂದ ನಮಗೆ ವರಗಳು ದೊರಕಲಿ ಎಂದಿರುವನು.

**೩. ವಿನಾಯಕ ಸ್ತುತಿ**

ಸಕಲಲಾಗಮಾಭರಣ ನೀಶ್ವರಸೂನು ಸಮಸ್ತ ವಸ್ತುರೂ
ಪಕ ನಕಲಂಕನಭ್ಯುದಯಕಾರಣ ವಕ್ತ್ರನಾಪ್ತಲೌ
ಕಿಕಮತನನ್ವಿತಾಗಮ ಪದಾರ್ಥಪರಂಪರನಾದನಾವಿನಾ
ಯಶ ಗಣನಾಯಕಂ ಕೃತಿಗೆ ನಾಯಕನಕ್ಕೆ ನೆಗಟ್ತಿಗೋಜನಾ

**ಛಂದೋಂಬುದಿ**(೧-೩)

ಸಕಲ ಕಲೆ ಮತ್ತು ಆಗಮಗಳನ್ನು ಬಲ್ಲ ಈಶ್ವರನ ಮಗನೂ ಸಮಸ್ತ ಜನರಿಂದ ವಂದಿಸಿಕೊಳ್ಳುವವನು ಎನಿಸಿದಂತಹ ವಿನಾಯಕನೆ ಈ ಕೃತಿಗೆ ನಾಯಕನೆಂದು ತಿಳಿದು ಈ ಕೃತಿ ರಚಿಸುವೆನೆಂದಿರುವನು.

**೪. ಇಷ್ಟದೇವತೆ ಸ್ತುತಿ(ದುರ್ಗಾಸ್ತುತಿ)**

ನಗೆಮೊಗಮಂ ಪೊದಟ್ದಪೊಸಜವ್ವನಮಂ ಮಿಗಿಲಪ ಗಾಡಿಯಂ
ಸೊಗಯಿಪ ಮುದ್ದುಗೆಯ್ತಮನೋಜಲ್ದಿನಿಸಂ ಮನೆವಾಜೆ।
ಟ್ವಗೆ ಕೊಳೆ ಮೇಲೆವಾಯ್ದು ಮಹಿಷಾಸುರನಂತವೆ ಕೊಂದವಳಾವಳಾ
ಭಗವತಿ ಕೂರ್ತು ಬೀರಸಿರಿಯೀಗೆ ಭೂಜಾಸಿಗೆ ನಾಗವರ್ಮನಾ॥

**ಛಂದೋಂಬುದಿ**(೧-೪)

ನಗುಮೊಗದ, ಹೊಸ ಯೌವನದತಿಶಯವಾದ ಚಲುವಿನ ಮಹಿಷನೆಂಬ ರಕ್ಕಸನನ್ನು ಕೊಂದು ಮಹಿಷಾಸುರ ಮರ್ದಿನಿ ಎನಿಸಿಕೊಂಡಿರುವ ಭಗವತಿ ನನ್ನ ಕಾವ್ಯಕ್ಕೆ ಒಲಿದು ಬರಲಿ ಎಂದಿರುವನು.

ಭಗವತಿ: ಈ ಪದ್ಯದಲ್ಲಿ ಭಗವತಿ ಎಂಬ ಪದವನ್ನು ಕವಿ ನಾಗವರ್ಮ ಬಳಸುತ್ತಾನೆ. ಶಿವನು ಭಗವಂತನಾದರೆ ಅವನ ಅರ್ಧಾಂಗಿಯಾದ ಪಾರ್ವತಿ(ಭಗವತಿ) ಎಂದು ಕಂಡುಬರುತ್ತದೆ ಪಾರ್ವತಿಯ ಇನ್ನೊಂದು ಉಗ್ರ ರೂಪವೇ ದುರ್ಗೆ ಎಂದು ಕರೆಯಿಸಿಕೊಳ್ಳುತ್ತದೆ.

**ದಿವಾಕರ ಸ್ತುತಿ**

ಒದವಿದ ಕೌಮುಂದ ಮುಗಿಯೆ ಧಾರಿಣಿಯೊಳ್ ಕಡುಮಂದಮಾಗಿಪೆ
ರ್ಚಿದ ತಮಮೆಲ್ಲಮೋಸರಿಸೆ ತನ್ನನೆ ಕೀರ್ತಿಪ ಶಿಷ್ಯಕೋಟಿಗ।
ಭ್ಯುದಯ ವರಂಗಳಂ ನಿಜಕರಂ ದಯೆಗೆಯ್ದಿರೆ ತಾನೆ ದೇವನಾ
ದುದಯದಿವಾಕರಂ ಕರಮಲರ್ಚುವ ನಮ್ಮ ಮುಖಾರವಿಂದಮಂ॥

**ಛಂದೋಂಬುದಿ**(೧–೫)

ಇರುಳು ಕಳೆದು ಬೆಳಕು ಹರಿದು, ಶಿಷ್ಯ ಕೋಟಿಗೆ ಅಭ್ಯುದಯವನ್ನೇ ಮಾಡುವ ತಾನೇ ದೇವನೆನಿಸಿಕೊಂಡಿರುವ ಉದಯಕಾಲದ ಸೂರ್ಯನು ನಮಗೆ ಬೆಳಕನ್ನು ತರಲಿ.

ರುದ್ರಭಟ್ಟನು ತನ್ನ ಜಗನ್ನಾಥ ವಿಜಯದ ಪ್ರಾರಂಭದಲ್ಲಿ ವಿಷ್ಣು(ಕೃಷ್ಣ)ವನ್ನು ಸ್ತುತಿಸಿ ನಂತರದ ಪದ್ಯಗಳಲ್ಲಿ ಶಿವ, ಅಂಬಿಕೆ, ಸೂರ್ಯ, ಗಣಪತಿ, ಬ್ರಹ್ಮ ಇತ್ಯಾದಿ ದೇವತೆಗಳನ್ನು ಸ್ತುತಿಸುತ್ತಾನೆ.

ಉದಯ ಸ್ಥಿತಿ ಸಂಹಾರ
ಪ್ರದಂಜ(ಗ)ನಕ್ಕೆನಿಪ ಕಮಲಭವ ಹರಿಹರನಾ।
ಮದ ಪುರಷಾಕಾರತ್ರಯ
ಮದು ನಿನ್ನಾವಿಡಂಬ ಮಲ್ತೆ ಪರಮಜ್ಯೋತಿ॥

**ಜಗನ್ನಾಥ ವಿಜಯ**(೩.೨೦೫)

ವಿಷ್ಣುವೇ ತ್ರಿಮೂರ್ತಿಗಳಿಗೂ ಮೂಲಪುರುಷನೆಂದು, ಅನೇಕ ಕಡೆಗಳಲ್ಲಿ ಹೇಳಿದ್ದಾನೆ. ಪೂರ್ವಸಮುದ್ರ ತೀರದಲ್ಲಿರುವ ಪುರಿಯ ಜಗನ್ನಾಥಸ್ವಾಮಿ ರುದ್ರಭಟ್ಟನ ಇಷ್ಟದೇವವಾದುದರಿಂದ ಕೃಷ್ಣ ಚರಿತಾಮೃತಕ್ಕೆ ಜಗನ್ನಾತ ವಿಜಯವೆಂದು ನಾಮಕರಣ ಮಾಡಿರಬಹುದೆಂದು ಮದ್ರಾಸ್ ಕ್ರಿಶ್ಚಿಯನ್ ಕಾಲೇಜಿನಲ್ಲಿ ಪಂಡಿತರಾಗಿದ್ದ ಬ್ರಹ್ಮಶ್ರೀ ಜಾವಲಿ ರಾಮಸ್ವಾಮಿ ಶಾಸ್ತ್ರಿಗಳಿಂದ ಸಂಪಾದಿತವಾದ ಜಗನ್ನಾತ ವಿಜಯ ಗ್ರಂಥದ ಪೀಠಿಕಾ ಭಾಗದಲ್ಲಿ ಬರೆಯಲಾಗಿದೆ.೪

**ಜಗನ್ನಾಥ ಸ್ತುತಿ**

ಶ್ರೀ ರಾಮಾನಟ ಕೌಸ್ತುಭದ್ಯುತಿಕಿರತ್ಪುಷ್ಪಾಂಜಲಿ ಕ್ಷೇಪವ
ಕ್ಷೋರಂಗಸ್ಥಿತೆಯಾದ ಪಾದನಖರೋಚಿರ್ಗಂಗೆ ಪೃಥ್ವೀಶಕೋ

ಟೀರ ವ್ಯಾಪ್ತಿಗೆ ಸಂದ ಚಕ್ರರವಿ ದೈತ್ಯಧ್ವಾಂತಮಂ ಗೆಲ್ದಭೂ
ಭಾರಚ್ಛೇದ ವಿನೋದಿ ಕೃಷ್ಣನೇಮಗೀಗಾನಂದ ಸದೋಹಮಂ

**ಜಗನ್ನಾಥ ವಿಜಯ(೧-೧)**

ಈ ಪದ್ಯದಲ್ಲಿ ಜಗನ್ನಾಥನಾದ ಶ್ರೀ ಕೃಷ್ಣನನ್ನು ಸ್ತುತಿಸುತ್ತ ಶ್ರೀ ಲಕ್ಷ್ಮೀದೇವಿಯೆಂಬ ಸುಂದರ ನಟಿಯು ಕೌಸ್ತುಭ ಮಣಿಯ ದಿವ್ಯ ಕಾಂತಿಯೆಂಬ ಪುಷ್ಪಹಾರದಿಂದೊಪ್ಪುವ ಯಾರ ಹೃದಯ ರಂಗಸ್ಥಳದಲ್ಲಿರುವಳೋ ಯಾರ ಕಾಲುಗುರಿನ ಕಾಂತಿಗಂಗೆಯು ರಾಜರಾಜರ ಕೀರಿಟದಲ್ಲಿ ವ್ಯಾಪಿಸಿದೆಯೋ ಯಾರ ಚಕ್ರ(ವೆಂಬ) ಸೂರ್ಯನು ರಾಕ್ಷಸ ಸಮೂಹವೆಂಬ ಕಗ್ಗತ್ತಲೆಯನ್ನು ನಾಶಮಾಡಿದನೋ ಆ ಭೂ ಭಾರ ಹರಣ ವಿನೋದಿಯಾದ ಶ್ರೀಕೃಷ್ಣನು

**ಬ್ರಹ್ಮಸ್ತುತಿ**

ಜನಮತರಾಜಹಂಸ ನಯನಂ ಕಮಾಳವಸಥಂ ಕಳಾನಿಕೇ
ತಾನನೆನಸಿದ ಪೆಂಪುಪಮೆವೆತ್ತೊಡ ಮೇನೋ ಹಿರಣ್ಯಗರ್ಭನೆಂ।
ದೆನಿಸಿಯುದಾರನೆಂಬ ರಜೋಮೊಂದಿಯೆ ಸತ್ವ ನಿಧಾನನೆಂಬ ಪೆಂ
ಪನು ಗುಣಮಾದ ಲೋಪಿತನೊಲ್ದು ಚತುರ್ಮುಖನಿಗೆ ರಾಗಮಂ

**ಜಗನ್ನಾಥ ವಿಜಯ(೧-೨)**

ಜನಸ್ತುತವಾದ ರಾಜಹಂಸವನ್ನು ವಾಹನವನ್ನಾಗಿ ಪಡೆದ ಕಮಲಾಸನ ಲೋಕನಿಪುಣ (ಸೃಷ್ಟಿಕರ್ತ) ಕಲಾನಿಪುಣ ಮೇರುವಿನಂತೆ ಉನ್ನತ ಸ್ವಯಂಭೂ ಉದಾರಿ ರಜೋ ಗುಣಯುತ ನಾದರೂ ಸತ್ವನಿಧಾನನೆಂಬ ಹಿರಿಮೆಯನ್ನು ಪಡೆದಿರುವ ಲೋಕಪಿತನಾದ ಚತುರ್ಮುಖ ಬ್ರಹ್ಮನು ನಮಗೆ ಪ್ರೀತಿಯನ್ನುಂಟು ಮಾಡಲಿ.

**ಶಿವಸ್ತುತಿ**

ಅರಿಕಾಮಧ್ವಂಸಿ ನಾಗವ್ರಜಮಯಕಟಕಂ ರಾಜರಾಜ ಪ್ರತಿಷ್ಠಾ
ನಿರತಂ ಲೀಲಾಕ್ರಮೋದಂಚಿತ ನಿರವಧಿ ಗಾಂಗೇಯಕಂ ದ್ವಿಟ್ಪುರಧ್ವಂ
ಸರತ ಕ್ರೋಧಂ ವೃಷಾಂಕಂ ವಿಭುದನುತನುಮಾಕಾಮಿನೀ ಜೀವಿ
ಪರಮೈಸ್ವರ್ಯಪ್ರದಂ ರಕ್ಷಿಸುಗೆ ವಸುದೆಯಂ ಯುದ್ಧರಂಗ ತ್ರಿಣೇತ್ರಂ

**ಜಗನ್ನಾಥ ವಿಜಯ(೧-೩)**

ವೈರಿ ಕಾಮನನ್ನು ಧ್ವಂಸ ಮಾಡಿದವನು, ಸರ್ಪಗಳನ್ನು ಆಭರಣವಾಗಿಸಿಕೊಂಡವನು, ಕುಬೇರನ ಸ್ಥಿರತೆಯಲ್ಲಿ ಆಸಕ್ತನಾದವನು(ಕುಬೇರ ಸಖ), ಚಂದ್ರಧರನು, ತ್ರಿಪುರಾದಿಗಳನ್ನು ಸುಟ್ಟವನು, ವೃಷಭಧ್ವಜನು, ಯುದ್ಧರಂಗದಲ್ಲಿ ತನ್ನ ಮೂರನೇ ಕಣ್ಣಿನಿಂದ ವೈರಿಗಳನ್ನು ಸುಡುವವನು ಆದ ಈಶ್ವರನು ಭೂಮಿಯನ್ನು ರಕ್ಷಿಸಲಿ(ಜಗನ್ನಾಥನೆಂಬ ಶಿವನ ಭೂಮಿಯನ್ನು ರಕ್ಷಿಸಲಿ).

**ಸೂರ್ಯಸ್ತುತಿ**

ಜನಚಿತ್ತಹ್ಲಾದಪಾದಂ ಸಕಲಧರಣಿಭೃನ್ಮಸ್ತ ಕನ್ಯಸ್ತಮಾಗಿ
ರ್ಪಿನ ಮುಚ್ಚಂಡ ಪ್ರತಾಪೋದಯ ಮರಿಕುಮುದಾಭೋಗ ವಿಧ್ವಂಸಿಯಾಗಿ
ರ್ಪಿನಮುದ್ಯನ್ಮಂಡಲಾಗ್ರಂ ಸಲೆಘನಪದವೀ ಶೋಭೆಯಂ ಪೆರ್ಚಿಸುತ್ತಿರ್ಪಿನತ್ತಿ
ರ್ಪಿನ ಮೊಳ್ಪಂ ಪೆತ್ತುದಾತ್ತಂ ಬೆಳಗುಗೆ ಜಗಮಂ ಗೊಲಿಸ ಮಾರ್ತಾಂಡದೇವಂ

**ಜಗನ್ನಾಥ ವಿಜಯಂ**(೧-೪)

ಜನ ಚಿತ್ತಾಹ್ಲಾದಕರವಾದ ತನ್ನ ಕಿರೀಟಗಳನ್ನು ಯಾರು ಸಕಲ ಪರ್ವತಾಶ್ರಯಗಳಲ್ಲೂ ಹರಡುವನೋ, ಯಾರು ಅತಿಕ್ರೂರವಾದ ತಾಪವನ್ನು ಪರಿಹರಿಸುವನೋ, ವೈರಿ ನೈದಿಲೆಯ ವಿಕಾಸವನ್ನು ಧ್ವಂಸ ಮಾಡುವನೋ, ಯಾರ ಉತ್ಕೃಷ್ಟವಾದ ಮಂಡಲಾಗ್ರವು ಆಕಾಶ ಕಾಂತಿಯನ್ನು ಹೆಚ್ಚಿಸುವುದೋ ಅಂತಹ ಉದಾತ್ತನು ಶ್ರೇಷ್ಠನೂ ಆದ ಸೂರ್ಯದೇವನು ಜಗತ್ತನ್ನು ಬೆಳಗಲಿ(ಜಗನ್ನಾಥನೆಂಬ ಸೂರ್ಯನು ಜಗತ್ತನ್ನು ಬೆಳಗಲಿ).

ರಗಳೆಯ ಛಂದಸ್ಸನ್ನು ಜನಪ್ರಿಯಗೊಳಿಸಿ ರಗಳೆ ಕವಿಯೆಂದೇ ಖ್ಯಾತನಾದ ಕವಿ ಹರಿಹರದೇವನು ತನ್ನ ಏಕೈಕ ಚಂಪೂ ಕಾವ್ಯವಾದ 'ಗಿರಿಜಾಕಲ್ಯಾಣ'ದಲ್ಲಿ ಹಲವು ದೇವತಾ ಸ್ತುತಿಗಳನ್ನು ಕಾವ್ಯಾರಂಭದಲ್ಲಿ ಮಾಡುತ್ತಾನೆ. ಈತನ ಇಷ್ಟದೈವ ಹಂಪೆಯ ವಿರೂಪಾಕ್ಷ ಪಂಪಾಪತಿ ವಿರೂಪಾಕ್ಷನ ಜೊತೆಗೆ ಪಂಪಾಂಬಿಕೆಯಾದ ಪಾರ್ವತಿ ಗಜಾನನ(ಗಣಪತಿ) ಷಡಾನನ(ಷಣ್ಮುಖ) ಇವರನ್ನು ಸ್ತುತಿಸುತ್ತಾನೆ. ಶಿವಭಕ್ತನಾದ ಹರಿಹರ ಕೇವಲ ಶಿವನನ್ನಷ್ಟೇ ಅಲ್ಲದೆ ಅವನ ಕುಟುಂಬ ಸದಸ್ಯರನ್ನೆಲ್ಲ ಸ್ಮರಿಸುವುದು ವಿಶೇಷವಾಗಿದೆ. ಕಾವ್ಯಾರಂಭದ ಮೂರು ಪದ್ಯಗಳಲ್ಲಿ ಕವಿ ಹರಿಹರನು ತನ್ನ ಆರಾಧ್ಯ ದೈವವಾದ ವಿರೂಪಾಕ್ಷನನ್ನು ಸ್ತುತಿಸುತ್ತಾನೆ.

**೧. ವಿರೂಪಾಕ್ಷ**

ಶ್ರೀ ಮಚ್ಛೈಲೇಂದ್ರ ಪುತ್ರೀ ಗುರುತರ ಹೃದಯ ಕ್ಷೀರ ವಾರಾಶಿಚಂದ್ರಂ
ವ್ಯೋಮಾರ್ಕೇಂದು ಕ್ಷಮಾತ್ಮಾನಲಜಲತಪಮಾಮಾಷ್ಟಮೂರ್ತಿಪ್ರಸಿದ್ಧಂ

ಪ್ರೇಮಬೆತ್ತೀಗೆ ಸದ್ಭಕ್ತಿಯನೆಮಗಮರಾನೀಕಮಾಣಿಕ್ಯಮೌಳಿ
ಸ್ತೋಮಾಂಘ್ರಿದ್ಯೋತಿ ಪಂಪಾಪುರದರಸ ವಿರೂಪಾಕ್ಷನಾನಂದದಿಂದಂ

**ಗಿರಿಜಾ ಕಲ್ಯಾಣ(೧–೧)**

ಶೈಲೇಂದ್ರ ಪುತ್ರಿಯಾದ ಶೈಲಜೆಯ ಹೃದಯವೆಂಬ ಹಾಲ್ಗಡಲಿಗೆ ಚಂದ್ರನಂತೆಯೂ ಆಕಾಶ, ಸೂರ್ಯ, ಚಂದ್ರ, ಗಾಳಿ, ಬಯಲು, ನೆಲ–ಜಲ ಒಡೆಯರೆಂಬ ಎಂಟು ಪ್ರಸಿದ್ಧ ಮೂರ್ತಿಗಳಿಂದ ಪ್ರಸಿದ್ಧನೂ ಸಕಲ ದೇವತೆಗಳ ಮಣಿಮಯ ಕಿರೀಟಗಳ ಕಾಂತಿಯಿಂದ ಬೆಳಗುವ ಪಾದವುಳ್ಳುವನೂ ಆದ ಪಂಪಾಪುರದರಸ ಶ್ರೀ ವಿರೂಪಾಕ್ಷನು ರಕ್ಷಿಸಲಿ ಎಂದಿರುವನು.

### ೨. ವಿರೂಪಾಕ್ಷ ಸ್ತುತಿ

ಗೌರೀ ಪಾದಾಂಗುಲೀ ಕೋರಕ ಮೆಸೆವಕರಂ ಪಲ್ಲವಂ ಪುಷ್ಪವೃಂತ
ಕಾರಂ ಮಂದಸ್ಮಿತಂ ಶಾಖೆಗಳಮರ್ದ ಭೂಜಾನೀಕಮಾಸ್ಯಾಂಥಲ ಶ್ರೀ
ಸಾರಂ ತಾನಾದ ಪಂಪಾಪುರದರಸ ವಿರೂಪಾಕ್ಷ ಕಲ್ಪಾಂಘ್ರೀಪಂವಿ
ಸ್ತಾರಂ ಬೆತ್ತೀಗೆ ಸದ್ಭಕ್ತಿಯನೆಮಗಮೃತ ಪ್ರಾಯೆಯಂ ಪ್ರೀತಿಯಿಂದ

**ಗಿರಿಜಾ ಕಲ್ಯಾಣ(೧–೨)**

ಶ್ರೀ ಗೌರಿಯ ಪಾದಾಂಗುಲಿಗಳೇ ಮೊಗ್ಗಾಗಿರಲು, ಅವಳ ಹೊಳೆಯುವ ಕೈಗಳೇ ಚಿಗುರಾಗಿರಲು, ಮಂದಸ್ಮಿತ ಮೊಗವು ಹೂಗೊಂಚಲಾಗಿರಲು, ದಶಭುಜ ಶಾಖೆಗಳ ಮುಖ ಕಮಲವೇ ಶ್ರೀ ಪಲವಾಗಿರಲು, ಅಂತಹ ಸಂಪತ್ತಿನ ಸೌಭಾಗ್ಯಕೆ ಒಡೆಯನಾಗಿರುವ ಹಂಪೆಯ ವಿರೂಪಾಕ್ಷನು ಸಕಲ ಸದ್ಭಕ್ತಿಯನ್ನು ಕರುಣಿಸಲಿ ಎಂದಿರುವನು. ಈ ಪದ್ಯದಲ್ಲಿ ಕೇವಲ ವಿರೂಪಾಕ್ಷನಷ್ಟೇ ಅಲ್ಲ ಪಂಪಾಂಬಿಕೆಯ ಸ್ತುತಿಯು ಇದೆ.

### ೩. ವಿರೂಪಾಕ್ಷಸ್ತುತಿ

ಶ್ರೀ ಹೇಮಾದ್ರೀಂದ್ರ ಚೂಡ ಸ್ಥಿರಕರಣ ಸಮಾರೂಢ ಪದ್ಮಾಸನಸ್ಥಂ
ಕೋಹಂ ಸೋಹಂಗಳೆಂಬಾ ಗಜಿಬಜಿ ಪುಗದಾನಂದ ಸಂವಿತ್ತು
ಕಂದರ್ಪಾಹಂಕಾರ ಪ್ರವಿಧ್ವಂಸನಕರನಿಟಲಾಕ್ಷಂ ಶಿವಂ ಪಾರ್ವತೀಶಂ
ನೇಹಂ ಕೈಮುಕ್ಕು ಪಂಪಾಪುರಪತಿ ದಯೆಯಿಂ ನೋಡಿ ರಕ್ಷಿಕ್ಕೆ ನಮ್ಮಂ

**ಗಿರಿಜಾ ಕಲ್ಯಾಣ(೧–೩)**

ಹಿಮಚ್ಛಾದಿತವಾದ ಗೌರೀಶಂಕರ ಶಿಖರದ ಕೈಲಾಸದಲ್ಲಿ ಪದ್ಮಾಸನನಾಗಿ ಕೇವಲ ಆನಂದಾದಿಗಳನ್ನು ಪಡೆದವನೂ ಮನ್ಮಥನನ್ನು ದಹಿಸಿದ ಹಣೆಗಣ್ಣನ್ನು ಪಡೆದವನೂ ಆದ ಪಾರ್ವತೀ ಪತಿಯಾದ ಪಂಪಾಪತಿಯು ಕೃಪೆಯಿಟ್ಟು ನಮ್ಮನ್ನು ರಕ್ಷಿಸಲಿ ಎನ್ನುವುದರ ಮೂಲಕ ಶಿವನ ಮಹಿಮೆಯನ್ನು ತಿಳಿಸಿರುವನು.

**೪. ಪಾರ್ವತಿ ಸ್ತುತಿ**

ಮಂಗಳಮೂರ್ತಿ ಮಾನಿನಿ ಮಹೋಜ್ವಳೆ ಮಾನ್ಯೆ ಮಹಾಮಹೇಶನ
ರ್ಧಾಂಗಿ, ಮಹೋ ವಿರಾಜಿತೆ, ಮಹಾಶಿವಭಕ್ತೆ, ಮಹಾ
ಪತಿವ್ರತೋತ್ತುಗೆ ಮಹಾ ತ್ರಿಲೋಚನ ಮಹಾನಿದಿ
ತನ್ನ ವಿವಾಹ ವರ್ಣನಾ ಸಂಗತಿಯಂದ ಮತ್ಕೃತಿಗೆ
ಪಾರ್ವತಿ ಮಾಟ್ಕೆ ಮಹೋತ್ಸವಗಳಂ

**ಗಿರಿಜಾ ಕಲ್ಯಾಣ(೧-೪)**

ಮಂಗಳಕರವಾದ ಸ್ವರೂಪದವಳು, ಮಾನ್ಯಳಾದವಳು, ಶಿವನ ಅರ್ಧಾಂಗಿಯೂ, ಮಹಾ ಶಿವಭಕ್ತೆಯೂ, ಮಹಾ ಪತಿವ್ರತೆಯೂ ತ್ರಿಲೋಚನೆಯೂ ಮಂಗಳಗಳಿಗೆ ಮಹಾನಿಧಿಯಾದ ಸರ್ವಮಂಗಳೆಯ ವಿವಾಹ ವರ್ಣನೆಯ ಕಾವ್ಯಕ್ಕೆ ಮಹಾ ಉತ್ಸವವನ್ನುಂಟು ಮಾಡಲೆಂದು ಪಾರ್ವತಿಯ ವಿವಾಹ ಪ್ರಸಂಗಕ್ಕೆ ಸ್ವತಃ ಪಾರ್ವತಿಯೇ ಆಶೀರ್ವದಿಸಲೆಂದು ಪ್ರಾರ್ಥಿಸುತ್ತಾನೆ. ಕಾವ್ಯದ ಹೆಸರೇ ಗಿರಜಾಕಲ್ಯಾಣ ಕಥಾ ನಾಯಕಿಯೂ ಅವಳೇ ಆದುದರಿಂದ ಕಾವ್ಯಕ್ಕೆ (ಗಿರಿಜಾ ಕಲ್ಯಾಣ) ಪಾರ್ವತಿಯ ಸ್ತುತಿಯಿಂದ ಉತ್ಕರ್ಷ ಪ್ರಾಪ್ತಿಯಾಗಿದೆ.

**೫. ಗಣೇಶ ಸ್ತುತಿ**

ಎನ್ನೀ ಕಾವ್ಯಕ್ಕೆ ನಿರ್ವಿಘ್ನದಿನತುಳನವೀನಾರ್ಥವಾಕ್ಯ ಪ್ರಸನ್ನೋ
ತ್ಪನ್ನಾಲಂಕಾರಮಂ ಕೊಡುಗೆ ವಿಪುಳಕಪೋಳಸ್ಥಳಾಂತಸ್ಥಳೀಸಂ
ಭಿನ್ನೋದ್ಯದ್ದಾನಧಾರಾಪ್ರಬಳ ಪರಿಮಳಾಸಕ್ತಭೃಂಗಾವಳೀಸಂ
ಪನ್ನಪ್ರೋದ್ಭೂತಝಂಕಾರಿತರದ ಮುದಿತಾನಂದವೇಶಂಗಣೇ

**ಗಿರಿಜಾ ಕಲ್ಯಾಣ(೧-೫)**

ತನ್ನ ವಿಶಾಲವಾದ ಕಪೋಲಗಳಿಂದ ಸುರಿಯುತ್ತಿರುವ ಮದೋದಕ ಧಾರೆಗಳು ಅವುಗಳ ಸುಗಂಧಕ್ಕೆ ಹುಡುಕಿಕೊಂಡು ಬರುವ ದುಂಬಿಗಳು ಆ ದುಂಬಿಗಳ ಝುಂಕಾರಕ್ಕೆ ಆನಂದಿತನಾದ ಗಣಪತಿಯು ಈ ಕಾವ್ಯಕ್ಕೆ ನಿರ್ವಿಘ್ನತೆಯನ್ನುಂಟು ಮಾಡಲಿ

೬. ಷಡಾನನ(ಷಣ್ಮುಖಸ್ವಾಮಿ)ನ ಸ್ತುತಿ

ಪುಳಕಮನೆಸುತ್ತೆ ಹರನಂ ಪರಿದಪ್ಪುತೆ ಸಂತಸಂಗಳಂ
ಬಳೆಯಿಸುತುಂ ಭವಾನಿಯ ಪಯೋಧರಮಂ ನಲಿದುಂಡು ವಕ್ತ್ರಂ
ಡಳಮನಲರ್ಚುತುಂ ನಗುವ ಹೊಂಗುವ ಹಿಗ್ಗುವ ಪೊಣ್ಮುವುಣ್ಮುವ
ಗ್ಗಳಿಸುವ ಕಾಡುವಾಡುವ ಷಡಾನನನೀ ಕೃತಿಗೀಗೆ ರಾಗಮಂ

**ಗಿರಿಜಾ ಕಲ್ಯಾಣ(೧-೬)**

ತನ್ನ ಅಪ್ಪುಗೆಯಿಂದ ಶಿವನಿಗೆ ರೋಮಾಂಚನ ಮಾಡುತ್ತ ಗಿರಿಜೆಯ ಹಾಲನ್ನು ಕುಡಿದು ಪ್ರಸನ್ನವಾದ ಮುಖಕಮಲವನ್ನು ಅರಳಿಸಿ ಹಸನ್ಮುಖನಾಗಿ ನಲಿಯುತ್ತ ಹಾಡುವ, ನರ್ತಿಸುವ ಷಣ್ಮುಖಸ್ವಾಮಿಯು ಈ ಕೃತಿಗೆ ಶ್ರೇಯಸ್ಸನ್ನು ಕರುಣಿಸಲಿ. ಹೀಗೆ ತನ್ನ ಏಕೈಕ ಚಂಪೂ ಕೃತಿಯಾದ ಗಿರಿಜಾ ಕಲ್ಯಾಣದಲ್ಲಿ ಹಲವಾರು ಪದ್ಯಗಳಲ್ಲಿ ಶಿವನನ್ನು ಶಿವನ ಹೆಂಡತಿ ಪಾರ್ವತಿ, ಮಕ್ಕಳಾದ ಗಣೇಶ, ಷಣ್ಮುಖರನ್ನು ಸ್ತುತಿಸಿರುವನು.

ಹರಿಹರನ ಸೋದರಳಿಯನೂ, ಶಿಷ್ಯನೂ, ಷಟ್ಪದಿಯ ಬ್ರಹ್ಮನೂ ಎಂದು ಹೆಸರಾಂತ ರಾಘವಾಂಕನು ತನ್ನ ಪ್ರಸಿದ್ಧವಾದ ಕಾವ್ಯವೆನಿಸಿರುವ ಹರಿಶ್ಚಂದ್ರ ಕಾವ್ಯದಲ್ಲಿ ಹರಿಹರನಂತೆಯೇ ಕಾವ್ಯಾರಂಭದಲ್ಲಿ ಪಂಪಾಪತಿಯಾದ ವಿರೂಪಾಕ್ಷನನ್ನು ಸ್ತುತಿಸಿರುವನು.

**ವಿರೂಪಾಕ್ಷ ಸ್ತುತಿ**

ಶ್ರೀ ಪತಿಗೆ ಸೊಬಗ ನುಡುಪತಿಗೆ ಶಾಂತಿಯನು ವಾ
ಣೀ ಪತಿಗೆ ಚಾತುರ್ಯಮಂ ದಿವಸ್ಪತಿಗೆ ಪ್ರ
ತಾಪಮಂ ಸುರಪತಿಗೆ ಭೋಗಮಂ ರತಿಪತಿಗೆ ಮೂಲೋಕವಾವರಿಸುವ
ರೂಪಂ ಸರಿತ್ಪತಿಗೆ ಗಂಭೀರತೆಯನು ಸ್ವಾ
ಹಾಪತಿಗೆ ತೇಜಮಂ ಕೊಟ್ಟು ಗುರುಮೂರ್ತಿ ಪಂ
ಪಾಪತಿ ವಿರೂಪಾಕ್ಷನೆಮಗಿಷ್ಟ ಸಿದ್ಧಿಯಂ ಮೊಳ್ಕೆ ಸಂತೋಷದಿಂದ

**ಹರಿಶ್ಚಂದ್ರ ಕಾವ್ಯ(೧-೧)**

ಲಕ್ಷ್ಮೀಪತಿಯಾದ ವಿಷ್ಣುವಿಗೆ ಸೊಬಗನ್ನು, ನಕ್ಷತ್ರಗಳ ಒಡೆಯನಾದ ಚಂದ್ರನಿಗೆ ಶಾಂತಿಯನ್ನು, ಸರಸ್ವತಿಯ ಪತಿಯಾದ ಬ್ರಹ್ಮದೇವನಿಗೆ ಚಾತುರ್ಯವನ್ನು ದಿನಪತಿಯಾದ ಸೂರ್ಯದೇವನಿಗೆ ತೇಜಸ್ಸನ್ನು, ದೇವತೆಗಳ ಒಡೆಯನಾದ ದೇವೇಂದ್ರನಿಗೆ ಭೋಗವನ್ನು,

ರತಿಪತಿಯಾದ ಮನ್ಮಥನಿಗೆ ಮೂರು ಲೋಕ ಮೀರಿಸುವ ಚಲುವನ್ನು, ಸರಿತ್ಪತಿಯಾದ ವರುಣ(ಮಳೆದೇವ)ನಿಗೆ ಗಾಂಭೀರ್ಯವನ್ನು, ಸ್ವಾಹಾಪತಿಯಾದ ಅಗ್ನಿದೇವನಿಗೆ ತೇಜವನ್ನು ಕೊಟ್ಟ ಗುರುಮೂರ್ತಿ ಪಂಪಾಪತಿ ವಿರೂಪಾಕ್ಷನು ನಮಗೆ ಇಷ್ಟ ಸಿದ್ಧಿಯನ್ನುಂಟು ಮಾಡಲಿ ಎನ್ನುವುದರ ಮೂಲಕ ಹಂಪೆಯ ವಿರೂಪಾಕ್ಷನಾದ ಶಿವನು ಮೇಲೆ ತಿಳಿಸಿರುವ ಎಲ್ಲಾ ದೇವತೆಗಳಿಗಿಂತ ಮೀಗಿಲಾದವನು ಎಂಬ ಭಾವವಿದೆ. ಅದಕ್ಕಾಗಿಯೇ ಶಿವನನ್ನು ದೇವಾದಿ ದೇವನೆಂದು ಕರೆಯುತ್ತಾರೆ. ಶಿವನೇ ಎಲ್ಲ ದೇವತೆಗಳಿಗೆ ಒಂದೊಂದು ರೀತಿಯ ವಿಶೇಷ ಸಾಮರ್ಥ್ಯವನ್ನು ಕೊಟ್ಟನೆಂದು ಹೇಳುವ ಈ ನಾಂದಿ ಪದ್ಯವು ಎಲ್ಲ ದೇವತೆಗಳ ನಾಂದಿ ಪದ್ಯದಂತಿದೆ. ಅದಕ್ಕಾಗಿಯೇ ಈ ಕಾವ್ಯದ ಮೊದಲ ನಾಂದಿ ಪದ್ಯ ಬಹಳ ಪ್ರಸಿದ್ಧವಾಗಿದೆ. ಕವಿ ವಿರೂಪಾಕ್ಷನೊಂದಿಗೆ ಹಲವು ದೇವತೆಗಳನ್ನು ಸ್ತುತಿಸುವ ಪ್ರಯತ್ನ ಮಾಡಿರುವನು. ತನ್ನ ಎರಡನೆಯ ಪದ್ಯದಲ್ಲೂ ಕವಿ ರಾಘವಾಂಕನು ವಿರೂಪಾಕ್ಷನನ್ನು ಸ್ತುತಿಸುವನು.

**ವಿರೂಪಾಕ್ಷ ಸ್ತುತಿ**

ಜಡೆಯಿಡುಕುಜೆಡೆಯಡೆಯೊಳಡಿಯಿಡುವ ಕಡಲತಡಿ
ವಿಡಿದಿಡು ಗಡಣದೊಡೆಯ ನೊಡಲೊಡದು ನಡನಡುಗಿ
ಬಡಕರಿಸಿ ಮಿಡುಮಿಡುಕಲಡಿಗಡಿಗೆ ಜಡಿಜಡಿದು ಪಡಪಡಿಪ ನಡುನಯನದ
ಮಡುವಿಡುವ ಜಲದಿಯಂ ಕಡೆವ ಕಡೆಯೊಳ್ ಮೂಡಿ
ಘುಡುಗುಡಿಸಿ ಪಡೆಯ ಪಡಲಿಡೆ ಕೆಡಪುವುದ ತುಡುಕಿ
ಪಿಡಿದೊಡನೆ ಪೊಸೆದು ಕೊರಳೆಡೆ ತೊಡೆದ ಹಂಪೆಯ ಮೃಡಂ ಬಿಡದೆ ಸಲಹುಗೆಮ್ಮ

**ಹರಿಶ್ಚಂದ್ರ ಕಾವ್ಯಂ**(೧-೨)

ತನ್ನ ಜಟೆಯ ಅಂಚಿನಲ್ಲಿ ಹರಿಯುವ ಗಂಗೆಯ ನೀರಿನಲ್ಲಿ ಚಂದ್ರನ ಚೂರೊಂದು ಹೊಳೆಯುತ್ತಿರಲು ಅವನ ಮೂರನೇ ಕಣ್ಣಿನ ಬೆಂಕಿ ಪ್ರಜ್ವಲಿಸಲು ಸುರಾಸುರರು ಮಥಿಸಿದ ಕ್ಷಿರಸಾಗರದಿಂದ ಬಂದ ಮಹಾಕಾಳಕೂಟವೆಂಬ ವಿಷವನ್ನು ನುಂಗಿ ಶ್ಯಾಮಲ ವರ್ಣನಾಗಿ ಮಿನುಗುತ್ತಿರುವ ಹಂಪೆಯ ಒಡೆಯನಾದ ವಿರೂಪಾಕ್ಷನು ಸಲಹಲಿ ಎಂದು ಪ್ರಾರ್ಥಿಸಿರುವನು.

**ಪಾರ್ವತಿ ಸ್ತುತಿ**

ವಾಣಿಯಜೆವಿನ ಬೆಳಗು ಮುಕುತಿ ವನಿತೆಯ ಮುಡಿಯ
ಮಾಣಿಕಂ ಸರ್ವ ಮಂತ್ರಾದಿ ಪಂಚಾಕ್ಷರಿಯ

ಪ್ರಾಣ ಮಂಗಳದ ಮನೆ ದೇವಲೋಕದ ಜನ್ಮಭೂಮಿ ತಾವರೆಗಣ್ಣನ
ರಾಣಿಯೆಸೆವೊಲೆ ಭಾಗ್ಯಂ ಸರ್ವಸಿದ್ಧಿಗಳ
ತಾಣಂ ವಿರೂಪಾಕ್ಷನುನ್ನತೈಶ್ವರ್ಯದ
ಕ್ಷೋಣಿ ಪಂಪಾಂಬಿಕೆ ಮದೀಯ ಮತಿಗೀಗೆ ಪ್ರಸನ್ನತೆಯನುತ್ಸವದೊಳು

**ಹರಿಶ್ಚಂದ್ರ ಕಾವ್ಯ**(೧-೭)

ಸರಸ್ವತಿಯ ಜ್ಞಾನಕ್ಕೆ ಮೂಲವೂ, ಮುಕ್ತಿಕಾಂತೆಯ ಮುಡಿಯ ಮಾಣಿಕ್ಯವೂ, ಸರ್ವಮಂತ್ರಗಳಿಗೂ ಮೂಲವಾದ ಪಂಚಾಕ್ಷರಿಯ ಪ್ರಾಣವೂ, ಮಂಗಳಕ್ಕೆ ನಿವಾಸವೂ ದೇವಲೋಕದ ತಾಯಿಯೂ, ಕಮಲಾಕ್ಷನ ರಾಣಿ ಲಕ್ಷ್ಮೀದೇವಿಯ ಓಲೆ ಭಾಗ್ಯವೂ, ಸರ್ವ ಸಿದ್ಧಿಗಳ ಪವಿತ್ರ ಕ್ಷೇತ್ರವೂ ವಿರೂಪಾಕ್ಷನಿಗೆ ಉನ್ನತ ಐಶ್ವರ್ಯದ ಕ್ಷೇತ್ರವೂ ಆದ ಪಂಪಾಂಬಿಕೆಯು ನನ್ನ ಮತಿಗೆ ಪ್ರಸನ್ನತೆಯನ್ನುಂಟು ಮಾಡಲಿ ಎಂದು ಹೇಳಿ ಕಾವ್ಯದ ಎಂಟನೆಯ ಪದ್ಯದಲ್ಲಿ ಪಂಪಾಪತಿ ವಿರೂಪಾಕ್ಷನು ನಮಗೆ ಭಕ್ತಿ, ಜ್ಞಾನ, ಸಂಪತ್ತನ್ನು ದಯಪಾಲಿಸಬೇಕೆಂದು ಪ್ರಾರ್ಥಿಸುತ್ತಾನೆ.

ಕವೀಶ್ವರ ಚಿದಾನಂದ ಮಲ್ಲಿಕಾರ್ಜುನನಿಂದ ರಚಿತವಾದ ಸೂಕ್ತಿ ಸುಧಾರ್ಣವ ಅಥವಾ ಕಾವ್ಯಸಾರ ಎಂದು ಹೆಸರಾದ ಕೃತಿಯಲ್ಲಿ ಪ್ರಾರಂಭದಲ್ಲಿ ಎರಡು ವಿಷ್ಣು ಸ್ತುತಿಗಳಿವೆ. ಅವು ಪಂಚತಂತ್ರದಿಂದ ಆರಿಸಿದ ಪದ್ಯಗಳು.

ಶ್ರೀ ನೆಲಸಿರ್ಪ ತಾವರೆಯನಾಂತ ಸರೋವರದಂತೆ ವಿದ್ರುಮ
ಶ್ರೀ ನೆಲಸಿರ್ಪ ವಾರಿನಿಧಿಯಂತೆ ತಳಿರ್ ಪುದಿದಾಮ್ರದಂತೆ ತೇ
ಜೋನಿಧಿಯಪ್ಪ ಬಾಲರವಿ ತಳ್ತ ವಿಯತ್ತಳದಂತೆ ವಿಶ್ವಧಾ
ತ್ರಿನುತ ಕೌಸ್ತುಭಾಭರಣನಚ್ಯುತನೀಗೆಮಗೊಲ್ದುರಾಗಮಂ

**ಪಂಚತಂತ್ರ**(೧-೧)

ಶ್ರೀದೇವಿಯು ನೆಲಸಿದ ಕಮಲದಂತೆ, ಕಮಲವಿರುವ ಸರೋವರದಂತೆ ಚಿಗುರಿದ ಮರದಂತೆ ತೇಜೋನಿಧಿಯಾದ ಬಾಲರವಿ ಬಂದ ಆಗಸದಂತೆ ವಿಶ್ವದ ಭೂಜನರಿಂದ ಸ್ತುತಿಸಿಕೊಳ್ಳುವ ಕೌಸ್ತುಭ ಆಭರಣ ಭೂಷಿತನಾದ ಶ್ರೀಹರಿಯು ನಮಗೆ ಒಲಿದು ರಕ್ಷಿಸಲಿ.

ಕವಿ ಕುಮಾರವ್ಯಾಸನು ತನ್ನ ಕರ್ಣಾಟ ಭಾರತ ಕಥಾ ಮಂಜರಿಯ ಆದಿಪರ್ವದ ಮೊದಲ ಪದ್ಯದಲ್ಲಿ ತನ್ನ ಆರಾಧ್ಯ ದೈವವಾದ ವೀರನಾರಾಯಣ(ವಿಷ್ಣು)ನನ್ನು ಸ್ತುತಿಸುತ್ತಾನೆ.

ನಂತರದ ಪದ್ಯಗಳಲ್ಲಿ ಶಿವನನ್ನು, ಗಣೇಶನನ್ನು, ಬ್ರಹ್ಮನನ್ನು, ಸರಸ್ವತಿಯನ್ನು, ಲಕ್ಷ್ಮಿಯನ್ನು ಗೌರಿಯನ್ನು ಹೀಗೆ ಹಲವಾರು ದೇವತೆಗಳನ್ನು ಸ್ತುತಿಸಿ ಆ ದೇವತೆಗಳು ತನ್ನ ಕಾವ್ಯವನ್ನು ಮುನ್ನಡೆಸಲೆಂದೂ ಪ್ರಾರ್ಥಿಸುತ್ತಾನೆ.

**ಗದುಗಿನ ವೀರನಾರಾಯಣ**

ಶ್ರೀವನಿತೆಯರಸನೆ ವಿಮಲ ರಾ
ಜೀವ ಪೀಠನ ಪಿತನೆ ಜಗಕತಿ
ಪಾವನನೆ ಸನಕಾದಿ ಸಜ್ಜನನಿಕರ ದಾತಾರ
ರಾವಣಾಸುರ ಮಥನ ಶ್ರವಣ ಸು
ಧಾ ವಿನೂತನ ಕಥನ ಕಾರಣ
ಕಾವುದಾತನ ಜನವ ಗದುಗಿನ ವೀರನಾರಾಯಣ

**ಕರ್ಣಾಟ ಭಾರತ ಕಥಾಮಂಜರಿ**(೧-೧)

ಲಕ್ಷ್ಮೀದೇವಿಯ ಒಡೆಯನೂ, ನಿರ್ಮಲವಾದ ಕಮಲದ ಪೀಠದ ಮೇಲೆ ಕುಳಿತ ಬ್ರಹ್ಮದೇವನ ತಂದೆಯೂ, ಲೋಕಕೆಲ್ಲ ಪರಮ ಪಾವನನಾದವನೂ, ಸನಕ ಇತ್ಯಾದಿ ಸಜ್ಜನರ ಸಮೂಹವನ್ನು ಕಾಪಾಡಿದವನೂ, ರಾಮನ ಅವತಾರವನ್ನು ತಾಳಿ ರಾವಣಾಸುರನನ್ನು ಧ್ವಂಸ ಮಾಡಿದವನೂ, ಶ್ರವಣಗಳಿಗೆ ಸದಾ ಅಮೃತವನ್ನೆ ಸುರಿಸುವ ಮಂಗಳಗಳಿಗೆ ಕಾರಣನೂ ಆಗಿರುವ ಗದುಗಿನ ವೀರನಾರಾಯಣನು ಜನರನ್ನು ಕಾಪಾಡಲಿ ಎಂದಿರುವನು. ಈ ಕಾವ್ಯದ ಎಂಟನೆಯ ಪದ್ಯದಲ್ಲೂ ವೀರನಾರಾಯಣನ ಸ್ತುತಿ ಮಾಡಿರುವನು

ಶ್ರೀಮದಮರಾದೀಶ ನತಪದ
ತಾಮರಸ ಘನವಿಪುಳ ನಿರ್ಮಲ
ರಾಮನನುಪಮ ಮಹಿಮ ಸನ್ಮುನಿ ವಿನುತ ಜಗಭರಿತ
ಶ್ರೀ ಮಧುರ್ಜಿತ ಧಾಮ ಸುದಯಾ
ನಾಮನಾಹವ ಭೀಮ ರಘುಕುಲ
ರಾಮ ರಕ್ಷಿಸುವೊಲಿದು ವೀರನಾರಾಯಣ

**ಕರ್ಣಾಟ ಭಾರತ ಕಥಾಮಂಜರಿ**(೧-೮)

ಕುಮಾರವ್ಯಾಸನ ಸಮಕಾಲೀನ ಇನ್ನೋರ್ವ ಪ್ರಮುಖ ಕವಿ ಚಾಮರಸನು ತನ್ನ ಪ್ರಭುಲಿಂಗಲೀಲೆಯಲ್ಲಿ ಮೊದಲು ಅಲ್ಲಮ ಪ್ರಭುದೇವರನ್ನು ಸ್ಮರಿಸಿ ಅಲ್ಲಮನು ಲಿಂಗ ಸ್ವರೂಪಿಯಾದವನು ಎನ್ನುತ್ತಾನೆ.

**ಸೂಚನೆ:** ಶ್ರೀಮದಮೃತಾಂಶು ಫಮೌಲಿ
ಪ್ರೇಮಿಗಳಿಗಾನಂದ ನಿತ್ಯವ
ನೇಮಿಸಿದನೆಮ್ಮಲ್ಲಮಪ್ರಭು ಗುರುಗುಹೇಶ್ವರನಾ

ಶೋಭಾಯುಕ್ತವಾದ ಅಮೃತ ಕಿರಣಗಳನ್ನುಳ್ಳ ಚಂದ್ರನನ್ನು ತಲೆಯಲ್ಲಿ ಧರಿಸಿ ಶಿವನ ಸದ್ಭಕ್ತರಿಗೆ ಆನಂದವನ್ನು ತರುವ ಹುಟ್ಟು ಮತ್ತು ಸಾವುಗಳಲ್ಲದ ಪರಮ ಪದವಿಯನ್ನು ಪಡೆದ ಗುರುಗುಹೇಶ್ವರನೆಂಬ ವಚನ ಅಂಕಿತ ಉಳ್ಳ ನಿಷ್ಕಾಳಂಕಲಿಂಗ ಸ್ವರೂಪನಾದ ಅಲ್ಲಮ ಪ್ರಭುವು ಅನುಗ್ರಹಿಸಿದನು.

ಕನ್ನಡ ಜೈಮಿನಿ ಭಾರತದ ಮಂಗಳ ಶ್ಲೋಕ ಶ್ರೀ ವಿಷ್ಣುವಿನ ಪರವಾಗಿದೆ. ಪ್ರತಿಯೊಂದು ಸಂಧಿಯ ಕೊನೆಯಲ್ಲಿಯೂ ಕವಿ ತನ್ನ ಇಷ್ಟದೇವತೆಯಾದ ಲಕ್ಷ್ಮೀ ರಮಣನನ್ನು ಸ್ತುತಿಸುತ್ತಾನೆ. ಈತನು ವೈಷ್ಣವ ಪಂಥದ ಕವಿಯಾಗಿದ್ದಾನೆ. ಆದರೆ "ಕಾವ್ಯದ ಮುಂದಿನ ಪದ್ಯಗಳಲ್ಲಿ ಶಿವಸ್ತುತಿ, ಗಣೇಶ ಸ್ತುತಿ, ಶಿವ ಪಾರ್ವತಿಯರ ಮಹಿಮೆಗಳಿರುವುದರಿಂದ ಇವನು ಅದ್ವೈತ ಸಿದ್ಧಾಂತ ಅಂಗೀಕರಿಸಿದ"[೨]ನೆಂದು ತಿಳಿಯಬಹುದು.

**೧. ಲಕ್ಷ್ಮೀನಾರಾಯಣ ಸ್ತುತಿ**

ಶ್ರೀ ವಧುವಿನಂಬಕ ಚಕೋರಕಂ ಪೊರೆಯೆ ಭ
ಕ್ತಾವಳಿಯ ಹೃತ್ಕುಮುದ ಕೋರಕಂ ಬಿರಿಯೆ ಜಗ
ತೀವಲಯದಮಲ ಸೌಭಾಗ್ಯ ರತ್ನಾಕರ ಪೆರ್ಚಿನಿಂ ಮೇರೆವರಿಯೆ
ಅವನಂ ಸರಸಕರುಣಾಮೃತದ ಕಲೆಗಳಿಂ
ಲೇವಿದೆಳವಗೆಯ ಬೆಳದಿಂಗಳಂ ಪಸರಿಸುವ
ದೇವಪುರ ಲಕ್ಷ್ಮೀ ರಮಣನಾಸ್ಯ ಚಂದ್ರನಾನಂದಮಂ ನಮಗೀಯಲಿ

**ಜೈಮಿನಿಭಾರತ**(೧–೧)

ಕವಿ ಲಕ್ಷ್ಮೀಶನು ಈ ಪದ್ಯದಲ್ಲಿ ತನ್ನ ಆರಾಧ್ಯದೈವವಾದ ಲಕ್ಷ್ಮೀ ನಾರಾಯಣನನ್ನು (ದೇವಪುರದ ಲಕ್ಷ್ಮೀನಾರಾಯಣ) ಬೆಳದಿಂಗಳಿಗೆ ಹೋಲಿಸಿರುವನು.

'ಕವಿ ಷಡಕ್ಷರ'ದೇವನು ಸಾಮಾನ್ಯವಾಗಿ ತನ್ನ ಎಲ್ಲ ಕಾವ್ಯಗಳಲ್ಲಿಯೂ ಶಿವ, ಪಾರ್ವತಿ, ಗಣಪತಿ, ಷಣ್ಮುಖ, ವೀರಭದ್ರ ಮುಂತಾದ ದೇವತೆಗಳನ್ನು ಭಕ್ತಿಯಿಂದ ವಂದಿಸಿರುವನು. ಈತನೊಬ್ಬ ನಿಷ್ಠಾವಂತ ವೀರಶೈವನೆಂಬುದರಲ್ಲಿ ಸಂಶಯವಿಲ್ಲ. ತನ್ನ ರಾಜಶೇಖರ ವಿಳಾಸ, ಶಬರ ಶಂಕರ ವಿಳಾಸ ಬಸವರರಾಜ ವಿಜಯ ಇತ್ಯಾದಿ ಕಾವ್ಯಗಳ ಪ್ರತಿಯೊಂದು ಅಶ್ವಾಪದ ಆರಂಭದಲ್ಲಿ ಶಿವಲಿಂಗವನ್ನು ಕುರಿತು ಸ್ತುತಿಸಿರುವನು. ಪ್ರಥಮ ಪದ್ಯದಲ್ಲಿ ಶಿವನನ್ನು ನಂದಿಕೇಶಂ ಮಹೇಶಂ ಎಂದು ಸಂಬೋಧಿಸಿ ನಂತರ ಶಿವಲಿಂಗವೆಂದು ಉಲ್ಲೇಖಿಸುತ್ತಾನೆ.

ಕವಿ ಷಡಕ್ಷರನು ತನ್ನ ರಾಜಶೇಖರ ವಿಳಾಸ, ಬಸವರಾಜ ವಿಜಯಗಳ ಆಶ್ವಾಸಾಂತದಲ್ಲಿ ತಪ್ಪದೆ ಪಾರ್ವತಿಯನ್ನು ಸ್ತುತಿಸುತ್ತಾನೆ ಹಾಗೂ ಆಶ್ವಾಸದ ಆದಿಯಲ್ಲಿ ಶಕ್ತಿ ಸಮೇತನಾದ ಶಿವನ ಸಾಕಾರ ವರ್ಣನೆ ಬಹು ಸುಂದರವಾಗಿ ಮೂಡಿ ಬಂದಿದೆ. ಶಿವಶಕ್ತಿಯರು ಒಂದೇ ಎಂಬ ಅರ್ಧನಾರೀಶ್ವರ ಕಲ್ಪನೆಯಿದೆ. ಶಿವಲಿಂಗವೇ ಇಷ್ಟದೈವವಾಗಿದೆ.

**ಶಿವಸ್ತುತಿ**

ಶ್ರೀ ಶೈಲಾದಿ ಪ್ರಸಿದ್ಧಂ ಸುರುಚಿರ ವಿಜಯಸ್ತುತ್ಯನುದ್ರಿಕ್ತ ಸತ್ವಾ
ವೇಶಂ ಕಲ್ಯಾಣಭ್ಯಭೃತ್ತದನರ್ಥದ ಮಿತ್ರಂ ಧರಾಧಾಂಧರ್ಮಾಂ
ವೈಶದ್ಯ ದ್ಯೋತಿ ಚಂದ್ರೋಪಲಸಿತಭಸಿತಾನಲತಕಾಂತೋತ್ತಮಂಗಂ
ಶ್ರೀ ಶೈವ ಶ್ರೀಯಮಂ ಮಾಳ್ಕೆಮಗನವರತಂ ನಂದಿಕೇಶಂ ಮಹೇಶಂ

**ರಾಜಶೇಖರ ವಿಳಾಸ**(೧-೧)

ಈ ಇಷ್ಟದೇವತಾ ನಾಂದಿಯಲ್ಲಿ ಕವಿ ಷಡಕ್ಷರನು ನಂದಿ ಕೇಶನಾದ ಶಿವನು ನಮಗೆ ಇಷ್ಟಸಿದ್ದಿಯನುಂಟು ಮಾಡಲೆಂದು ಶ್ರೀಶೈಲದ ಒಡೆಯನಾದ ಶಿವನನ್ನು ಪ್ರಾರ್ಥಿಸುತ್ತಾನೆ. ಎರಡನೇ ಪದ್ಯವು ಶಿವಸ್ತುತಿಯ ಪದ್ಯವಾಗಿದೆ.

೨. **ಶಿವಸ್ತುತಿ**

ನಿಜನೇತ್ರಂ ಲೋಕನೇತ್ರಂ ನಿಜಭರಣಮಿಳಾಚಕ್ರಬಾರಾವಹಂಮೇಣ್
ನಿಜವಾಹಂ ಧರ್ಮಗೇಹಂ ನಿಜದನು ದನುಜಾರಾತಿ ಜಾತಾದಿವಾಸಂ
ನಿಜರೂಪಂ ವಿಶ್ವರೂಪಂ ನಿಜರಮಣಿ ಜಗನ್ಮಂಡಳಿ ಮಾತೆನಿಚ್ಚಂ
ನಿಜಮಾದಂ ಸುಪ್ರಮೋದಂ ಕುಡುಗೆಮಗತುಳ ಶ್ರೇಯಮಂ ಶೈಲಜೇಶಂ

**ರಾಜಶೇಖರ ವಿಳಾಸ**(೧-೧)

ಈ ಪದ್ಯದಲ್ಲೂ ಶೈಲಜೇಶನಾದ ಶಿವನು ನಮಗೆ ಶ್ರೇಷ್ಠವಾದ ಶ್ರೇಯಸ್ಸನ್ನುಂಟು ಮಾಡಲಿ ಎಂಬ ಪ್ರಾರ್ಥನೆಯಿದೆ.

**೩. ಪಾರ್ವತಿ ಸ್ತುತಿ**

ಕ್ಷಿತಿಯಂ ಪಾಲಿಪಗಣ್ಯ ಪುಣ್ಯಮತಿಯಂ ಪ್ರಖ್ಯಾತ ಸೌಂದರ್ಯ ಸಂ
ಗತೆಯಂ ಶೈವಮತೈಕ ಕಲ್ಪಲತೆಯಂ ಶ್ರೀವಾಗ್ವಧೂ ಸಂತತ
ಸ್ತುತೆಯಂ ಚಂದ್ರಧರಾರ್ಧ ದೇಹಯುತೆಯಂ ಬಾಲಬ್ಜಿನೀ ಕಾಂತಸ
ದ್ಯುತಿಯಂ ಪಾರ್ವತಿಯಂ ಕೃಪಾವರಿಯನಾಗಳ್ ಬಣ್ಣಿಪೇ ಭಕ್ತಿಯಿಂ

**ರಾಜಶೇಖರ ವಿಳಾಸ**(೧-೩)

ಲೆಕ್ಕವಿಲ್ಲದಷ್ಟು ಪುಣ್ಯ ಮಾಡಿದ ಪ್ರಖ್ಯಾತ ಸೌಂದರ್ಯವತಿಯಾದ ಶೈವಮತದ ಕಲ್ಪಲತೆಯಂತಿರುವ ಸರಸ್ವತಿಯನ್ನು ಸತತವಾಗಿ ಸ್ತುತಿಸುವ ವಿಶ್ವರೂಪಿಣಿಯೂ ನಿಜರಮಣಿಯೂ ಚಂದ್ರಧರನಾದ ಶಿವನ ಅರ್ಧದೇಹವನ್ನು ಪಡೆದವಳು ಆದ ಪಾರ್ವತಿಯನ್ನು ಭಕ್ತಿಯಿಂದ ಬಣ್ಣಿಸುವೆನು.

ಕಲ್ಪಲತೆ:ಕಲ್ಪಿಸಿದ ವಸ್ತುವನ್ನು ಕೊಡುವ ಬಳ್ಳಿ ಎಂದು ಅರ್ಥ
ವಾಗುತ್ತದೆ ಶಿವನ ಅರ್ಧಾಂಗಿಯಾದ ಪಾರ್ವತಿಯನ್ನು
ಕವಿ ಷಡಕ್ಷರಿಯು ಕಲ್ಪಲತೆಯಿಂದು ಕರೆಯುವುದಷ್ಟೇ ಅಲ್ಲ
ಪಾರ್ವತಿಯು ಶೈವಮತದ ಕಲ್ಪಲತೆ ಎಂದಿರುವನು

ಷಡಕ್ಷರದೇವನು ತನ್ನ ಇನ್ನೊಂದು ಕೃತಿಯಾದ ಶಬರ ಶಂಕರ ವಿಳಾಸದಲ್ಲೂ ಪ್ರಾರಂಭದಲ್ಲಿ ಶಿವಸ್ತುತಿಯನ್ನು ಮಾಡಿರುವನು.

**೧. ಶಿವಸ್ತುತಿ**

ಶ್ರೀ ಮತ್ಕಲ್ಯಾಣರೂಪಂ ಶರಭವನಜೋತ್ಸಂಗನ ಭ್ರಾಂತಯೋಗಾ
ರಾಮಾಂಚತ್ಪಾದಪದ್ಮಂ ಸುರುಚಿಗಣಪ ವಿಭ್ರಾಜಿತಂ ಸಾರಸತ್ವ
ವ್ಯಾಮಿಶ್ರಾಹೀನ ಚಂಚತ್ಕಟನಧಿಕ ದಿವ್ಯಾಗಮಂ ಸ್ವಸ್ಥಿಲೋಕ
ಸ್ತೋಮಮಂ ಬ್ರಾಜಿಷ್ಣುವೆಮ್ಮಂ ಪೊರೆಗೆ ವಿತತಬಾಸ್ವತ್ಪ್ರಕಾಶಂ ಗಿರೀಶಂ

**ಶಭರ ಶಂಕರ ವಿಳಾಸ**(೧-೧)

ಈ ಪದ್ಯದಲ್ಲಿ ಕಲ್ಯಾಣ ರೂಪವನ್ನು ಹೊಂದಿದ ಶಿವನನ್ನು ಸ್ಮರಿಸಿ ಮುಂದಿನ ಎರಡು ಪದ್ಯಗಳಲ್ಲಿ ಪಾರ್ವತಿಯನ್ನು ಸ್ಮರಿಸುತ್ತಾನೆ.

**೨. ಪಾರ್ವತಿ ಸ್ತುತಿ**

ಸುರ ರಮಣೀ ಕದಂಬಕಬರೀ ಭರಕಾಂತಿಕಳಿಂದ ಜಾಂಬುವಿ
ಸ್ಫುರಿತ ಪದಾಂಬುಜಾತೆ ಕರಿರಾಣ್ಮುಖ, ಷಣ್ಮುಖಮಾತೆ ಸದ್ಗುಣ
ಭರಣೆ ಕೃಪಾಸುಧಾರಸ ತರಂಗಿಣಿ ಸಾರಕಳಾದುರೀಣೆ ಶಾಂ
ಕರಿ ಪೊರೆಯೆನ್ನನನ್ವಿತ ಶುಭೋದಯೆ ಶೈಲಜೆ ಸರ್ವಮಂಗಳೆ

**ಶಬರ ಶಂಕರ ವಿಳಾಸ**(೧-೨)

ಕವಿ ಷಡಕ್ಷರಿಯು ಈ ಪದ್ಯದಲ್ಲಿ ಶಿವನ ಸತಿಯಾದ ಪಾರ್ವತಿ ದೇವಿಯನ್ನು ಸ್ತುತಿಸುತ್ತ ಸುರರಮಣಿಯೂ, ಕಮಲಗಳಂತೆ ಪಾದಗಳನ್ನುಳ್ಳವಳೂ, ಗಣಪತಿ ಮತ್ತು ಷಣ್ಮುಖದ ತಾಯಿಯೂ, ಸದ್ಗುಣಗಳನ್ನೆ ಆಭರಣಗಳನ್ನಾಗಿ ಮಾಡಿಕೊಂಡವಳೂ, ಕೃಪಾಸುಧೆಯನ್ನು ಹರಿಸುವವಳೂ, ಸಕಲಕಲಾ ವಲ್ಲಭೆಯೂ, ಆದ ಪಾರ್ವತಿಯು ನಮ್ಮನ್ನು ಅನವರತ ರಕ್ಷಿಸಲಿ ಎಂದಿರುವನು.

**೩. ಪಾರ್ವತಿ ಸ್ತುತಿ**

ವಿಳಸಿತ ಕೃಷ್ಣವೇಣಿ ಸುಸರಸ್ವತಿ ಸನ್ನುತ ತುಂಗಭದ್ರೆಮಂ
ಜುಳ ಕಪಿಲಾಂಗಿ ಭೀಮರತಿ ಸಂಗತ ಸೈಧವಿಧೌತಪಾಪಮಂ
ಗಳ ರುಚಿಪೂರ್ಣ ಪುಷ್ಕರಣಿ ಗೋಮತಿಯೆಂದೆನಿಸಿರ್ದನಿತನಿ
ರ್ಮಳೆ ಸಲೆ ಮಾಳ್ಕೆ ಹೇಮಾವತಿ ಸದ್ವಿಮಳತ್ವಮನೆಮ್ಮೊ

**ಶಬರ ಶಂಕರ ವಿಳಾಸ**(೧-೩)

ವಿಶಾಲವಾದ ಕಪ್ಪಾದ ಉದ್ದ ಕಣದಲನ್ನು ಹೊಂದಿದವಳು ತುಂಗಭದ್ರೆ, ಕಪಿಲೆ, ಭೀಮರತಿ ಇತ್ಯಾದಿ ನದಿಗಳಂತೆ ಪಾಪಗಳನ್ನು ತೊಳೆಯಬಲ್ಲವಳು ನಿತ್ಯ ನಿರ್ಮಲ ಮೂರ್ತಿಯಾದ ಪಾರ್ವತಿಯು ವಿಮಳವಾದ ಭಾವವನ್ನುಂಟು ಮಾಡಲೆಂದಿರುವನು. ಷಡಕ್ಷರ ಕವಿಯ ಮತ್ತೊಂದು ಕೃತಿ ಬಸವರಾಜ ವಿಜಯಂದಲ್ಲಿಯೂ ಶಿವಸ್ತುತಿಯನ್ನು ಮಾಡಿ ನಂತರ ಇತರ ದೇವತೆಗಳನ್ನು ಸ್ಮರಿಸುತ್ತಾನೆ.

**ಶಿವಸ್ತುತಿ**

ಶ್ರೀಮತ್ಕಲ್ಯಾಣ ಭೂಭೃನ್ನುತ ಸುಕರಪದಂ ದಿವ್ಯಗಂಗಾಂಬಿಕಾಸ
ತ್ಪ್ರೇಮವಾಸಂ ಗಣೇಂದ್ರಾನ್ವಿತನುರುಮಹಿಮಾಧಾರನಶ್ರಾಂತಸತ್ವಾ
ರಾಮಂ ಭೂತಿ ಪ್ರಯುಕ್ತಂ ಪ್ರಣವರುಚಿ ಪರಮಾನಂದ ಧರ್ಮಂಸ್ವಲೀಲೋ
ದ್ಧಾಮಂ ರಕ್ಷಿಪ್ಪುದೆಮ್ಮಂ ಬಿಡದನವರತಂ ನಂದಿಕೇಶ ಮಹೇಶಂ

**ಬಸವರಾಜ ವಿಜಯ**(೧-೧)

ಕಲ್ಯಾಣ ಕಾರಕನಾದ, ಗಂಗೆಯ ಪ್ರೇಮ ನಿವಾಸಿಯಾದ ಗಣಾದಿಪತಿಯಾದ ಶಾಂತ ಸತ್ವಪೂರ್ಣನಾದ ಪರಮಾನಂದ ಮೂರ್ತಿಯನ್ನು ಉದ್ದಾಮ ಪ್ರಣವ ರುಚಿಯಾದ ಶಿವನು ನಮ್ಮನ್ನುಬಿಡದೆ ರಕ್ಷಿಸಲೆಂಬ ಪ್ರಾರ್ಥನೆ ಈ ಪದ್ಯದಲ್ಲಿದೆ. ಎರಡನೇ ಪದ್ಯವೂ ಕೂಡ ಶಿವಸ್ತುತಿಯ ಪದ್ಯವಾಗಿದೆ.

**ಶಿವಸ್ತುತಿ**

ಗಂಗಾರಂಗತ್ತರಂಗಪ್ರಭವಕಣಗಣ ಸ್ವಾರತಾರಾಪರೀತ
ಸ್ವಾಂಗಾರ್ಥೇಯದ್ಯುತಿಪ್ರೋನ್ಮಿಳಿತ ನಿಜಜಟಾಜೂಟ ವಿಬ್ರಾಜಮಾನಂ
ಶೃಂಗಾರಾಸಾರಗೌರೀಕಬಳಿತ ಕಲಿತಾರ್ಧಂಗನುದ್ಯದ್ಧಯಾರ್ದ್ರಾ
ಪಾಂಗ ಮಾಂಗಲ್ಯ ಸಾಕಲ್ಯ ಮನೆಮಗೊಲವಿಂ ಮಾಳ್ಕೆ ನಿಚ್ಚಂ ತ್ರಿಣೇತ್ರಂ

**ಬಸವರಾಜ ವಿಜಯ**(೧-೨)

ಗಂಗೆಯ ತರಂಗ ಕಣಗಣಗಳಿಂದ ತನ್ನ ತಾಪವನ್ನು ಪರಿಹರಿಸಿಕೊಳ್ಳುವ ಜಟಾಜೂಟ ಧಾರಿಯಾದ ಗೌರಿಯ ಅರ್ಧಾಂಗವನ್ನು ಪಡೆದಿರುವ ಸಕಲ ಮಂಗಲವನ್ನುಂಟು ಮಾಡುವ ತ್ರಿನೇತ್ರಧಾರಿಯಾದ ಶಿವನು ನಮ್ಮನ್ನು ಒಲವಿಂದ ರಕ್ಷಿಸಲಿ ಎಂಬ ಪ್ರಾರ್ಥನೆಯಿದೆ. ಮೂರನೇ ಪದ್ಯವೂ ಕೂಡ ಶಿವಸ್ತುತಿಯ ಪದ್ಯವಾಗಿದೆ.

**ಶಿವಸ್ತುತಿ**

ವ್ಯಾನಮ್ರಾಮರ ಕಾಮಿನಿಜನಗಳದ್ಧಮ್ಮಿಲ್ಲಪುಷ್ಪಾಸವಂ
ತಾನೊಕ್ಕೊಪಿರೆ ಪಾದಪೀಠದೊಳದಂ ತಳ್ತುಂಬ ಭೃಂಗಾಳಿಬೆ
ಳ್ಪಾನುತ್ತುಂ ನಖರೋಚಿಯಂ ತೊಳಪವೋಲ್ಗೈದಾನವಾತದೋ
ಷಾನೀಕಾಪಯಪ್ರದರ್ಶಿಯೇನಿಪ್ಪೀಶಾನಿಗಾಂ ವಂದಿಪೆ

**ಬಸವರಾಜ ವಿಜುಯ**(೧-೩)

**ಪಾರ್ವತಿ ಸ್ತುತಿ**

ಶುಂಭ ನಿಶುಂಭ ದರ್ಪಹರೆ ಶಂಬರವೈರಿ ವಧೂಮನೋಗದ
ಸ್ತಂಬಿನಿ ಕುಂಬಿನೀಧರ ಕುಮಾರಿ ಕುಮಾರ ಗಜಾಸ್ಯಮಾತೆ ನಿ
ರ್ದಂಭತಪಃ ಪ್ರಲಬ್ದ ಪಶುಪಾರ್ಧಕಳೇವರೆ ಲೋಕಧಾತ್ರಿ
ಶ್ವಂಭರ ಜಂಧಭಿತ್ತ್ರಣತೆ ಪಾರ್ವತಿ ಪಾಲಿಪುದೆನ್ನಂಬಿಕೆ

–ಬಸವರಾಜ ವಿಜಯ(೧–೪)

ಶುಂಭ ನಿಶುಂಭರೆಂಬ ರಕ್ಕಸರನ್ನು ದರ್ಪದಿಂದ ಸಂಹಾರ ಮಾಡಿದವಳೆ ಷಣ್ಮುಖ ಮತ್ತು ಗಣಪತಿಯ ತಾಯಿಯೇ, ಶಿವನ ಅರ್ಧಾಂಗಿಯೇ ಲೋಕವನ್ನು ರಕ್ಷಿಸುವ ಪಾರ್ವತಿಯೇ ಪಾಲಿಸುವುದು ಎನ್ನನ್ನು ತಾಯಿಯೇ ಎಂದು ಪಾರ್ವತಿಯನ್ನು ಸ್ತುತಿಸುವನು.

**ಗಣೇಶ ಸ್ತುತಿ**

ಶಿವನಡಿಗಳ್ಗೆ ಮುಂಬರಿದು ಕುಂಬಿಡುವಬ್ಜಭವಾದಿ ದೇವರೊ
ಪ್ಪುವ ಕನಕಸ್ಪುರನ್ಮುಕುಟ ಘಟ್ಟನದಿಂ ಸುರಿದೊಟ್ಟಿಲಾದರೇ
ಣುವನಿರದೊಟ್ಟಿಕೊಂಡು ಕನಕಾಚಳದಂತತಿರಮ್ಯಮಾದ ದಾ
ನವಿಸರ ನಿರ್ಝರಂ ಗಜಮುಖಂ ಮಿಗೆ ಮಾಳ್ಕೆಮುಗಿಷ್ಟಸಿದ್ದಿಯಂ

**ಬಸವರಾಜ ವಿಜಯಂ(೧–೫)**

ಶಿವನ ಅಡಿಗಳಿಗೆ ನಮಸ್ಕರಿಸುವ ಬ್ರಹ್ಮಾದಿ ದೇವತೆಗಳಿಗೆ ಒಪ್ಪುವ ಬಂಗಾರದ ಕಿರೀಟ ಧರಿಸಿಕೊಂಡು ಕನಕಾಚಳದಂತೆ ರಮ್ಯವಾದ ದಾನಶ್ರೇಷ್ಠನಾದ ಗಜಮುಖನು ನಮಗೆ ಇಷ್ಟಸಿದ್ದಿಯನ್ನುಂಟು ಮಾಡಲೆಂದು ಪ್ರಾರ್ಥಿಸಿರುವನು.

**ಷಣ್ಮುಖನ ಸ್ತುತಿ**

ಹರತೇಜಃ ಪುಂಜ ಪುಂಜೀಕೃತತನು ಸತಮಸ್ತಾರಕಾರಾತಿ ಧಾತ್ರೀ
ಧರ ಪುತ್ರೀ ಪುತ್ರನ ತ್ರಿಪ್ರಭವ ರುಚಿಯಶಸ್ತ್ರಾರಿ ವಿಸ್ತಾರ ಶಕ್ತಿ
ಸ್ಫುರಿತಂ ಕ್ರೌಂಚಚಲಚ್ಛೇದಕನಖಿಲ ಕಲಾಶಾಲಿ ಲೀಲಾಲಸತ್ಕೇ
ಕಿ ರಥಂ ಮತ್ಕಾವ್ಯಕೊಳ್ಪಂ ಕರುಣಿಸುಗೆ ಮಹೋದಾರಸಾರ ಕುಮಾರಂ

**ಬಸವರಾಜ ವಿಜಯ(೧–೬)**

ಹರನ ತೇಜಪುಂಜವಾದ ತನುವನ್ನು ಪಡೆದವನೆ, ಶೈಲಜೆಯ ಪ್ರಿಯ ಸುತನೆ, ಸಕಲ ಕಲಾ ಪ್ರವೀಣನೇ, ನನ್ನ ಕಾವ್ಯಕ್ಕೆ ಕರುಣಿಸು ಕುಮಾರನೆ ಎಂದು ಪ್ರಾರ್ಥಿಸುತ್ತಾನೆ. ಷಡಕ್ಷರ ದೇವನ ರಾಜಶೇಖರ ವಿಳಾಸ, ಶಬರಶಂಕರ ವಿಳಾಸ ಹಾಗೂ ಬಸವರಾಜ ವಿಜಯಂ ಅಥವಾ ವೃಷಬೇಂದ್ರ ವಿಜಯದಲ್ಲಿ ಸಾಮಾನ್ಯವಾಗಿ ಶಿವನ ಹಾಗೂ ಅವನ ಕುಟುಂಬದ ಸದಸ್ಯರೆಲ್ಲರನ್ನು ಸ್ತುತಿಸಿರುವ ನಾಂದಿಪದ್ಯಗಳನ್ನು ಕಾಣುತ್ತೇವೆ.

ವಿರೂಪಾಕ್ಷ ಪಂಡಿತನು ತನ್ನ ಬಸವಪುರಾಣ ಪುರಾಣದಲ್ಲಿ ಇಷ್ಟದೇವತಾ ಪದ್ಯಗಳಲ್ಲಿ ತನ್ನ ಆರಾಧ್ಯ ದೈವವಾದ ಶ್ರೀಪಂಪಾ ವಿರೂಪಾಕ್ಷನನ್ನು ಆರಂಭಿಕ ಆರು ಪದ್ಯಗಳಲ್ಲಿ ಸ್ತುತಿಸಿ, ನಂತರ ಅನುಕ್ರಮವಾಗಿ ವೃಷಭ, ಭೃಂಗೀಶ್ವರ ವೀರ ಭದ್ರ ಕುಮಾರ ಷಣ್ಮುಖರನ್ನು ಸ್ತುತಿಸುತ್ತಾನೆ.

೧. **ವಿರೂಪಾಕ್ಷ ಸ್ತುತಿ**

ಶ್ರೀ ಗಿರಿಜೆಯಾಸ್ಯ ಕಮಳದ ಸೊಂಪು ಪೊಳೆಯೆ ಪಿರಿ
ದಾಗಿ ಕುಚಚಕ್ರಯಮಳದ ಪೆಂಪು ಬಳೆಯೆ ತಲೆ
ವಾಗಿ ಕಣ್ಕೈದಿಲಲರಿಕೆಯಿಂಪು ಕಳೆಯೆ ನಾಸಾನೀಲನ ಕಂಪುಪುಳಿಯೆ
ಬೀಗೆ ಕುಂತಳತಮಂ ಸಾಗೆ ಚಂದುಟಿಗೆಂಪು
ಮೇಗೆ ಸೌಖ್ಯೋದಯದ ಬೆಳಗೆ ಪಸರಿಸಿ ನಿತ್ಯ
ನಾಗೆಸೆವ ಪಂಪಾವಿರೂಪಾಕ್ಷ ಸೂರ್ಯನಾನಂದಮಂ ನಮಗೀಯಲಿ

**ಚನ್ನಬಸವ ಪುರಾಣ**(೧–೨)

೨. **ವಿರೂಪಾಕ್ಷ ಸ್ತುತಿ**

ಶಿವಶಿವಗಣಾನಂದ ನಂದನಂದನ ಕಮಲ
ಭವನುತ ಮಹಾಮಹಿಮ ಹಿಮಕಿರಣ ಕಂಜಬಾಂ
ಧವ ಕೋಟಿ ತೇಜೋವಿರಾಜಿತ ಕಳೇವರ ವರಾಭರಣ ಚಕ್ಷುಶ್ರವ
ಶ್ರವಣ ಮಂಗಳನಾಮ ನಾಮರೂಪಕ್ರಿಯಾ
ದಿವಿಕಲ್ಪರಹಿತ ಹಿತ ಮಿತ್ರ ದನರಾಜರಾ
ಜವಿ ಪಕ್ಷನೇತ್ರ ಸುಕುಮಾರ ಹರಹರ ವಿರೂಪಾಕ್ಷ ರಕ್ಷಿಸು ನತರನು

**ಚ.ಬ.ಪುರಾಣ**(೧–೩)

## ವಿರೂಪಾಕ್ಷ ಸ್ತುತಿ

ವರಜೂಟ ದೃತರಾಜ ರಾಜರಾಜಪ್ರಸಖ
ನಿರುಪಮಿತ ನಿಷ್ಕಾಮಕಾಮ ಕಾಮಧ್ವಂಸಿ
ಹರ ವಿಜಿತಖಿಳಭೀಮ ಭೀಮ ಭೀಮಾನು ಸಂಜಾತ ದಿವ್ಯಾಸ್ತ್ರ
ಶರಣನುತ ಸುರಕಾಂತಶಾಂತ ಕಾಂತರ್ದಾಂಗ
ಪುರವೈರಿಯ ಕಾಲಕಾಲ ಕಾಲಗ್ರೀವ
ನಿರುಪಮ ಸರೋಜಾತಜಾತ ಜಾತಧ್ವರಧ್ವಂಸಿ ಜಯಪಂಪಾದೀಪ

ಚ.ಬ.ಪುರಾಣ(೧–೪)

## ವಿರೂಪಾಕ್ಷ ಸ್ತುತಿ

ಗೋಪಕ್ಷಹರ ಗೋಪ ಗೋಪಾವನತಚರಣ
ಗೋಪಕಂದರಗೋಪ ಗೋಭೂಷ ಗತದೋಷ
ಗೋಪವಾಹನ ಗೋಪಚಾಪ ಗೋಪವಿಗೋಪಗೋಪಪತಿ ಗೋಪವಾಸ
ಗೋಪರಮವಸ್ತ್ರ ಗೋಸ್ತ್ರ ಗೋಪಾತ್ಮಜಾ
ಲಾಹರುಷಿತ ಗೋಮುಖಾದ್ಯಖಿಳ ಲೋಕೇಶ
ಗೋಪಾಟವಂಗಳು ಪಾಲಿಪುದು ಪಂಪಾವಿರೂಪಾಕ್ಷ ಸುಜನರಕ್ಷ

**ಚ.ಬ.ಪುರಾಣ(೧–೫)**

## ವಿರೂಪಾಕ್ಷ ಸ್ತುತಿ

ಭೀಮ ಭೀಮಾಘಹರ ಜಿತಕಾಲ ಕಾಲಗಳ
ಸೋಮ ಸೋಮ ವಿಭೂಷ ಸುರಪಾಲಪಾಲಹೃತ
ಕಾಮಕಾಮಪ್ರದ ಸದಾರಾಜರಾಜನುತ ಗತತಾಪ ತಾಪಸನತ
ರಾಮ ರಾಮಾರ್ಧಾಂಗ ಗೋಕರ್ಣ ಕರ್ಣ ಗಿರಿ
ಧಾಮ ಧಾಮ ನಿಧಾನ ಪಂಪಾ ವಿರೂಪಾಕ್ಷ
ಪ್ರೇಮದಿಂ ಭಕ್ತರಂ ಸಲಹು ಸನ್ನುತಗುಣಸ್ತೋಮ ನಿಸ್ಸೀಮ ಮಹಿಮ

**(ಚ.ಬ.ಪುರಾಣ(೧–೬)**

ಎಲ್ಲ ಸ್ತುತಿಗಳಲ್ಲೂ ಕವಿ ವಿರೂಪಾಕ್ಷ ಪಂಡಿತನು ಪಂಪಾಪತಿ ವಿರೂಪಾಕ್ಷನನ್ನು ಸ್ತುತಿಸುವುದರ ಮೂಲಕ ಅವನ ಮಹಿಮೆಯನ್ನು ಸಾರಿದ್ದಾನೆ. ಸುರರ ಒಡೆಯನಾದ ಪ್ರಳಯಕಾಲದ ಶಿವನಂತೆ ಕಾಂತೆಗೆ ಅರ್ಧಾಂಗವನ್ನು ಕೊಟ್ಟ ಶಿವನು, ನಂದಿವಾಹನನಾಥ ಶಿವನು ಸುಜನರನ್ನು ರಕ್ಷಿಸಲೆಂದು ಪ್ರಾರ್ಥಿಸುತ್ತಾನೆ.

ಕನ್ನಡ ಸಾಹಿತ್ಯದಲ್ಲಿ ಶರಣ ಸಾಹಿತ್ಯದ ತರುವಾಯ ಮತ್ತೊಂದು ಸುಗಂಧ ಬೀರುವ ಸಾಹಿತ್ಯವೊಂದು ಜನಯಿಸಿತು. ಅದೇ ದಾಸ ಸಾಹಿತ್ಯ ಅದನ್ನು ಕೀರ್ತನ ಸಾಹಿತ್ಯವೆಂದು ಕರೆಯುತ್ತಾರೆ. ದಾಸರ ಸ್ತುತಿಗಳು ಕನ್ನಡ ಸಾಹಿತ್ಯದಲ್ಲಿ ಬಹುವಾಗಿ ಕಾಣಿಸಿಕೊಂಡಿದೆ. ದಾಸರು ಕೀರ್ತನೆಗಳ ಜೊತಗೆ ಶ್ರೇಷ್ಠ ಕೃತಿಗಳನ್ನು ಬರೆದಿರುವರು. ಅವರಲ್ಲಿ ಕನಕದಾಸರು ಪ್ರಮುಖರು. ವ್ಯಾಸರಾಯರು, ಪುರಂದರ ದಾಸರು, ಕನಕದಾಸರು, ಗೋಪಾಲದಾಸರು, ನರಹರಿತೀರ್ಥರು, ಮಹಿಪತಿ ದಾಸರು ವಾದಿರಾಜರು ಪ್ರಮುಖರು ಅವರಲ್ಲಿ ಕೀರ್ತನಕಾರರೂ, ಕವಿಯೂ ಆಗಿರುವ ಕವಿ ಕನಕದಾಸರು ಬರೀ ಕೀರ್ತನೆಗಳಷ್ಟೇ ಅಲ್ಲದೇ ಮೋಹನ ತರಂಗಿಣಿ, ನಳಚರಿತ್ರೆ, ಹರಿಭಕ್ತಿಸಾರ, ರಾಮಧಾನ್ಯ ಚರಿತೆ ಇತ್ಯಾದಿ ಕಾವ್ಯಗಳಲ್ಲಿ ಕಾಗಿನೆಲೆಯಾದಿ ಕೇಶವನು ಜಗತ್ತಿಗೆ ಮಂಗಳವನ್ನುಂಟು ಮಾಡಲೆಂದು ಸ್ತುತಿಸುವರು.

೧. **ಆದಿಕೇಶವ(ಕೃಷ್ಣನ ಸ್ತುತಿ)**

ಶ್ರೀ ರಮಣ ಸರಸಿಜಳಾದಕ್ಷಮು
ರಾರಿ ಸಚರಾಚರಭರಿತ ದುರಿ
ತಾರಿ ನಿತ್ಯಾನಂದ ನಿರ್ಜರ ನಿಕರ ದಾತಾರ
ವಾರಿಜಾಂಬಕ ವರಗುಣಾಶ್ರಯ
ಮಾರಪಿತ ವೇದಾಂತನುತಸಾ
ಕಾರ ಚನ್ನಿಗರಾಯ ಪಾಲಿಸು ಜಗಕೆ ಮಂಗಳವ

**ನಳಚರಿತ್ರೆ**(೧-೧)

ಲಕ್ಷ್ಮೀಪತಿಯೇ ಕಮಲದ ದಳದಂತೆ ಕಣ್ಣುಳ್ಳವನೇ, ಮುರನೆಂಬ ರಕ್ಕಸನ ಕೊಂದವನೆ, ಚರಾಚರವಸ್ತುಗಳಲ್ಲಿ ನೆಲಸಿರುವವನೆ, ಪಾಪನಾಶಕನೆ, ನಿತ್ಯಾನಂದ ದಾಯಿಯೇ, ದೇವತೆಗಳಿಗೆ ದಾತಾರನೇ, ಕಮಲಾಕ್ಷನೇ ಮನ್ಮಥನ ತಂದೆಯೇ ವೇದ ವೇದಾಂತಗಳಲ್ಲಿ ಸ್ತುತಿಸಲ್ಪಡುವವನೇ ಸುಂದರ ಕಾಯನೇ, ಚನ್ನಿಗರಾಯನೇ ಜಗಕೆ ಮಂಗಳವನ್ನುಂಟು ಮಾಡೆಂದು ಹಲವು ಉಪಮೆಗಳ ಮೂಲಕ ಕಾಗಿನೆಲೆಯ ಆದಿಕೇಶವನನ್ನು ಸ್ತುತಿಸಿರುವ ಇಷ್ಟದೇವತಾ ಪದ್ಯವಿದು.

ಈ ಪದ್ಯದಲ್ಲಿ ಕನಕದಾಸರು ತನ್ನ ಆರಾಧ್ಯದೈವವನ್ನು ಮನಸೋಕ್ತವಾಗಿ ಹಾಡಿ ಸ್ತುತಿಸಿದ್ದಾರೆ. ಎರಡು ಮತ್ತು ಮೂರನೇ ಪದ್ಯದಲ್ಲೂ ಆದಿಕೇಶವನ ಸ್ತುತಿ ಇರುವುದು ಕಂಡುಬರುತ್ತದೆ.

**೨. ಆದಿಕೇಶವನ ಸ್ತುತಿ**

ಶರದಿ ಶಯನ ಮುಕುಂದ ಕಂಸಾ
ಸುರ ಮಥನ ಸುರಮೌಳಿವಂದಿತ
ಗಿರಿಧರಾಚ್ಯುತ ವೇಣುನಾದ ವಿನೋಧ ಭವದೂರ
ಸರಸಿಜೋದ್ಭವನುತ ದಯಾ ಸಾ
ಗರ ಮುರಾಂತಕ ದೇವ ವರಪುರ
ದರಸ ಚನ್ನಿಗರಾಯ ಪಾಲಿಸುಸಕಲ ಸಜ್ಜನರ

**ನಳಚರಿತ್ರೆ(೧-೨)**

ಕಡಲಿನ ಹಸಿಗೆಯಲ್ಲಿ ಮಲಗುವವನೆ, ಕಂಸನನ್ನು ಕೊಂದವನೆ, ದೇವತೆಗಳಿಂದಲೂ ಮುನಿಗಳಿಂದಲೂ ವಂದಿಸಿಕೊಳ್ಳುವಂತೆ, ಗೋವರ್ಧನ ಗಿರಿಧಾರಿಯೇ, ಕೊಳಲನಾದದಿಂದ ವಿನೋದ ಹೊಂದುವವನೆ, ಜನ್ಮ ರಹಿತನೆ ಬ್ರಹ್ಮನಿಂದ ಹೊಗಳಿಸಿಕೊಂಡವನೆ ದಯಾಮಯನೆ ಮುರಹರನೆ ಪರಮಾತ್ಮನೆ ಈ ಪಟ್ಟಣದ ಅರಸನೆ ಸಲಹು ಸಕಲ ಸಜ್ಜನರ.

**೩. ಆದಿಕೇಶವನ ಸ್ತುತಿ**

ಉರಗರಿಪು ಕೇತನ ವಿಭಿಷಣ
ವರದ ಹರಿಸದ್ಭಕ್ತ ಪೋಷಣ
ದುರಿತ ಕುಲಗಿರಿ ವಜ್ರ ನರಕಾಂತಕ ಮಹಾಮಹಿಮ
ಪರಮ ಪುರುಷ ಯಶೋದೆಯಾತ್ಮಜ
ದುರಿತ ದುಃಖ ವಿನಾಸ ವರಪುರ
ದರಸ ಚನ್ನಿಗರಾಯ ರಕ್ಷಿಸು ನಮ್ಮನನವರತ

**ನಳಚರಿತೆ(೧-೩)**

ಹಾವಿನ ವೈರಿಯಾದ ಗರಡನನ್ನು ವಾಹನವನ್ನಾಗಿ ಮಾಡಿಕೊಂಡವನೇ, ವಿಭೀಷಣನಿಗೆ ವರವನ್ನು ಕೊಟ್ಟವನೆ, ಹರಿಭಕ್ತರನ್ನು ಪೋಷಿಸುವವನೇ, ಪಾಪವೆಂಬ ಕುಲಗಿರಿಗೆ ವಜ್ರದಂತಿ

ರುವವನೆ, ಉತ್ತಮ ಪುರುಷನೆ, ಯಶೋದೆಯ ಮಗನೆ, ಪಾಪದಿಂದಾದ ದುಃಖ ನಿವಾರಣೆ ಮಾಡುವವನೆ ಈ ನಗರದ ದೊರೆಯಾದ ಚನ್ನಿಗರಾಯನೇ ಸದಾ ನಮ್ಮನ್ನು ರಕ್ಷಿಸು ಎಂದಿರುವನು.

ಕನಕದಾಸ ನಳಚರಿತ್ರೆಯ ಕೇಶವಸ್ತುತಿ ಅಥವಾ ಇಷ್ಟ ದೇವತಾ ಪದ್ಯಗಳಲ್ಲಿ ಹರಿಗೆ ಇರುವ ವಿಶೇಷತೆಗಳನ್ನು ಬಳಸಿ ಆದಿಕೇಶವನನ್ನು ಸ್ತುತಿಸಿರುವುದು ಕಂಡುಬರುತ್ತದೆ. ಕಾಗಿನೆಲೆಯ ಆದಿಕೇಶವ ಈ ಪುರದ ಅರಸ ಎಂದು ಕಲ್ಪಿಸಲಾಗಿದೆ. ಕನಕದಾಸರು ತಮ್ಮ ಇನ್ನೊಂದು ಕೃತಿಯಾದ ಮೋಹನ ತರಂಗಿಣಿಯಲ್ಲೂ ಕಾವ್ಯಾರಂಭದಲ್ಲಿ ಆದಿಕೇಶವನನ್ನು ಸ್ತುತಿಸುತ್ತಾರೆ.

**ಆದಿಕೇಶವನ ಸ್ತುತಿ**

ಶ್ರೀ ಗಿರಿಜೇಶ್ವರ ನಾತ್ಮಾಭಿರಾಮ ಸ
ದ್ವಾಗೀಶಪಿತ ಪರಂಧಾಮ
ಕಾಗಿನೆಲೆಯ ರಂಗ ಸುರಸಾರ್ವಭೌಮ ಸು
ತ್ಯಾಗಿ ಪಾಲಿಸೊಪೂರ್ಣಕಾಮ

**ಮೋಹನ ತರಂಗಿಣಿ**(೧-೧)

ಮಂಗಳಕರನಾದ ಪರಶಿವನ ಆತ್ಮಕ್ಕೆ ಆಹ್ಲಾದಕಾರಿಯು, ಬ್ರಹ್ಮನ ತಂದೆಯೂ, ಕೈವಲ್ಯ ಸ್ವರೂಪಿಯೂ, ದೇವತೆಗಳ ಒಡೆಯನು ಮನೋಭಿಲಾಷೆಯನ್ನು ಈಡೇರಿಸುವವನು ಆದ ಕಾಗಿಗನೆಲೆಯ ಆದಿಕೇಶವನೇ ಕಾಪಾಡು ಎಂದಿರುವನು.

**ಆದಿಕೇಶವನ ಸ್ತುತಿ**

ಅಡಿವಿಡಿದಬುಜ ಸಂಭವ ಪೂಜೆಗೆಯ್ಯೆನಿ
ಮ್ಮಡಿ ಗಗನಾಗ್ರದೋಳ್ ಮೆಜೆಯೆ
ಅಡಿಯಲಿರ್ದಖಿಳ ದೇವತೆಗಳೆಲ್ಲರೂ ಬಿಡ
ದಡಿಯನೆಂಬರು ಕೃಷ್ಣ ನಿಮಗೆ

**ಮೋಹನ ತರಂಗಿಣಿ**(೧-೫)

ಆಕಾಶದ ತುದಿಯಲ್ಲಿ ಶೋಭಿಸುತ್ತಿರುವ ನಿಮ್ಮ ಪಾದಗಳನ್ನು ಮುಟ್ಟಿ ಬ್ರಹ್ಮನು ಪೂಜಿಸುತ್ತಾನೆ. ಕೃಷ್ಣಾ ದೇವತೆಗಳೆಲ್ಲ ಎಂದೆಂದಿಗೂ ನಿನಗೆ ದಾಸರೆಂದು ಹೇಳುತ್ತಾರೆ.

**ಆದಿಕೇಶವ ಸ್ತುತಿ**

ಆರುಣಾಬ್ಜ ನಿಳಯ ಕವಾಟ ಕೌಸ್ತುಭರತ್ನ
ಕಿರಣದಿಂತೆಗೆದೊಳಪೊಕ್ಕು
ತರುಣಿ ಲಕ್ಷ್ಮೀಯ ಕುಚವಿಡಿದ ಕೈಯಿಂದ ಸ
ತ್ಕರುಣವೀವುದು ಕೃಷ್ಣ ನಮಗೆ

**ಮೋಹನ ತರಂಗಿಣಿ**(೧-೬)

ಕೃಷ್ಣ ನಿನ್ನ ಎದೆಯ ಮೇಲಿರುವ ಕೌಸ್ತುಭ ರತ್ನದ ಕಿರಣಗಳಿಂದ ತಾವರೆಯ ಬಾಗಿಲನ್ನು ತೆರೆದು ಒಳಹೊಕ್ಕು ಪ್ರಾಯದ ಲಕ್ಷ್ಮೀಯನ್ನು ಸೇರಿದ ಕೈಯಿಂದ ನಮಗೆ ಅನುಗ್ರಹವನ್ನುಂಟು ಮಾಡೆಂದು ಹೇಳುವುದರ ಮೂಲಕ ಕೃಷ್ಣನನ್ನು ಸ್ತುತಿಸಿರುವನು.

**ಲಕ್ಷ್ಮಿದೇವಿಯ ಸ್ತುತಿ**

ಕ್ಷೀರಾರ್ಣವ ಕನ್ಯೆ ಕಮನೀಯ ಮೂರುತಿ
ನಾರಾಯಣನುರಕ್ಷಿಹ್ನೆ
ಓರಂತೆ ಸಕಲೇಶ್ವರರ್ಯ ಸಂಪನ್ನೆ ಮ
ದ್ಭಾರ ನಿನ್ನದು ಸುಪ್ರಸನ್ನ

**ಮೋಹನ ತರಂಗಿಣಿ**(೧-೭)

ಕ್ಷೀರ ಸಾಗರದ ಸುಕುಮಾರಿಯೂ, ಮನೋಹರ ಮೂರ್ತಿಯೂ, ವಿಷ್ಣುವಿನ ಎದೆಯ ಅಲಂಕಾರವೂ ಸಕಲ ಸಂಪತ್ತಿನಿಂದ ಕೂಡಿದವಳೂ, ಪ್ರಸನ್ನ ಚಿತ್ತೆಯೂ ಆದ ಲಕ್ಷ್ಮಿದೇವಿಯೇ ನನ್ನ ಭಾರ ನಿನ್ನದಾಗಿದೆ. ಮೂರು ಪದ್ಯಗಳಲ್ಲಿ ಕೇಶವನನ್ನು ಸ್ತುತಿಸಿದ ಕನಕದಾಸರು ಈ ಪದ್ಯದಲ್ಲಿ ಲಕ್ಷ್ಮಿಯನ್ನು ಸ್ತುತಿಸುವುದರ ಮೂಲಕ ಕೃಷ್ಣನ ಹೆಂಡತಿಯಲ್ಲಿನನ್ನ ಭಾರ ನಿನ್ನದಾಗಿದೆ ಎಂದು ಹೇಳಿದ್ದಾರೆ.

**ಇತರೆ ದೇವತಾ ಸ್ತುತಿಗಳು**

ನಾಂದಿ ಪದ್ಯಗಳಲ್ಲಿ ಇಷ್ಟದೇವತಾ ಸ್ತುತಿಯಂತೆ ಇತರ ದೇವತೆಗಳ ಸ್ತುತಿಯೂ ಬಹುಮುಖ್ಯವಾಗಿದೆ. ಪ್ರಾಚೀನ ಕನ್ನಡ ಕವಿಗಳು ಕಾವ್ಯಗಳ ಆರಂಭದ ಹಲವು ಪದ್ಯಗಳಲ್ಲಿ ಇಷ್ಟ ದೇವತೆಯನ್ನು ಸ್ತುತಿಸಿ ನಂತರದ ಪದ್ಯಗಳಲ್ಲಿಇತರ ದೇವತೆಗಳನ್ನು ಸ್ತುತಿಸುತ್ತಾರೆ. ಆ ಇತರ ದೇವತೆಗಳಲ್ಲಿ ಸರಸ್ವತಿ, ಗಣೇಶ, ಕುಬೇರ, ಯಕ್ಷ, ಗರುಡ, ಆದಿಶೇಷ ಇತ್ಯಾದಿ

ದೇವತೆಗಳು ಬಹುಮುಖ್ಯವಾಗಿವೆ. ಅದರಲ್ಲೂ ಸರಸ್ವತಿಯನ್ನು ಸ್ಮರಿಸಲು ಯಾವ ಕವಿಯೂ ಮರೆತಿಲ್ಲ. ಸರಸ್ವತಿಯನ್ನು ಸಾಮಾನ್ಯವಾಗಿ ಎಲ್ಲಾ ಕವಿಗಳು ತಮ್ಮ ಕಾವ್ಯ ಮುನ್ನಡೆಸಲು ವಿನಂತಿಸಿಕೊಂಡಿದ್ದರೆ. ಈ ಪರಂಪರೆ 'ಕವಿರಾಜ ಮಾರ್ಗ'ದಿಂದಲೇ ಪ್ರಾರಂಭವಾಗಿದೆ ಹಾಗೂ ಕವಿರಾಜ ಮಾರ್ಗಪೂರ್ವಕೃತಿ ದಂಡಿಯ ಕಾವ್ಯಾದರ್ಶ(ಸಂಸ್ಕೃತ)ದಲ್ಲೂ ಸರಸ್ವತಿಯನ್ನು ವರ್ಣಿಸಲಾಗಿದೆ. ಕವಿರಾಜಮಾರ್ಗಕಾರನು ಆಶ್ರಯದಾತನ ಸ್ತುತಿಯನ್ನು ಮಾಡಿ ನಂತರ ಸರಸ್ವತಿಯನ್ನು ಸ್ತುತಿಸುತ್ತಾನೆ.

**ಸರಸ್ವತಿ ಸ್ತುತಿ**

ಶ್ರೀ ವಿಶದ ವರ್ಣೆ ಮಧುರಾ
ರಾವೋಚಿತೆ ಚತುರರುಚಿತ ಪದ ರಚನೆಚಿರಂ
ದೇವಿ ಸರಸ್ವತಿ ಹಂಸೀ
ಭಾವದೆ ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್

**ಕವಿರಾಜಮಾರ್ಗ(೧.೩)**

ಸರಸ್ವತಿಯು ಶುಭ್ರವಾದ ಬಿಳಿಯ ಬಣ್ಣದವಳು. ಮಧುರವಾದ ಧ್ವನಿಯಿಂದ ಕೂಡಿದವಳು. ಉಚಿತವಾದ ಪದ ರಚನೆಯನ್ನು ಮಾಡುವವಳು ಆದ ಸರಸ್ವತಿ ದೇವಿಯು ನನ್ನ ಮನಸ್ಸೆಂಬ ಸರೋವರದಲ್ಲಿ ಹಂಸದಂತೆ ನೆಲಸಲಿ ಎಂದು ವಿದ್ಯೆಯ ಆದಿದೇವತೆಯನ್ನು ಸ್ಮರಿಸುತ್ತಾನೆ.

ಕನ್ನಡ ಕಾವ್ಯಗಳಲ್ಲಿ ಸರಸ್ವತಿಯ ಸ್ತುತಿ ನಿರಂತರವಾಗಿ ಹರಿದುಬಂದಿದೆ. ಆದರೆ ಸರಸ್ವತಿಯು ಹಂಸದಂತೆ ನನ್ನ ಮನಸ್ಸೆಂಬ ಸರೋವರದಲ್ಲಿ ವಿಹರಿಸಲಿ ಎಂಬ ಮಾರ್ಗಕಾರನ ಕಲ್ಪನೆ ಬಹಳ ವಿಶೇಷವಾಗಿದೆ.

ಕವಿರಾಜಮಾರ್ಗದ ತರುವಾಯ ಪಂಪನ ಕಾವ್ಯಗಳಲ್ಲಿ ಸರಸ್ವತಿಯ ದರ್ಶನವಿದೆ. ಪಂಪ ತನ್ನ ಭಾರತದ ಐದನೆಯ ಪದ್ಯದಲ್ಲಿ ವಿದ್ಯಾದೇವತೆಯಾದ ಸರಸ್ವತಿಯನ್ನು ಪ್ರಾರ್ಥಿಸುತ್ತ ಸರಸ್ವತಿಯು ಅರಿಕೇಸರಿಗೆ ಸದ್ಬುದ್ಧಿಯನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತಾನೆ.

**ಸರಸ್ವತಿ ಸ್ತುತಿ**

ಕ್ಷಯಮಣವಿಲ್ಲ ಕೇಳ್ದು ಕಡೆಗಂಡವನಾವನು ಮಿಲ್ಲೆನಲ್‌ತದ
ಕ್ಷಯ ನಿಧಿ ತಾನೆ ತನ್ನನೊಸೆದೋಲಗಿಪಂಗರಿದಿಲ್ಲೆ ನಿಪ್ಪವಾ

ಙ್ಮಯ ಮನಿತರ್ಕಮಂಬಿ(ಕೆ) ಸರಸ್ವತಿ ಮನ್ಮುಖ ಪದ್ಮರಂಗದೇ
ಟ್ಗಿಯನೆಡೆಗೊಂಡು ಕೊಂಡು ಕೊನೆದೀಗರಿಗಂತೆ ವಿಶುದ್ಧ ಬುದ್ಧಿಯಂ

**ಪಂಪಭಾರತ**(೧–೫)

ವಿದ್ಯೆಗೆ ನಾಶವೆಂಬುದೇ ಇಲ್ಲ ಕಲಿತರೆ ಅಕ್ಷಯ ನಿಧಿಯಾಗಿ ಎಂದೂ ಕ್ಷಯವಾಗದ ವಿದ್ಯೆಯನ್ನು ಓಲೈಸುವನಿಗೆ ತಲುಪುವ ಎಲ್ಲ ವಾಙ್ಮಯಗಳ ತಾಯಿಯಾದ ಸರಸ್ವತಿಯು ನನ್ನ ಮುಖಕಮಲದಲ್ಲಿ ನೆಲಸಿ ಸುಪ್ರಸನ್ನಳಾಗಿ ಅರಿಕೇಸರಿಗೆ ವಿಶುದ್ಧವಾದ ಬುದ್ಧಿಯನ್ನು ಸದಾಕಾಲ ದಯಪಾಲಿಸುತ್ತಿರಲಿ ಎಂದಿರುವನು.

ಸಾಮಾನ್ಯವಾಗಿ ಎಲ್ಲ ಕವಿಗಳು ತಮಗಾಗಿ ಪ್ರಾರ್ಥಿಸಿದರೆ ಪಂಪಕವಿ ತನ್ನ ಮೂಲಕ ತನ್ನ ದೊರೆಯಾದ ಅರಿಕೇಸರಿಯ ಬುದ್ದಿ ಸದಾಕಾಲ ಪರಿಶುದ್ಧವಾಗುವಂತಾಗಲಿ ಎಂದು ಸ್ತುತಿಸುತ್ತಾನೆ. "ಸರಸ್ವತಿ ಅಪಾರವಾದ ಅಕ್ಷಯನಿಧಿ ಎಂಬ ಕಲ್ಪನೆ ಪಂಪಭಾರತದಲ್ಲಿದೆ(The poetry of earth is never dead) ಎಂಬ ಕಿಟ್ಸ ಕವಿಯ ಉಕ್ತಿ ನೆನಪಿಗೆ ಬರುತ್ತದೆ."[೬] ಸರಸ್ವತಿಯು ಎಲ್ಲ ವಾಙ್ಮಯಗಳಲ್ಲಿಯೂ ಅವಳು ಸಿದ್ದಿಯನ್ನು ಕೊಡುತ್ತಾಳೆ ಎಂಬುದು ಇನ್ನೊಂದು ಕಲ್ಪನೆ. ಪಂಪ ಸರಸ್ವತಿಯನ್ನು ಅಂಬಿಕೆ ಎಂದು ಕರೆಯುತ್ತಾನೆ. ಸರಸ್ವತಿಯು ಮಾತೃ ಸ್ವರೂಪಳು ಹಾಗೂ ಸರಸ್ವತಿ ಇಲ್ಲಿ ಪೆಣ್ಣರೂಪವನ್ನು ಮತ್ತೆ ತಳೆದಿದ್ದಾಳೆ. ಅದಿಪುರಾಣದಲ್ಲಿ ವಾಕ್ ವಧುವಾಗಿದ್ದವಳು. ಪಂಪಭಾರತದಲ್ಲಿ ಅಂಬಿಕೆ(ತಾಯಿ)ಯಾಗಿದ್ದಾಳೆ. ತಾಯಿ ಸರಸ್ವತಿಯಿಂದ ಒಳ್ಳೆಯ ಬುದ್ದಿಯನ್ನು ತನ್ನ ಅರಸನಿಗಾಗಿ ಅಪೇಕ್ಷಿಸುತ್ತಾನೆ. ತನ್ನ ಇನ್ನೊಂದು ಕೃತಿಯಾದ ಆದಿಪುರಾಣದಲ್ಲೂ ಪಂಪ ಸರಸ್ವತಿಯನ್ನು ಪ್ರಾರ್ಥಿಸುತ್ತಾನೆ.

**ಸರಸ್ವತಿ ಸ್ತುತಿ**

ಪರಮ ಜಿನೇಂದ್ರವಾಗಿಯೇ ಸರಸ್ವತಿ ಬೇಜೆದುಪೆಣ್ಣರೂಪವ
ಧರಿಯಿಸಿ ನಿಂದುದಲ್ತದುವೆ ಭಾವಿಸಿಯೋದುವ ಕೇಳ್ವಪೂಜಿಪಾ
ಧರಿಸುವ ಭವ್ಯಕೋಟಿಗೆ ನಿರಂತರ ಸೌಖ್ಯಮನೀವುದಾನದ
ರ್ಕೆರೆದಪೆನಾ ಸರಸ್ವತಿಯೆ ಮಾಟ್ಕೆಮಗಿಲ್ಲಿಯೇ ವಾಗ್ವಿಳಾಸಮಂ

**ಆದಿಪುರಾಣ**(೧–೯)

ಸರಸ್ವತಿಯ ಸ್ತುತಿ ಕವಿರಾಜ ಮಾರ್ಗದಿಂದಲೇ ಪ್ರಾರಂಭವಾಗಿದ್ದರೂ ಕನ್ನಡದ ಮೊದಲ ಕಾವ್ಯವೆನಿಸಿದ ಆದಿಪುರಾಣದಲ್ಲಿ ಬಂದಿರುವ ಸರಸ್ವತಿ ಸ್ತುತಿಯು ಸರ್ವಸಾಮಾನ್ಯವಾದ

ಸಂಪ್ರದಾಯಕ್ಕಿಂತ ವಿಭಿನ್ನವಾದ ಹಾಗೂ ಅರ್ಥಪೂರ್ಣವಾದ ಸ್ತುತಿಯಾಗಿದೆ. ಪರಮ ಜಿನೇಂದ್ರವಾಣಿಯೇ ಸರಸ್ವತಿ ಅದು ಬೇರೆ ಹೆಣ್ಣಿನ ರೂಪವನ್ನು ಧರಿಸಿ ನಿಂದುದಲ್ಲ ಅದನ್ನು ಭಾವಿಸಿ, ಓದುವ, ಕೇಳುವ ಪೂಜಿಸುವ ಆದರಿಸುವ ಭವ್ಯಕೋಟಿಗೆ ನಿರಂತರ ಸೌಖ್ಯವನ್ನು ಕೊಡಲೆಂದು ನಾನು ಬೇಡುತ್ತೇನೆ. ಆ ಸರಸ್ವತಿದೇವಿಯು ನಮಗೆ ವಿಶೇಷವಾದ ವಾಗ್ವಿಳಾಸ ಅಥವಾ ಮಾತಿನ ಚಾತುರ್ಯವನ್ನು ದಯಪಾಲಿಸಲಿ ಎನ್ನುವುದು ಈ ಪದ್ಯದ ಸಾರಾಂಶ. ಸರಸ್ವತಿ ಎಂದರೆ ಹೆಣ್ಣು ದೇವತೆ ಎಂಬ ಕಲ್ಪನೆ ಬರುವುದು ಸಹಜ. ವೈದಿಕ ಸಂಪ್ರದಾಯದಲ್ಲೂ ಪುರಾಣ ಕಾಲದಿಂದಲೂ ಸರಸ್ವತಿ ಎಂದರೆ ಎಲ್ಲರೂ ಹೆಣ್ಣು ದೇವತೆ ಎಂತಲೇ ಭಾವಿಸುತ್ತಾರೆ. ಆದರೆ ಪಂಪ ಮಹಾಕವಿಯು ಸಂಪ್ರದಾಯವನ್ನು ಅಲ್ಲಗಳೆದು ಜೈನ ಕಲ್ಪನೆಯಂತೆ ಪರಮ ಜಿನೇಂದ್ರವಾಣಿಯೇ ಸರಸ್ವತಿ. ಶ್ರೇಷ್ಠರಾದ ತೀರ್ಥಂಕರರ ಮಾತೆ ಸರಸ್ವತಿ ಎಂದು ಸ್ತುತಿಸಿರುವುದು ವಿಶೇಷವಾಗಿದೆ ಹಾಗೂ ಓದುವ ಕೇಳುವ ಆದರಿಸುವವರಿಗೆ ಭಕ್ತಕೋಟಿಗಾಗಿ ಕಾವ್ಯವನ್ನು ರಚಿಸಲು ತನಗೆ ಆ ಸರಸ್ವತಿಯು ಮಾತಿನ ಅಂದಚಂದವನ್ನು ದಯಪಾಲಿಸಲೆಂದು ಸ್ತುತಿಸುತ್ತಾನೆ.

**ಸರಸ್ವತಿ ಸ್ತುತಿ**

ಪದಿನಾಱಿಲ್ಲವಲಂಕ್ರಿಯಾರಚನೆ ಮೂವತ್ತಾಱುನೇರ್ಪಟ್ಟು ವೊಂ
ದಿದ ಶೃಂಗಾರ ಮದಲ್ಲಮೊಂದೆ ರಸಮೊಂಬತ್ತೆಯ್ದೆಡಂಬಟ್ಟುವೆಂ
ಬುದನೆಂಬನ್ನೆಗ ಮಂಗನೋಚಿತ ರಸಾಲಂಕಾರಮಂ ತಾಳ್ದದೊ
ಪ್ಪಿದ ವಾಕ್ಸುಂದರಿ ಬಂದು ಸನ್ನಿಹಿತಯಕ್ಕಸ್ಮನ್ಮುಖಾಂಬೋಜದೊಳ್.

**ಅಜಿತ ಪುರಾಣ**(೧-೧೩)

ಈ ಪದ್ಯದಲ್ಲಿ ಕವಿರನ್ನನು ಸರಸ್ವತಿಯನ್ನು ಪ್ರಾರ್ಥಿಸುವುದರ ಮೂಲಕ ಕಾವ್ಯ ದೇವತೆಯಾದ ಸರಸ್ವತಿಯು ಉಳಿದೆಲ್ಲ ಸ್ತ್ರೀಯರಿಗಿಂತ ಹೆಚ್ಚಿನ ರಸಾಲಂಕಾರಗಳನ್ನು ಹೊಂದಿದವಳು. ಹದಿನಾರು ಅಲಂಕಾರಗಳು, ಮೂವತ್ತಾರು ಅಲಂಕಾರಗಳಾದವೋ ಹಾಗೇ ಒಂದೇ ರಸ ನವರಸವಾದಂತೆ ಇರುವ ಮಾತಿನ ಸುಂದರಿ(ವಾಕ್ಸುಂದರಿ)ಯಾದ ಸರಸ್ವತಿಯು ತನ್ನ ಮುಖ ಕಮಲದಲ್ಲಿ ನೆಲಸಲಿ ಎಂದು ಪ್ರಾರ್ಥಿಸುತ್ತಾನೆ.

ವಾಕ್ಸುಂದರಿ: ಇದೊಂದು ಸುಂದರವಾದ ಪದ ಇದನ್ನು ಬಳಸಿದ ರನ್ನ ಕವಿಯು ಸರಸ್ವತಿಯನ್ನು ಮಾತಿನ ಸುಂದರಿ ಎಂದು ಸಂಬೋಧಿಸುತ್ತಾನೆ. ಹಲವು ರೀತಿಯ ಸುಂದರಿಯರು ಇರುಬಹುದು. ಆದರೆ ಮಾತಿನ ಸೌಂದರ್ಯವನ್ನು ಅಂದ-ಚಂದವನ್ನು ಕೊಡುವವಳೇ

ಸರಸ್ವತಿ ಅದಕ್ಕಾಗಿ ಕವಿರನ್ನ ಸರಸ್ವತಿಯನ್ನು ವಾಕ್ಸುಂದರಿ ಎಂದು ಸಂಬೋಧಿಸುತ್ತಾನೆ. ತನ್ನ ಇನ್ನೊಂದು ಕೃತಿಯಾದ ಗದಾಯುದ್ಧದಲ್ಲಿಯೂ ಸರಸ್ವತಿ ಸ್ತುತಿಗಾಗಿ ಇದೇ ಪದ್ಯವನ್ನು ಬಳಸಿದ್ದಾನೆ.

೧ನೇ ನಾಗವರ್ಮನು ತನ್ನ ಛಂದೋಂಬುದಿ ಹಾಗೂ ಕರ್ಣಾಟಕ ಕಾದಂಬರಿ ಎರಡೂ ಕೃತಿಗಳಲ್ಲೂ ಸರಸ್ವತಿಯನ್ನು ಸ್ತುತಿಸುತ್ತಾನೆ.

**ಭಾರತಿ ಸ್ತುತಿ(ಸರಸ್ವತಿ ಸ್ತುತಿ)**

ಅತಿಮಧುರ ಪ್ರಸನ್ನೆ ಪರಿಪೂರ್ಣ ರಸೋಚಿತೆ ರಂಜಿ
ತಾರ್ಥಸುಯುತೆ ಸಕಲಾಗಮೋಕ್ತಿಯುತೆ ಲಕ್ಷಣಲಕ್ಷ್ಯಸಮಸ್ತ ವಸ್ತುಸಂ
ಯುತೆ ಸರಸೀಜ ಗರ್ಭನ ಮುಖಾಂಬುಜದಿಂದ ಮಗಲ್ದು ಬಂದು ವಾ
ಕ್ಸತಿನೆಲಸಿರ್ಕೆ ಕೂರ್ತು ಮುಖ ಪಂಕಜದೊಳ್ ಕವಿ ನಾಗವರ್ಮನಾ

**ಛಂದೋಂಬುದ್ದಿ**(೧-೬)

ಕವಿ ಭಾರತಿಸ್ತುತಿಯೆಂದುಹೇಳಿರುವುದು ಸರಸ್ವತಿಯನ್ನೆ ಭಾರತಿಯಾದ ವಾಕ್ಸತಿಯು ತನ್ನ ಮುಖ ಕಮಲದಲ್ಲಿ ನೆಲಸಲೆಂದು ಬಯಸುವನು ವಾಕ್ಸತಿ ಎಂದರೇ ಮಾತಿನ ಹೆಣ್ಣು ಅಥವಾ ಸರಸ್ವತಿಯೆಂದಾಗುವುದು. ಅತಿಮಧುರವಾದ ಪ್ರಸನ್ನ ಮುಖದವಳು, ಪರಿಪೂರ್ಣವಾದ ರಸಾಲಂಕಾರಗಳನ್ನು ಪಡೆದವಳು, ಸಮಸ್ತ ವಸ್ತುಗಳನ್ನು ಸೇರಿದವಳು, ಸಕಲ ಆಗಮಗಳನ್ನು ಲಕ್ಷ-ಲಕ್ಷಗಳನ್ನು ಉಳ್ಳವಳು, ಬ್ರಹ್ಮನರಾಣಿಯೂ ಆದ ಸರಸ್ವತಿಯೂ ನಾಗವರ್ಮ ಮುಖ ಪಂಕಜದೊಳ್ ನೆಲಸಲಿ ಎಂದಿರುವನು.

ನಾಗವರ್ಮನ ಮತ್ತೊಂದು ಕೃತಿ ಕರ್ಣಾಟಕ ಕಾದಂಬರಿ ಮೂಲ ಬಾಣಭಟ್ಟನ ಗದ್ಯ(ಸಂಸ್ಕೃತ) ಕೃತಿ ಕಾದಂಬರಿಯು ನಾಗವರ್ಮನಲ್ಲಿ ಕರ್ನಾಟಕ ಕಾದಂಬರಿಯಾಗಿದೆ ಗದ್ಯ ಬಾಣಭಟ್ಟನ ಸಂಸ್ಕೃತ ಕಾದಂಬರಿಯನ್ನು ಅನುವಾದಿಸಿ ಕರ್ನಾಟಕ ಕಾದಂಬರಿಯಾಗಿಸಿದ ೧ನೇ ನಾಗವರ್ಮನು ಕಾವ್ಯದ ನಾಯಕನಾದ ಚಂದ್ರಾಪೀಡನನ್ನು ಚಂದ್ರನಿಗೆ ಹೋಲಿಸಿರುವನು. ನಂತರ ಎರಡನೆಯ ಪದ್ಯದಲ್ಲಿ ಸರಸ್ವತಿಯನ್ನು ಸ್ತುತಿಸಿರುವನು.

**ಸರಸ್ವತಿ ಸ್ತುತಿ**

ಸತತಗಭೀರ ವೃತ್ತಿಯನುದಾರತೆಯಿಂ ಜಗದೇಕ ಜೀವನ
ಸ್ಥಿತಿಯಿನತಿಪ್ರಸಾದ ಗುಣದಿಂ ರಸಭಾವ ವಿಳಾಸದಿಂಕವಿ

ಪ್ರತತಿ ನಿತಾಂತ ಸೇವ್ಯತೆಯನೊಂದಿ ಸರಸ್ವತಿಯಂದದಿಸರ
ಸ್ವತಿ ದಯೆಗೆಯ್ಗೆ ನಮ್ಮೊಳನುಕೂಲತೆಯಿಂದವೆ ನಿರ್ಮಳತ್ವಮ

**ಕರ್ಣಾಟಕ ಕಾದಂಬರಿ(೧–೨)**

ಸರಸ್ವತಿ ನದಿಯಂತಿರುವ ವಾಙ್ಮಯ ಸ್ವರೂಪಳಾದ ಸರಸ್ವತಿ ದೇವಿಯು ನಮಗೆ ಪ್ರತಿಭೆಯನ್ನು ಅನುಗ್ರಹಿಸಿ ಸಹಾಯಕಳಾಗಿ ನಾವು ಪ್ರಯೋಗಿಸುವ ಶಬ್ದಗಳು ದೋಷರಹಿತ ವಾಗಿಯೂ ಪರಿಶುದ್ಧವಾಗಿಯೂ ಇರುವಂತೆ ಅನುಗ್ರಹಿಸಲಿ ಸರಸ್ವತಿಯು ಯಾವಾಗಲೂ ಅಶ್ಲೀಲ ಮೊದಲದ ದೋಷಗಳಿಲ್ಲದವಳು. ಅವಳಲ್ಲಿ ಉದಾರತೆಯಿದೆ. ಅವಳು ಸರಸ್ವತಿ ನದಿಯಂತೆ ಪವಿತ್ರಳೂ, ಪರಿಪೂರ್ಣಳೂ ಆಗಿರುವಳೆಂದು ಸ್ತುತಿಸುತ್ತಾನೆ. ಪದ್ಯದಲ್ಲಿ ಗಾಂಭಿರ್ಯ ಗುಣ ಪ್ರಸಾದಗುಣ, ರಸಭಾವ ವಿಲಾಸ ಇತ್ಯಾದಿ ಗುಣಗಳು ಕಾವ್ಯದ ಗುಣಗಳು. ಆದರೆ ಸರಸ್ವತಿಯಲ್ಲೂ ಅಂತಹ ಉದಾರ ಗುಣಗಳಿವೆ ಹಾಗೂ ಸರಸ್ವತಿಯೂ ಸರಸ್ವತಿ ನದಿಯಂತೆ ಗಂಭಿರ ಸ್ವರೂಪಳು ಎಂದಿರುವನು.

ಇನ್ನೊಂದು ಪದ್ಯದಲ್ಲಿ ತನ್ನ ಮಾತಿನ ಚಮತ್ಕಾರದಿಂದ ಬಾಣಿ(ವಾಣಿ ಇದರ ತದ್ಭವ) ಎಂಬ ಹೆಸರು ಯಾಕೆ ಬಂತೆಂಬುದನ್ನು ನಾಗವರ್ಮನು ತಿಳಿಸುತ್ತಾನೆ. ಬಹುಶಃ. ವಾಣಿ ಎಂಬ ಪದ ಮಾತಿನ ದೇವತೆಯಾಗುವುದರಿಂದ ಕನ್ನಡದಲ್ಲಿ ಅದುವೇ ಬಾಣಿ ಎಂದಾಗಿದೆ.

ಕಥನ ಕವಿಯಾದ ನಯಸೇನನು ತನ್ನ ಧರ್ಮಾಂಮೃತದ ಎಂಟನೆಯ ಪದ್ಯದಲ್ಲಿ ಸರಸ್ವತಿಯನ್ನು ಸ್ತುತಿಸುತ್ತಾನೆ.

**ಸರಸ್ವತಿ ಸ್ತುತಿ**

ಕುಂದದ ಕೋಮಲಾಂಗ ರುಚಿಯಿಂ ಚಲುವಿಗೆಡೆಯಾಗಿ ವೃತ್ತದೊಂ
ದದಂದೊಳಿರ್ದು ಪೆರ್ಮೊಲೆಯಿನಂತೆಸೆದೊಪ್ಪುವನೇಕ ಛಂದದೊಂ
ದಂದದಯಾನದೊಂದು ರಮಣೀಯತೆಯಿಂ ಕಡು ಗಾಡಿವೆತ್ತವಾ
ಕ್ಸುಂದರಿ ಕೂರ್ತು ನಿಲ್ಕೆ ನಯಸೇನ ಮುನೀಂದ್ರ ಮುಖಾಬ್ಜಷಂಡದೊಳ್

**ಧರ್ಮಾಂಮೃತ**(೧.೮)

ಕುಂದದ ಕೋಮಲಾಂಗಿಯಾದ ಚಲುವಿಗೆಡೆಯಾದ ಅನೇಕ ಛಂದದಿಂದಡೊಗೂಡಿದ ಕಡುಚೆಲುವೆಯಾದ ವಾಕ್ಸುಂದರಿ ನಯಸೇನನ ಮುಖಕಮಲದಲ್ಲಿ ನೆಲೆಯಾಗಲಿ ಎಂದಿರವನು. ಈ ಪದ್ಯದಲ್ಲಿ ಸರಸ್ವತಿಯು ಕೇವಲ ವಾಕ್ಸುಂದರಿ ಮಾತ್ರವಲ್ಲ ಅವಳು ಅತಿಕೋಮಲಾಂಗಿಯಾದ

ಸುಂದರಿ ಎಂದು ನಯಸೇನನು ವರ್ಣಿಸಿರುವನು. ಅಂಡಯ್ಯನು ತನ್ನ ಕಬ್ಬಿಗರ ಕಾವ್ಯದ ಮೂರನೇ ಪದ್ಯದಲ್ಲಿ ಸರಸ್ವತಿಯನ್ನು ಸ್ತುತಿಸುತ್ತಾನೆ.

**ಸರಸ್ವತಿ ಸ್ತುತಿ**

ಗರುವಿಕೆಗಿಂಬು ಗಾಡಿಗೆ ತವರ್ಮನೆ ಮೈಮೆಗೆ ಮೇರೆ ನನ್ನಿಗಾ
ಗರಮಜಿತಕ್ಕೆ ಗೊತ್ತು ಪೆಸರ್ವೆತ್ತ ನೆಗಟ್ತೆಗೆತಾಗಮಾಗಿ ಬ
ಲ್ಲರ ಬಗೆಯಲ್ಲಿ ಕೂಡಿ ನೆಲಸಿರ್ದು ಪೊಗಟ್ತೆಯನಾಂತಳಾವಳಾ
ಸರಸ್ವತಿಕೂರ್ಮೆಯಂದೊಸೆದು ಮಾಡುಗೆ ಕಬ್ಬದ ಬರ್ದಿನೇಟ್ತೆಯಂ

**ಕಬ್ಬಿಗರ ಕಾವ್ಯ(೧-೩)**

ಗರ್ವಕ್ಕೆ ಕಾರಣಳೂ, ಸೌಂದರ್ಯಕ್ಕೆ ತವರು ಮನೆಯೂ ಮಹಿಮೆಗೆ ಮೇರೆಯೂ, ಸತ್ಯದ ಆಗರವೂ ಆದವಳು ಪಂಡಿತರ ಮನದಲ್ಲಿ ನೆಲಸಿದವಳೂ ಆದ ಯಾರನ್ನು ಹೊಗಳುತ್ತಿರುವೆನೊ ಅಂತಹ ಸರಸ್ವತಿಯು ಪ್ರೀತಿಯಿಂದ ಬಂದು ನನ್ನ ಕಾವ್ಯವನ್ನು ಮುನ್ನಡೆಸಲಿ.

ರುದ್ರಭಟ್ಟನು ತನ್ನ ಜಗನ್ನಾಥ ವಿಜಯದ ಐದನೆಯ ಪದ್ಯದಲ್ಲಿ ಇತರ ದೇವತೆಯಾದ ಗಣೇಶನನ್ನು ಸ್ತುತಿಸುತ್ತಾನೆ.

**ಗಣೇಶ ಸ್ತುತಿ**

ಅರಿರೌದ್ರಂ ಕರದ್ವೆರ್ಘ್ಯ ಮುಲ್ಲಸದ ಹೀನಾಲಂಕೃತ ಮೂರ್ತಿ ಸಾ
ಕ್ಷರ ಸೇವ್ಯಂ ನಿಜವಿದ್ಯೆ ವಿಶ್ವವಿನುತಂ ಪಾದಂ ಸದಾಳಿಪ್ರಿಯಂ
ವರದಾನಂ ನತಭದ್ರ ಲಕ್ಷಣಪದಂ ಪದ್ಮಾನುಷಂಗಿತ್ವಮಾ
ಗಿರೆ ಪೆಂಪಚ್ಚರಿಯಾದದೇವಗಣಪಂ ರಕ್ಷಿಕ್ಕೆ ಭೂಚಕ್ರಮಂ

**ಜಗನ್ನಾಥ ವಿಜಯ(೧.೫)**

ವೈರಿ ಭಯಂಕರವೂ, ಬಹು ದೀರ್ಘವಾಗಿರುವ ಸೊಂಡಿಲು, ಸರ್ಪವನ್ನು ಹೊಟ್ಟೆಗೆ ಸುತ್ತಿಕೊಂಡು ಅಲಂಕೃತನಾಗಿರುವವನೂ, ಆಸಕ್ತರೂ, ಭಕ್ತರೂ, ವಿದ್ವಾಂಸರಿಂದ ವಂದಿಸಿಕೊಳ್ಳುವ ವಿಶ್ವವಿನುತವಾದ ಪಾದವು ಸತ್ಪುರುಷರಿಗೆ ಪ್ರಿಯವಾದ ವರದಾನವನ್ನು ಕೊಡುವವನೂ ಸದಾ ತುಂಬಿಗಳಿಗೆ ಪ್ರಿಯವಾದ ಮದೋದಕವನ್ನು ಕೊಡುವವನು. ಗಜಲಕ್ಷಣ ಮುಖ ಹೊಂದಿದ ಆಶ್ಚರ್ಯಕರವಾದ ಮಹಿಮೆಯುಳ್ಳ ದೇವ ಗಣಪ ನಮ್ಮ ಭೂಮಂಡಲವನ್ನು ರಕ್ಷಿಸಲಿ ಎಂದಿರುವನು.

**ಸರಸ್ವತಿ ಸ್ತುತಿ**

ಕೆಸಜೊಳ್ ಪುಟ್ಟಿದುದಂತು ಮಲ್ಲದೆ ರಜಸ್ಸಂಲೀಢಮೆಂತು ಜಡಾ
ವಸಥಂ ಚೀ ಮಧು ಪ್ರಸಂಗಿ ಖರದಂಡ ಮತ್ತೆ ನುತ್ತಬ್ಜಮಂ
ಬಿಸುಟತ್ಯುತ್ತಮಮಿಂತುಟೆಂದು ಪಿರಿದುಂ ಸಂತೋಷದಿಂ ವಾಣಿ ಬಂ
ದು ಸಮಂತಿರ್ಕೆ ನವೀನ ಸೌರಭದವೊಲ್ ಜಿಹ್ವಾಗ್ರದೊಳ್ ರುದ್ರನಾ

**ಜಗನ್ನಾಥ ವಿಜಯ**(೧.೬)

ಸರಸ್ವತಿಯ ನೆಲೆಯಾದ ಕಮಲವು ಕೆಸರಿನಲ್ಲಿ ಹುಟ್ಟಿದ್ದು, ದೂಳಿಯಿಂದ, ದೋಷದಿಂದ ಕೂಡಿದ್ದು, ಅಲ್ಲದೆ ಜಡಬೇವಿ ಛೀ ಮಧುಪ್ರಸಂಗಿ ಮದ್ಯಪಾನಿ(ಕುಡುಕದುಂಬಿ)ಗಳಿಗೆ ಆಶ್ರಯವಾದುದು ಖರದಂಡ(ಬರಟಾದನಾಳ)ವನ್ನು ಹೊಂದಿರುವುದು ಎಂದು ತಿಳಿದು ಆ ಕಮಲಾಸನವನ್ನು ತೊರೆದು ಬಂದು ದೋಷರಹಿತವಾದ ಹಾಗೂ ಪರಿಶುದ್ಧವಾದ ರುದ್ರಭಟ್ಟನ ಮುಖಕಮಲದಲ್ಲಿರುವ ನಾಲಗೆಯ ತುದಿಯಲ್ಲಿ ನೆಲಸಲಿ ಎಂದಿರುವನು.

ಇಲ್ಲಿ ಕವಿ ರುದ್ರಭಟ್ಟನು ಸಂಪ್ರದಾಯದಂತೆ ಸರಸ್ವತಿಯನ್ನು ಸ್ತುತಿಸುವಾಗ ಶ್ಲೇಷಾರ್ಥ ಬರುವಂತೆ ಕಲ್ಪಿಸಿದ್ದಾನೆ. ಸರಸ್ವತಿ ಕಮಲವಾಸಿನಿ ಎಂಬುದು ಸಾಂಪ್ರದಾಯಿಕವಾಗಿ ಎಲ್ಲ ಕವಿಗಳೂ ಹೇಳತ್ತಾರೆ. ಆದರೆ ಆ ಕಮಲವು ಕೆಸರಿನಲ್ಲಿ ಹುಟ್ಟಿದ್ದು ಕೊಳಕಾಗಿದೆ. ಅಲ್ಲದೆ ಕಮಲವು ಮಧುಪ್ರಸಂಗಿ ಬೇರೆ. ಅದು ಕುಡುಕ ದುಂಬಿಗಳ ವಾಸಸ್ಥಾನ. ಅದು ಸರಸ್ವತಿ ವಾಸಿಸಲು ಯೋಗ್ಯ ಸ್ಥಳವಲ್ಲ. ನನ್ನ ನಾಲಿಗೆಯ ಅಗ್ರ ಪೀಠ ಪರಿಶುದ್ಧವಾಗಿದೆ. ಆದ್ದರಿಂದ ಸರಸ್ವತಿಯೂ ಕಮಲವನ್ನು ತೊರೆದು ನನ್ನ ನಾಲಿಗೆಯ ಮೇಲೆ ಆಸೀನಳಾಗಲೆಂದು ಪ್ರಾರ್ಥಿಸುತ್ತಾನೆ. ಸರಸ್ವತಿಯನ್ನು ಒಲಿಸಿಕೊಳ್ಳುವ ಪದ್ಯವಿದು.

ನೇಮಿಚಂದ್ರನು ತನ್ನ ನೇಮಿನಾಥ ಪುರಾಣ, ಲೀಲಾವತಿ ಪ್ರಬಂಧದಲ್ಲಿ ಜಿನಸ್ತುತಿಗಳ ನಂತರ ಸಿದ್ಧರನ್ನು ಉಪಾಧ್ಯಾಯರನ್ನು ಸ್ತುತಿಸಿ ನಂತರ ಸರಸ್ವತಿಯನ್ನು ಸ್ತುತಿಸುತ್ತಾನೆ.

**ಸರಸ್ವತಿ ಸ್ತುತಿ**

ಜಿನಪದ ಬೋಧವಾರ್ದಿಭವೆ ಭಮಮನೋಹರಕಾಂತೆ ಕಾಮಸಂ
ಜನನಿ ಯಶೋವಿಕಾಸಿನಿ ಗುಣಿಕೃತ ಸಂಸ್ಕೃತಿದೋಷೆ ಪುಣ್ಯಭಾ
ಗಿನಿ ಭುವನ ಪ್ರಮೋದಿನಿ ಸುಖಮೃತದಾಯಿನಿ ಬಂದು ನೇಮಿಚಂ
ದ್ರನ ಮುಖ ಪದ್ಮದೊಳ್ ಸಿರಿವೊಲಿರ್ಪ ಸರಸ್ವತಿ ನಿಲ್ಕೆ

**ಲೀಲಾವತಿ ಪ್ರಬಂಧ**(೧-೩)

ಜಿನಪದವೆಂಬ ಸಮುದ್ರದಲ್ಲಿ ಜನಿತಳಾದ ಕಾಮನ ಜನನಿಯೂ, ಯಶಸ್ಸಿನ ವಿಕಾಸಿನಿಯಾದ, ಪುಣ್ಯಭಾಗಿನಿಯಾದ ಭಾಗ್ಯವನ್ನು ಹೊಂದಿದ ಭುವಿಯ ಜನರಿಂದ ವಂಧಿಸಿಕೊಳ್ಳುವ, ಸುಖಾಮೃತವನ್ನು ಕೊಡುವ, ಸಿರಿ ಸಂಪತ್ತನ್ನು ದಯಪಾಲಿಸುವ ಸರಸ್ವತಿ ನಲ್ಮೆಯಿಂದ ಬಂದು ನೇಮಿಚಂದ್ರನ ಮುಖಕಮಲದಲ್ಲಿ ನೆಲಸಲಿ ಎಂದಿರುವನು.

ಸಾಮಾನ್ಯವಾಗಿ ಎಲ್ಲಾ ಜೈನಕವಿಗಳು ಸರಸ್ವತಿಯನ್ನು ಪ್ರಾರ್ಥಿಸುವಾಗ ತಮ್ಮ ಮುಖ ಕಮಲದಲ್ಲಿ ಬಂದು ನೆಲೆಸಲು ವಿನಂತಿಸಿಕೊಂಡಿದ್ದಾರೆ. ನೇಮಿಚಂದ್ರನು ಸರಸ್ವತಿಯನ್ನು ವರ್ಣಿಸುತ್ತ ಕಾಮಸಂಜನನಿ ಎಂಬ ಪದವನ್ನು ಪ್ರಯೋಗಿಸುತ್ತಾನೆ. ಶೃಂಗಾರ ಕಾರಾಗ್ರಹವಾದ ಲೀಲಾವತಿಯನ್ನು ಬರೆಯ ಹೊರಟ ನೇಮಿಚಂದ್ರನಿಗೆ ಸರಸ್ವತಿ ಕಾಮವನ್ನು ಹುಟ್ಟಿಸುವವಳೆಂದು ಬಹುಶಃ ಹೇಳಬೇಕಾಗಿತ್ತು ಎನಿಸುತ್ತದೆ. ಅದಕ್ಕಾಗಿಯೇ ಕಾಮಸಂಜನನಿ ಎಂಬ ಪದಪ್ರಯೋಗ ಮಾಡಿದ್ದಾನೆ.

ನಾಗಚಂದ್ರನು ಬರೆದದ್ದು ಎರಡೂ ಪುರಾಣ ಕೃತಿಗಳೇ. ಮಲ್ಲಿನಾಥ ಪುರಾಣ ಇನ್ನೊಂದು ರಾಮಚಂದ್ರಚರಿತ ಪುರಾಣ. ಮಲ್ಲಿನಾಥ ಪುರಾಣದ ಜಿನಸ್ತುತಿ, ಸಿದ್ಧರ, ಆಚಾರ್ಯರ ಸ್ತುತಿಯ ನಂತರ ಸರಸ್ವತಿ, ಕುಬೇರ, ಕಾಳಿ ಇತ್ಯಾದಿ ಇತರ ದೇವತೆಗಳನ್ನು ಸ್ತುತಿಸಿದ್ದಾನೆ.

**ಸರಸ್ವತಿ ಸ್ತುತಿ**

ಪದವಿನ್ಯಾಸ ವಿಲಾಸಮಂಗ ವಿಭವಂ ಚೆಲ್ವಾದ ದೃಷ್ಟಿಪ್ರಸಾ
ದದೊಳೊಂದಾದ ನಯಂ ಮೃದೂಕ್ತಿ ವನಿತಾ ಸಾಮಾನ್ಯವಲ್ತೆಂಬ ಕುಂ
ದದ ವರ್ಣ ನಿಜವೆಂಬ ರೂಪೆಸೆಯೆ ನಾನಾ ಭಂಗಿಯಂ ಬೇಜೆತಾ
ಳ್ದಿದ ವಾಗ್ವನಿತೆ ಮಾಟ್ಕೆ ಮತ್ಕೃತಿಗೆ ಲೋಕಾಶ್ಚರ್ಯ ಚಾತುರ್ಯಮಂ

**ಮಲ್ಲಿನಾಥಪುರಾಣ**(೧-೭)

ಈ ಕಾವ್ಯದಲ್ಲಿ ವಾಗ್ದೇವಿಯಾದ ಸರಸ್ವತಿಯ ಅಪಾರವಾದ ರೂಪ ಸೌಂದರ್ಯವನ್ನು ಹಾಗೂ ಕಾವ್ಯ ಚಲುವನ್ನು ಕುರಿತು ವರ್ಣಿಸಲಾಗಿದೆ. ಪದ ವಿನ್ಯಾಸ ವಿಲಾಸ, ವಿಭ್ರಮಗಳನ್ನು ಹೊಂದಿರುವ, ನಯವಾದ ಮೃದುನುಡಿಗಳು ಸಾಮಾನ್ಯವಾಗಿ ಸ್ತ್ರೀಯರಲ್ಲಿರುತ್ತವೆ. ಹಾಗೆ ಕಾವ್ಯವೂ ವಾಕ್ಸುಂದರಿ ಎಂಬ ವರ್ಣನೆಯು ಕಾವ್ಯಭಂಗಿಗಳು ಎಂಬಂತೆ ಚಿತ್ರಿಸಲಾಗಿದೆ.

**ಕಾಳಿಸ್ತುತಿ**

ವರದ ಫಲಾಸಿ ಖೇಟಕ ಚತುರ್ಭುಜೆ ತನ್ನ ಶರೀರ ಕಾಂತಿಯಿಂ
ಮರಕತ ರತ್ನದಿಂ ಸಮೆದವೊಲ್ಯರಭಂ ನಿಜವಾಹನ ಮನೋ

ಹರಮೆನೆ ಧರ್ಮಚಕ್ರ ಪರಚಕ್ರಮನಾಕ್ರಮಿಸಲ್ಕೆ ಸಾಲ್ದಭಾ
ಸುರತರ ತೀವ್ರ ತೇಜದ ಪರಾಜಿತೆ ಮಾಳ್ಕೆಮತಿ ಪ್ರಕಾಶಮಂ

**ಮಲ್ಲಿನಾಥಪುರಾಣ(೧-೯)**

ತನ್ನ ದೇಹ ಕಾಂತಿಯಿಂದಲೂ, ಹೊಳೆಯುವ ರತ್ನಾಭರಣಗಳಿಂದಲೂ ಶೋಭಿತವಾಗಿ, ಚತುರ್ಭುಜಳಾಗಿ, ನಿಜವಾಹನವನ್ನೇರಿ ಧರ್ಮಚಕ್ರವನ್ನು ಧರಿಸಿದ ಅಪರಾಜಿತೆಯಾದ ಕಾಳಿಯು ಎನ್ನ ಮತಿಗೆ ಪ್ರಕಾಶವನ್ನುಂಟು ಮಾಡಲಿ.

ನಾಗಚಂದ್ರನು ತನ್ನ ಇನ್ನೊಂದು ಪುರಾಣ ಕಾವ್ಯವಾದ ರಾಮಚಂದ್ರ ಚರಿತ ಪುರಾಣದಲ್ಲಿ 'ವಚಶ್ರೀ ನರ್ತಕಿ ನೃತ್ಯ ವೇದಿಕೆ' ಎಂಬ ವಾಕ್ಯವನ್ನು ತರುತ್ತಾನೆ. ಇಲ್ಲಿ ವಚಶ್ರೀ ಎಂದರೆ ಸರಸ್ವತಿ. ಅವಳ ನೃತ್ಯ ರಂಗಮಂಟಪ ಎನ್ನ ಕಾವ್ಯ ಆದ್ದರಿಂದ ಸರಸ್ವತಿ ಎನಗೆ ಒಲಿದು ಬರಲೆಂದು ಪ್ರಾರ್ಥಿಸುತ್ತಾನೆ. ಮೂಲ ಪ್ರಾಕೃತ 'ಪಉಮ ಚರಿತ' ಇದಕ್ಕೆ ಆಕರವಾಗಿದ್ದರೂ ಮೂಲ ವಾಲ್ಮೀಕಿ ರಾಮಾಯಣಕ್ಕಿಂತಲೂ ಭಿನ್ನವಾದ ಕಾವ್ಯವೊಂದನ್ನು ನಾಗಚಂದ್ರನಿಂದ ಕನ್ನಡ ಕಾವ್ಯಕ್ಕೆ ದೊರೆತಿದೆ. ಇದು ಕಾವ್ಯವಲ್ಲ ಸಮಗ್ರ ರೂಪಕದಂತೆ ಅವತರಿಸಿದೆ.

**ಸರಸ್ವತಿ ಸ್ತುತಿ**

ಚತುರ ಚತುರ್ಮುಖ ನೆಲ್ಲಾ
ಶ್ರುತಿಗಳ ನೊಲವಿಂದೆ ಕಲ್ತ ಶಿವನ ವಿವಾಹೋ
ನ್ನತಿಯಾ ಕೃತಿಯೆಂದೆನೆ ಭಾ
ರತಿಯೆನಗನುಕೂಲೆಯಾಗದಿರಲಣ್ಮುವಳೇ

**ಗಿರಿಜಾಕಲ್ಯಾಣ(೧.೯)**

ಚತುರನಾದ ಚತುರ್ಮುಖ ಬ್ರಹ್ಮನು ಶಿವನಿಂದಲೇ ಸಕಲ ಶ್ರುತಿಗಳನ್ನು ಭಕ್ತಿಯಿಂದ ಕಲಿತ. ಅಂಥಹ ಶಿವನ ವಿವಾಹ ಮಹೋತ್ಸವವನ್ನು ಕುರಿತ ಈ ಕೃತಿಗೆ ಬ್ರಹ್ಮನ ಸತಿಯಾದ ವಾಗ್ದೇವತೆಯು ನನಗೆ ಅನುಕೂಲೆಯಾಗದಿರುವಳೇ ಎನ್ನುವ ಮೂಲಕ ಬ್ರಹ್ಮನ ರಾಣಿಯಾದ ಸರಸ್ವತಿಯನ್ನು ಸ್ತುತಿಸುತ್ತಾನೆ. ಪದ್ಯದಲ್ಲಿ ಕವಿ ಭಾರತಿ ಎಂಬ ಪದಪ್ರಯೋಗಿಸುತ್ತಾನೆ. ಈ ಹೆಸರು ಎಲ್ಲರಿಗೂ ಪ್ರಿಯವಾಗಿದ್ದು, ಭಾರತಿ ಬೇರಾರು ಅಲ್ಲ ಸರಸ್ವತಿ ಎಂದು ತಿಳಿದುಬರುತ್ತದೆ.

ಕವಿ ಜನ್ನನು ತನ್ನ ಯಶೋಧರ ಚರಿತೆಯಲ್ಲಿ ಜಿನಸ್ತುತಿಯನ್ನು, ಸಿದ್ದರನ್ನು, ಆಚಾರ್ಯರನ್ನು ಸ್ತುತಿಸಿ ನಂತರ ಸರಸ್ವತಿಯನ್ನು ಸ್ತುತಿಸುತ್ತಾನೆ. ಆದರೆ ನಾಂದಿ ಪದ್ಯಗಳಲ್ಲಿ ಇರಬೇಕಾದ

ಸರಸ್ವತಿ ಸ್ತುತಿಯನ್ನು ಕಾವ್ಯದ ಕೊನೆಯಲ್ಲಿ ಮಾಡುತ್ತಾನೆ. ಎಲ್ಲಾ ಕವಿಗಳು ಸಾಮಾನ್ಯವಾಗಿ ಕಾವ್ಯದ ಪ್ರಾರಂಭದಲ್ಲಿ ವಾಗ್ದೇವಿಯಾದ ಸರಸ್ವತಿಯನ್ನು ಸ್ತುತಿಸಿದರೆ, ಯಶೋಧರ ಚರಿತ್ರೆಯಲ್ಲಿ ಕಾವ್ಯದ ಕೊನೆಗೆ ಬಂದಿರುವುದು ಒಂದು ವಿಶೇಷತೆಯಾಗಿದೆ.

**ಸರಸ್ವತಿ ಸ್ತುತಿ**

ಪರಮ ಜಿನೇಂದ್ರ ಶಾಸನ ವಸಂತದೊಳೀ ಕೃತಿ ಕೋಕಿಲ ಸ್ವ
ಪರೆಗ ಸಹಾಯ ಶೂರನ ಭುಜಕ್ಕೆ ಜಯಂ ಸಮಸಲ್ಗೆ ಸಂತತಂ
ಪರಿಮಳದಂತೆ ವಾಣಿ ನೆಲಸಿಕ್ಕೆ ವಿಕಾಸ ವಿಶ್ವಾಸದಂತೆ
ಸಿರಿ ನೆಲಸಿರ್ಕೆ ನಾಟ್ಪ್ರಭು ಜನಾರ್ಧನದೇವನ ವಕ್ತ್ರಪದ್ಮದೊಳು

**ಯಶೋಧರ ಚರಿತೆ(೪-೮೭)**

'ಪರಮ ಜಿನೇಂದ್ರವಾಣಿಯೇ ಸರಸ್ವತಿ' ಎಂದು ಪಂಪ ಹೇಳಿದರೆ, ಜನ್ನ ಪರಮ ಜಿನೇಂದ್ರ ಶಾಸನ ವಸಂತದಂತಿರುವ ಈ ಕೃತಿ ಕೋಗಿಲೆಯ ಧ್ವನಿಯು ಅಸಹಾಯ ಶೂರನ ಭುಜಕ್ಕೆ ಜಯಮಾಲೆಯನ್ನು ತಂದು ಕೊಡುವ ಹಾಗೂ ಸತತವಾಗಿ ಪರಿಮಳದ ಕಂಪನ್ನು ಬೀರುವ ಸೌಗಂಧದಂತೆ ಈ ಕಾವ್ಯದಲ್ಲಿ ವಾಣಿಯಾದ ಸರಸ್ವತಿಯು ಬಂದು ಜನಾರ್ಧನ ದೇವನ ಮುಖಕಮಲದಲ್ಲಿ ನೆಲಸಲಿ ಎಂದಿರುವನು. ಈ ಪದ್ಯದಲ್ಲಿ ಜನ್ನನ ಪೂರ್ಣ ಹೆಸರು ಜನಾರ್ಧನದೇವನೆಂದು ತಿಳಿದುಬರುತ್ತದೆ.

**ಸರಸ್ವತಿ ಸ್ತುತಿ**

ಪದವಿನ್ಯಾಸ ವಿಶೇಷದೊಳ್ ಪದವಿಲಾಸಂ ಪೆಂಪುವೆತ್ತಿರ್ಪಕಾ
ವ್ಯದ ಮೆಯ್ಯೊಳ್ ಸಮುದಾಯ ಶೋಭೆ ವಿನುತಸ್ಯಾದರ್ಥದೊಳ್ ಮಧ್ಯಭಾ
ಗದ ಕಾರ್ಶ್ಯಂ ನಯಯುಗ್ಮದೊಳ್ ನಯನಭಾವಂ ಭಂಗಿಯಂ ತಾಳ್ದೆಸಂ
ನ್ನಿದಿಯಾಗಿರ್ದ ಜಿನೇಂದ್ರ ವಾಗ್ವನಿತೆನಿಲ್ಕಸ್ಮನ್ಮುಖಾಂಬೋಜದೊಳ್

**ಅನಂತನಾಥಪುರಾಣ**(೧.೮)

ಪದವಿನ್ಯಾಸ ವಿಶೇಷದಲ್ಲಿ ಪದ ವಿಲಾಸದ ಚಲುವು ತುಂಬಿದ ಕಾವ್ಯದ ಮೈಯಲ್ಲಿ ಜಿನೇಂದ್ರ ವಾಗ್ವನಿತೆಯಾದ ಸರಸ್ವತಿಯು ನಿಷ್ಕಲ್ಮಷವಾದ ನನ್ನ ಮುಖಕಮಲದಲ್ಲಿ ಬಂದು ನೆಲಸಲೆಂದು ಪ್ರಾರ್ಥಿಸುತ್ತಾನೆ. ಅನಂತನಾಥ ಪುರಾಣದ ಒಂಭತ್ತನೆಯ ಪದ್ಯವೂ ಸರಸ್ವತಿಯ ಸ್ತುತಿಯನ್ನೇ ಒಳಗೊಂಡಿದೆ.

**ಸರಸ್ವತಿ ಸ್ತುತಿ**

ವರದ ಕರಾಂಬುಜಂ ಮೆಱೆವ ಕೆಯ್ಯ ಪಳಂ ಕಡುರಯ್ಯಮಾದತೋ
ಳೆರಡಱ ಬಿಲ್ಲ ಕೋಲ ಪೊಸದೇಸೆ ವಿಳಾಸಮನಾಂತಯಕ್ಷಿ ವಿ
ಜರರುಚಿ ಹಂಸವಾಹನೆ ಚತುರ್ಭುಜೆ ಶಾಸನದೇವಿಮದ್ವಚಃ
ಪರಿಣತಿಗೊಲ್ದನಂತಮತಿ ಮಾಡುಗದಂತ ಮತಿ ಪ್ರಕಾಶಮಂ

**ಅನಂತನಾಥ ಪುರಾಣ(೧–೯)**

ಹಂಸವಾಹನೆ, ಚತುರ್ಭುಜೆಯಾದ ಶಾಸನದೇವಿ ಮದ್ವಚಃ ಪರಿಣಿತ ಮತಿಯಾದ ನನಗೆ ಒಲಿದು ಅನಂತಮತಿಯ ಪ್ರಕಾಶವನ್ನು ದಯಪಾಲಿಸೆನುತ ಸರಸ್ವತಿಯನ್ನು ಸ್ತುತಿಸುತ್ತಾನೆ. ನಂತರ ಜನ್ನ ಕವಿಯು ಅನಂತನಾಥ ಪುರಾಣದ ಹನ್ನೊಂದನೆ ಪದ್ಯದಲ್ಲಿ ಜಿನಲಕ್ಷ್ಮಿಯನ್ನು ಕುರಿತು ಸ್ತುತಿಸುತ್ತಾನೆ. ಅನಂತ ಐಶ್ವರ್ಯವನ್ನು ನೀಡುವ ಲಕ್ಷ್ಮಿಯನ್ನು ವೈದಿಕ ಕವಿಗಳು ಸ್ತುತಿಸಿದಂತೆ, ಜನ್ನನು 'ಜಿನಲಕ್ಷ್ಷಿ' ಎಂಬ ಪದವನ್ನು ವಿಶೇಷವಾಗಿ ಬಳಸುತ್ತಾನೆ. ಇದು ಜೈನ ಸಂಪ್ರದಾಯದ ಪ್ರಕಾರ ಲಕ್ಷ್ಮಿಯನ್ನು 'ಜಿನಲಕ್ಷ್ಮಿ' ಎಂದು ಕರೆಯಲಾಗಿದೆ.

**ಜಿನಲಕ್ಷ್ಮಿ ಸ್ತುತಿ**

ಎನಗಾಲಂಬನಮಕ್ಕೆ ಮುಕ್ತಿಪದ ಪರ್ಯಂತಂಬರಂ ಜೈನ ಶಾ
ಸನಮಾನಂದಿತ ಪಾಕಶಾಸನ ಮುದಂಚತ್ಪುಣ್ಯ ಬಂಧಾದಿವ
ಸನ ಮೇನಃ ಪ್ರಕರ ಪ್ರಶಾಸನಮನಂತೈಶ್ವರ್ಯಲಕ್ಷ್ಮೀ ಸಮ
ಸನ ಮುಜ್ಜ್ರಂಬಿತ ನಿರ್ವೃತಿಪ್ರಿಯತಮಾನೇತ್ರಾಂಬುಜೋಲ್ಲಾಸ

**ಅನಂತನಾಥಪುರಾಣ(೧–೧೧)**

ಅನಂತ ಐಶ್ವರ್ಯ ಲಕ್ಷ್ಮಿಯನ್ನು ಸ್ತುತಿಸುವುದರ ಮೂಲಕ, ಲಕ್ಷ್ಮಿ ಸ್ತುತಿಯನ್ನು ಜೈನ ಸಂಪ್ರದಾಯದ ಮೂಲಕ ಮಾಡುತ್ತಾನೆ.

ನಡುಗನ್ನಡ ಕಾವ್ಯದ ಕವಿ ಕುಮಾರವ್ಯಾಸನು ತನ್ನ 'ಕರ್ಣಾಟ ಭಾರತ ಕಥಾಮಂಜರಿ'ಯಲ್ಲಿ ಇಷ್ಟದೇವತೆಯಾಗಿ ವಿಷ್ಣು(ವೀರನಾರಾಯಣ)ನನ್ನು ಸ್ತುತಿಸಿ ನಂತರ ಇತರ ದೇವತೆಗಳಾದ ಶಿವ, ಗಣೇಶ, ಶಾರದೆ, ಲಕ್ಷ್ಮಿ, ಗೌರಿ ಇತ್ಯಾದಿ ದೇವತೆಗಳನ್ನು ಸ್ತುತಿಸುತ್ತಾನೆ.

**ಲಕ್ಷ್ಮಿ ಸ್ತುತಿ**

ಶರಧಿಸುತೆ ಸನಕಾದಿ ವಂದಿತೆ
ಸುರನರರೋರಗ ಮಾತೆ ಸುಜನರ

ಪೊರೆವ ದಾತೆ ಸುರಾಗ್ರಗಣ್ಯಸುಮೌನಿ ವರಸ್ತುತ್ಯೆ
ಪರಮ ಕರುಣಾಸಿಂಧು ಪಾವನ
ಚರಿತೆ ಪದ್ಮಜ ಮುಖ್ಯ ಸಕಲಾ
ಮರ ಸುಪೂಜಿತೆ ಲಕ್ಷ್ಮಿಕೊಡುಗೆಮಗಧಿಕ ಸಂಪದವ

**ಕರ್ಣಾಟ ಭಾರತ ಕಥಾಮಂಜರಿ(೧-೯)**

ಕ್ಷೀರ ಸಾಗರದಲ್ಲಿ ಜನಿಸಿದವಳೆ, ಸನಕ ಇತ್ಯಾದಿ ಮುನಿಗಳಿಂದ ವಂದಿಸಿಕೊಳ್ಳುವವಳೆ ಸುರ-ನರ-ಉರಗರ ತಾಯಿಯೆ ಸಜ್ಜನರನ್ನು ರಕ್ಷಿಸುವವಳೇ, ಪರಮ ಕರುಣಾಮಯಿಯೇ ಪಾವನ ಚರಿತಳೇ ನಮಗೆ ಅಧಿಕ ಸಂಪತ್ತನ್ನು ದಯಪಾಲಿಸು.

**ಶಿವಸ್ತುತಿ**

ಶರಣ ಸಂಗ ವ್ಯಸನ ಭುಜಗಾ
ಭರಣ ನಮರ ಕಿರೀಟ ಮಂಡಿತ
ಚರಣ ಚಾರು ಚರಿತ್ರ ನಿರುಪಮ ಬಾಳಶಿಖಿ ನೇತ್ರ
ಕರಣ ನಿರ್ಮಲ ಭಜಕರಘ ಸಂ
ಹರಣ ದಂತಿ ಚಮೂರು ಚರ್ಮಾಂ
ಬರನೆ ಸಲಹುಗೆ ಭಕುತ ಜನರನು ಪಾರ್ವತಿ ರಮಣ

**ಕರ್ಣಾಟ ಭಾರತ ಕಥಾಮಂಜರಿ (೧.೨)**

ಶರಣರ ಸಹವಾಸದಲ್ಲಿ ಆಸಕ್ತನಾದವನೆ, ಸರ್ಪಗಳನ್ನು ಆಭರಣಗಳನ್ನಾಗಿ ಧರಿಸಿದವನೇ, ದೇವತೆಗಳ ಕಿರೀಟಗಳಿಂದ ಅಲಂಕೃತವಾದ ಶಿರಗಳಿಂದ ವಂದಿಸಿಕೊಳ್ಳುವವನೆ, ಸುಂದರವಾದ ಚರಿತ್ರೆಯನ್ನುಳ್ಳವನೆ, ಹಣೆಯಲ್ಲಿ ಕಣ್ಣುಳ್ಳವನೆ, ಇಂದ್ರಿಯ ಲೋಭವನ್ನು ತೊರೆದು ಕೀರ್ತಿಸುವವರ ಪಾಪ ಪರಿಹಾರಕನೆ, ಆನೆಯ ಮತ್ತು ಹುಲಿಯ ಚರ್ಮವನ್ನು ಧರಿಸಿದವನೇ, ಪಾರ್ವತಿ ಪತಿಯೇ, ಶಿವನೇ ಭಕ್ತರನ್ನು ಪ್ರೀತಿಯಿಂದ ಸಲಹು ಎಂದು ಕೋರಿಕೊಳ್ಳುವುದರ ಮೂಲಕ ಶಿವಸ್ತುತಿ ಮಾಡುತ್ತಾನೆ.

**ಗಣೇಶ ಸ್ತುತಿ**

ವರಮಣಿಗಳಿಂದೆಸೆವ ಮೌಳಿಯ
ಸರಸಿಜಾರಿಯ ಕಿರಣದೋಳಿಯ
ವಿರಚಿಸಿದ ಸಿಂಧೂರ ಭಾಳದಿ ಕುಣಿವ ಕುಂತಳದ

ಕರಿ ನಿಭಾಕೃತಿ ಯೆನಿಪ ವದನದ
ಕರದ ಪಾಶದ ಮೋದಕದ ವಿ
ಸ್ತರದ ಗಣಪತಿ ಮಾಡೆನಗೆ ನಿರ್ವಿಘ್ನದಾಯಕವ

**ಕರ್ಣಾಟ ಭಾರತ ಕಥಾಮಂಜರಿ(೧–೩)**

ಶ್ರೇಷ್ಠವಾದ ರತ್ನಗಳಿಂದ ಪ್ರಕಾಶಿಸುತ್ತಿರುವ ಚಂದ್ರಕಿರಣಗಳು ಸಾಲಿಟ್ಟಂತೆ ಸಿಂಧೂರವನ್ನು ಧರಿಸಿ ಹಣೆಯಲ್ಲಿ ಕೂದಲಿನ ಕುಚ್ಚುಗಳು ಕುಣಿಯುತ್ತಿರಲು, ಆನೆಯ ಮುಖವನ್ನು ಹೊಂದಿರುವ, ಕೈಯಲ್ಲಿ ಪಾಶ ಮತ್ತು ಮೋದಕವನ್ನು ಹಿಡಿದಿರುವ ಗಣಪತಿಯು, ನಮಗೆ ನಿರ್ವಿಘ್ನತೆಯನ್ನುಂಟು ಮಾಡಲಿ.

**ಗಣೇಶ ಸ್ತುತಿ**

ಗಜಮುಖನೆ ಮೆರೆವೇಕದಂತನೆ
ನಿಜಗುಣಾನ್ವಿತ ಪರಶುಧಾರನೆ
ರಜತಗಿರಿಗೊಡೆಯನ ಕುಮಾರನೆ ವಿದ್ಯಾವಾರಿದಿಯೇ
ಅಜನು ಹರಿರುದ್ರಾದಿಗಳು ನೆರೆ
ಭಜಿಸುತಿಹರನವರತ ನಿನ್ನನು
ತ್ರಿಜಗ ವಂದಿತ ಗಣಪ ಮಾಳ್ಪುದು ಮತಿಗೆ ಮಂಗಳವ

**ಕರ್ಣಾಟಭಾರತ ಕಥಾಮಂಜರಿ(೧–೪)**

ಗಜಮುಖನೇ ಮೆರೆಯುತ್ತಿರುವ ಏಕದಂತನೆ ಪರಶುವನ್ನು ಕೈಯಲ್ಲಿ ಹಿಡಿದವನೆ ಕೈಲಾಸದ ಒಡೆಯನಾದ ಪರಶಿವನ ಕುಮಾರನೆ, ವಿದ್ಯೆಗೆ ಅದಿಪತಿಯಾದ ವಿದ್ಯಾಸಾಗರನೆ, ಬ್ರಹ್ಮ, ವಿಷ್ಣು, ಮಹೇಶ್ವರರಿಂದ ವಂದಿಸಿಕೊಳ್ಳುವವನೆ, ಮೂರು ಲೋಕದ ಜನರಿಂದ ವಂದಿಸಿಕೊಳ್ಳುವ ಗಣಪತಿಯೇ, ನನ್ನ ಮತಿಗೆ ಮಂಗಳವನ್ನುಂಟು ಮಾಡು ಎಂದು ಗಣಪತಿಯನ್ನು ಎರಡು ಪದ್ಯಗಳಲ್ಲಿ ಸ್ತುತಿಸಿರುವನು. ಹಾಗೆಯೇ ವಿದ್ಯಾದೇವತೆಯಾದ ಸರಸ್ವತಿಯನ್ನು ಕೂಡ ಎರಡು ಪದ್ಯಗಳಲ್ಲಿ ಸ್ತುತಿಸುವನು.

**ಶಾರದಾ ಸ್ತುತಿ**

ವಾರಿಜಾಸನೆ ಸಕಲಶಾಸ್ತ್ರ ವಿ
ಚಾರದುದ್ಭವೆ ವಚನ ರಚನೋ
ದ್ಧಾರೆ ಶ್ರುತಿ ಪೌರಾಣದಾಗಮ ಸಿದ್ಧಿದಾಯಕಿಯೆ

ಶೌರಿ ಸುರಪತಿ ಸಕಲ ಮುನಿಜನ
ಸೂರಿಗಳಿಗನುಪಮದ ಯುಕುತಿಯೆ
ಶಾರದೆಯೆ ನರ್ತಿಸುಗೆ ನಲಿದೊಲಿದೆನ್ನ ಜಿಹ್ವೆಯಲಿ

**ಕರ್ಣಾಟ ಭಾರತ ಕಥಾಮಂಜರಿ(೧–೫)**

**ಶಾರದಾ ಸ್ತುತಿ**

ಆದಿ ನಾರಾಯಣಿ ಪರಾಯಣಿ
ನಾದಮಯೆ ಗಜಲಕ್ಷ್ಮಿ ಸತ್ವಗು
ಣಾದಿ ದೇವತೆ ಅಮರ ವಂದಿತ ಪಾದ ಪಂಕರುಹೆ
ವೇದ ಮಾತೆಯೆ ವಿಶ್ವತೋಮುಖೆ
ಯ್ಯೆದು ಭೂತಾಧಾರಿಯೆ ನಿಪೇ
ದ್ವಾದಶಾತ್ಮಜ್ಯೋತಿ ರೂಪಿಯೇ ನಾದೆ ಶಾರದೆಯೇ

**ಕರ್ಣಾಟ ಭಾರತ ಕಥಾಮಂಜರಿ(೧–೬)**

ಮೇಲಿನ ಐದು ಮತ್ತು ಆರನೆಯ ಪದ್ಯಗಳಲ್ಲಿ ಸರಸ್ವತಿಯನ್ನು ಸ್ತುತಿಸುತ್ತ, 'ತಾವರೆಯ ಪೀಠದಲ್ಲಿ ಕುಳಿತವಳೇ', ಸಕಲ ವೇದ ಶಾಸ್ತ್ರ ವಿಚಾರಗಳನ್ನು ತಿಳಿಸುವ ಸದ್ಗುರುಗಳ ಉಪದೇಶದಲ್ಲಿ ಉದ್ಭವವಾಗುವವಳೇ, ಶ್ರುತಿ ಪುರಾಣ ಆಗಮಾದಿಗಳನ್ನು ಬಲ್ಲವಳೇ, ಸಕಲ ಮುನಿಜನ ಸುರ ನರರಿಂದ ವಂದಿಸಿಕೊಳ್ಳುವವಳೇ, ಅಸಮಾನ ಜ್ಞಾನದಾಯಕಿಯೇ, ಸರಸ್ವತಿಯೇ, ನಲಿದೊಲಿದೆನ್ನ ನಾಲಗೆಯಲಿ ನರ್ತಿಸು ಎಂದಿರುವನು.

**ಗೌರಿ ಸ್ತುತಿ**

ಗಜಮುಖನ ವರಮಾತೆ ಗೌರಿಯೇ
ತ್ರಿಜಗದರ್ಚಿತೆ ಚಾರು ಚರಣಾಂ
ಬುಜೆಯೆ ಪಾವನ ಮೂರ್ತಿ ಪದ್ಮಜ ಮುಖ ಸುರಪೂಜ್ಯೆ
ಭಜಕರಗ ಸಂಹರಣೆ ಸುಜನ
ವ್ರಜ ಸುಸೇವಿತೆ ಮಹಿಷಮರ್ದಿನಿ
ಬುಜಗ ಭೂಷಣನರಸಿ ಕೊಡು ಕಾರುಣ್ಯದಲಿ ಮತಿಯ

**ಕರ್ಣಾಟ ಭಾರತ ಕಥಾಮಂಜರಿ(೧–೧೦)**

ಗಣೇಶನ ತಾಯಿ ಗೌರಿಯೇ, ಮೂರು ಲೋಕದ ಜನರಿಂದ ವಂದಿಸಿಕೊಳ್ಳುವವಳೆ, ಸುಂದರವಾದ ಪಾದಗಳನ್ನುಳ್ಳವಳೇ, ಪರಮ ಪಾವನ ಮೂರ್ತಿಯೇ, ಬ್ರಹ್ಮಾದಿ ದೇವತೆಗಳಿಂದ ಪೂಜಿಸಲ್ಪಡುವವಳೇ, ಭಕ್ತರ ಪಾಪವನ್ನು ನಿವಾರಿಸಿ ಸಜ್ಜನರಿಂದ ಸೇವೆಗೊಳ್ಳುವವಳೆ, ಮಹಿಷಾಸುರ ಮರ್ದಿನಿಯೇ, ಶಿವನ ರಾಣಿಯೇ, ಕರುಣೆಯಿಂದ ಮತಿಯ ನೀಡು ಎಂದಿರುವನು. ಹೀಗೆ ಕವಿ ಕುಮಾರವ್ಯಾಸನು ಇತರ ದೇವತೆಗಳಲ್ಲಿ ಹಲವು ದೇವತೆಗಳ ಸ್ತುತಿಯನ್ನು ಮಾಡಿರುವನು.

ಶೈವರು ಶಿವನನ್ನು ಹೊರತುಪಡಿಸಿ ಬೇರೆ ದೇವತೆಗಳನ್ನು ಸ್ತುತಿಸಲಾರರು. ಆದರೆ ವೈಷ್ಣವ ಪಂಥದ ಕವಿಗಳು ವಿಷ್ಣುವಿನ ಸ್ತುತಿಯ ನಂತರ ಶೈವ ದೇವತೆಗಳನ್ನು ಸ್ತುತಿಸುತ್ತಾರೆ. ನಿದರ್ಶನಕ್ಕೆ ಶಂಕರ ಸ್ತುತಿ ಅಥವಾ ಶಿವ ಸ್ತುತಿ.

**ಶಿವಸ್ತುತಿ**

ಪಾವನ ತುಲಾಭರಣಮಂ ಮಾಡಿಕೊಂಡೆಸೆವ
ಪಾವನತರ ಸ್ವರೂಪಂ ನಾರದಾದಿ ಮುನಿ
ಪಾವತಪಾದ ಪಂಕೇರುಹದ್ವಂದ್ವ ನಿಂದು ಕಲಾವತಂಸರುಮೆಯ
ಭಾವನೆಯನೊಡಗೂಡಿಸುವ ಸಕಲ ಸುರರ ಸಂ
ಭಾವನೆಯ ಕೈಕೊಳ್ಳ ಲೋಕ ವಿಸ್ತರಣ ಪ್ರ
ಭಾವ ನಯನತ್ರಯಂ ದೇವ ಗಂಗಾಧರಂ ಬಿಡದೆ ಸಲಹುಗೆ ನಮ್ಮನು

**ಜೈಮಿನಿ ಭಾರತ**(೧.೨)

ಕವಿ ಲಕ್ಷ್ಮೀಶನು ಮೇಲಿನ ಪದ್ಯದಲ್ಲಿ ಶಿವಸ್ತುತಿಯನ್ನು ಮಾಡುವುದರೊಂದಿಗೆ, ಶಿವನು ಅನವರತ ನಮ್ಮನ್ನು ರಕ್ಷಿಸಲೆಂದು ಭಿನ್ನೈಸಿಕೊಳ್ಳುತ್ತಾನೆ.

**ವಿನಾಯಕ ಸ್ತುತಿ**

ಪ್ರಸ್ತುತ ದೊಳೊಗೆದ ಮುಂಬೆಳಗಮಲದಂತದಗ
ಭಸ್ತಿನವಪೂರ್ವ ಸಂಧ್ಯಾರುಣ ಬಾಳವಿ
ನ್ಯಸ್ತ ಸಿಂಧೂರ ಮಂಕುರಿಪ ಪೊಂಬಿಸಿಲೊಡನೆ ಮೂಡುವೆಳನೇಸರೆಸೆವ
ಮಸ್ತಕದ ಮಣಿಮಕುಟ ಮಾಗಲುದಯಾಚಲದ
ವಿಸ್ತಾರದಂತೆ ಭದ್ರಕೃತಿಯೊಳೊಪ್ಪುವಸ
ಮಸ್ತ ಸಿದ್ಧಿಪ್ರದಾಯಕ ವಿನಾಯಕ ಮಾಳ್ಪುದೆಮಗೆ ನಿರ್ವಿಘ್ನತೆಯನು

**ಜೈಮಿನಿ ಭಾರತ**(೧.೩)

ಈ ಪದ್ಯದಲ್ಲಿ ಕವಿ ಲಕ್ಷ್ಮೀಶನು ವಿದ್ಯಾದೇವತೆಯಾದ ಹಾಗೂ ವಿಘ್ನ ನಿವಾರಕನಾದ, ಸಿದ್ಧಿ ಪ್ರದಾಯಕನಾದ, ಗಣಪತಿಯು ತನ್ನ ಕಾವ್ಯಕ್ಕೆ ನಿರ್ವಿಘ್ನತೆಯನ್ನುಂಟು ಮಾಡಲೆಂದು ಸ್ತುತಿಸುವನು.

**ಸರಸ್ವತಿ ಸ್ತುತಿ**

ಭೂವ್ಯೋಮ ಪಾತಾಳ ಲೋಕಂಗಳಲಿ ಸಂ
ಭಾವ್ಯರೆಂದಿನಿಸಿಕೊಳ್ವಖಿಳ ದೇವರ್ಕಳಿಂ
ಸೇವ್ಯನಾದ ಜನ ಪಟ್ಟದರಾಣಿ ವರದೆ ಕಲ್ಯಾಣಿ ಫಣಿವೇಣಿ ವಾಣಿ
ಕಾವ್ಯಮಿದು ಭುವನದೊಳ್ ಸಕಲ ಜನರಿಂದೆ ಸು
ಶ್ರಾವ್ಯಮಪ್ಪಂತೆನ್ನ ಮದನಾಬ್ಜದಲ್ಲಿ ನೀ
ನೇ ವ್ಯಾಪಿಸ್ಥಿರ ಮಲಸುಮತಿಯಂ ತಾಯೆನಗೆ ನಗೆಗೂಡಿ ನೋಡಿ

**ಜೈಮಿನಿ ಭಾರತ**(೧-೪)

ಮೂರು ಲೋಕದ ಜನರಿಂದ ವಂದಿಸಿಕೊಳ್ಳುವ ವಾಗ್ದೇವಿಯನ್ನು ಹಲವು ಉಪಮೆಗಳಿಂದ ವರ್ಣಿಸುತ್ತಾನೆ. ಭೂಲೋಕ, ದೇವಲೋಕ, ಪಾತಾಳದಲ್ಲಿರುವ ಅಖಿಲ ದೇವತೆಗಳಿಂದ ಸೇವಿಸಿಕೊಳ್ಳುವ ಬ್ರಹ್ಮನ ಪಟ್ಟದ ರಾಣಿಯೂ, ನಾಗವೇಣಿಯೂ ಆದ ವಾಣಿಯು ಈ ಕಾವ್ಯ ಜಗತ್ತಿನಲ್ಲಿ ಎಲ್ಲರಿಗೂ ಸುಶ್ರಾವ್ಯವೆನಿಸುವಂತೆ, ನನ್ನ ಮುಖಕಮಲದಲ್ಲಿ ಮೂಡಿಬರಲೆಂದು ನಗುಮುಖದಿಂದ ಹಾರೈಸಿ ಸುಮತಿಯನ್ನು ದಯಪಾಲಿಸು ಎನ್ನುವನು.

ಕವಿ ಷಡಕ್ಷರದೇವನು ಶಬರ ಶಂಕರ ವಿಳಾಸ ಮತ್ತು ರಾಜಶೇಖರ ವಿಳಾಸ ಕೃತಿಯಲ್ಲಿ ಶಿವಸ್ತುತಿ ಮತ್ತು ಪಾರ್ವತಿಯ ಸ್ತುತಿಗಳನ್ನು ಮಾಡಿ ನಂತರ ವೃಷಭಸ್ತುತಿಯನ್ನು ಮಾಡಿರುವನು. ಅಲ್ಲದೆ ವೀರಭದ್ರನ ಸ್ತುತಿ, ಭೃಂಗಿನಾಥನ ಸ್ತುತಿಯನ್ನು ಮಾಡುವನು.

**ಸರಸ್ವತಿ**

ಕಬ್ಬಿಗರೋದು ಗಬ್ಬವ ಹಾಡಗಬ್ಬವ
ಕಬ್ಬದೊಳೊರೆವರಿದೆರಡು
ಕಬ್ಬಿನಂತಿರಬೇಕು ಬಿದಿರಂತೆ ರಚಿಸಲೇ
ಕಬ್ಬೆ ಹೇಳಲೆ ಸರಸ್ವತಿಯೆ

**ಭರತೇಶ ವೈಭವ**(೧.೩)

ಕವಿ ರತ್ನಾಕರನು ತನ್ನ 'ಭರತೇಶ ವೈಭವ ಭೋಗ ವಿಜಯ'ದಲ್ಲಿ ಸರಸ್ವತಿಯನ್ನು ಸ್ತುತಿಸುವುದರೊಂದಿಗೆ, ಕನ್ನಡ ಸಾಹಿತ್ಯದಲ್ಲಿ ಬರುವ ಓದುಗಬ್ಬ ಮತ್ತು ಹಾಡುಗಬ್ಬಗಳೆರಡು ಕಬ್ಬಿನಂತೆ ರಸಭರಿತವಾಗಿರಲಿ, ಬದಲಿಗೆ ಬಿದಿರಂತೆ ರಚಿಸಲಾರೆ ಎಂದು ಸರಸ್ವತಿಗೆ ಹೇಳುವನು. ಭರತೇಶ ವೈಭವದಲ್ಲಿ ಎರಡು ಜಿನಸ್ತುತಿಗಳು ಒಂದು ಸರಸ್ವತಿ ಸ್ತುತಿ ಕಂಡುಬರುತ್ತದೆ.

ಕನ್ನಡ ಸಾಹಿತ್ಯದಲ್ಲಿ ವಚನ ಸಾಹಿತ್ಯದ ತರುವಾಯ ಭಕ್ತಿಪಂಥವೊಂದು ಹುಟ್ಟಿಕೊಂಡಿತು. ಶಿವಶರಣ ವಚನಗಳಷ್ಟೆ ಪ್ರಭಾವಶಾಲಿಯಾದ ದೇವರ ಸ್ತುತಿಗಳು ಕಾಣಿಸಿಕೊಂಡವು. ಅದೇ ಕೀರ್ತನ ಸಾಹಿತ್ಯ ನರಹರಿ ತೀರ್ಥರಿಂದಲೇ ಈ ಸಾಹಿತ್ಯ ಪ್ರಾರಂಭವಾದರು ನಂತರ ಬಂದ ವ್ಯಾಸರಾಯರು ಪುರಂದರದಾಸರು, ಕನಕದಾಸರು, ಗೋಪಾಲದಾಸರು, ಮಹಿಪತಿದಾಸರು ವಾದಿರಾಜರು ಮುಂತಾದ ಕೀರ್ತನಕಾರರು ಕೀರ್ತನೆಗಳನ್ನು ರಚಿಸಿ ಪ್ರಸಿದ್ಧರಾದರು. ಅವರಲ್ಲಿ ಪುರಂದರದಾಸರು, ಕನಕದಾಸರು, ದಾಸ ಸಾಹಿತ್ಯದ ಅಶ್ವನಿ ದೇವತೆಗಳೆನಿಸಿಕೊಂಡರು. ಅವರಲ್ಲಿ ಬರೀ ಕೀರ್ತನಗಳನ್ನಷ್ಟೆ ಅಲ್ಲದೆ ಹಲವು ಕೃತಿಗಳನ್ನು ರಚಿಸಿ ಪ್ರಸಿದ್ಧರಾದವರು ಕನಕದಾಸರು. ಇವರು ಕೀರ್ತನಕಾರರಷ್ಟೇ ಅಲ್ಲ ಕವಿಗಳೂ ಕೂಡ. ಮೋಹನ ತರಂಗಿಣಿ, ನಳ ಚರಿತ್ರೆ, ಹರಿಭಕ್ತಿಸಾರ ಮತ್ತು ರಾಮಧಾನ್ಯ ಚರಿತ್ರೆ ಇತ್ಯಾದಿ ಕೃತಿಗಳಲ್ಲಿ ಕಾಗಿನೆಲೆಯ ಆದಿಕೇಶವನನ್ನು ಸ್ತುತಿಸುವುದರೊಂದಿಗೆ ಇತರ ದೇವತೆಗಳನ್ನೂ ಸ್ತುತಿಸುತ್ತಾರೆ.

**ಗಣೇಶ ಸ್ತುತಿ**

ಕರಿವದನ ಹೇರಂಬ ಲಂಬೋ
ದರ ಗಣಾದಿಪ ಮೋದಕಪ್ರಿಯ
ಪರಶು ಪಾಶಾಂಕುಶಕರಾಂಕಿತದಿಂದ ರಂಜಿಸುವ
ಸುರ-ನರರೋರಗನಮಿತ ಗೌರೀ
ವರಕುಮಾರ ವಿದ್ಯೆವಾರಿಧಿ
ವರದ ಗಣಪತಿ ಪಾಲಿಸೆನ್ನಯ ಮತಿಗೆ ಮಂಗಳವ

**ನಳಚರಿತ್ರೆ**(೧-೪)

ಗಜಮುಖನೆ, ದೊಡ್ಡ ಹೊಟ್ಟೆಯನ್ನು ಹೊಂದಿದವನೆ, ಗಣಾದಿಪನೆ ಮೋದಕ ಪ್ರಿಯನೆ, ಕೈಯಲ್ಲಿ ಕೊಡಲಿ ಹಾಗೂ ಪಾಶವನ್ನು ಹಿಡಿದವನೆ, ಸುರರು-ನರರು ಹಾಗೂ ಹಾವುಗಳಿಂದ ವಂದಿಸಿಕೊಳ್ಳುವವನೆ, ಪಾರ್ವತಿಯ ಶ್ರೇಷ್ಠ ಕುವರನೆ, ವಿದ್ಯಾವರವನ್ನು ಕೊಡುವವನೆ ಗಣಪತಿಯೇ ನನ್ನ ಮತಿಗೆ ಮಂಗಳವನ್ನುಂಟು ಮಾಡು.

ಸರ್ವೆ ಸಾಮಾನ್ಯವಾಗಿ ಎಲ್ಲ ಕವಿಗಳೂ ಗಣೇಶನನ್ನು ನಾಂದಿಪದ್ಯಗಳಲ್ಲಿ ಸ್ತುತಿಸುತ್ತಾರೆ. ಶಿವಸ್ತುತಿ ಇರದಿದ್ದರೂ ಗಣೇಶ ಸ್ತುತಿ ಇದ್ದೇ ಇರುತ್ತದೆ. ಕಾರಣ ಗಣಪತಿಯು ವಿಘ್ನ ನಿವಾರಕ ಹಾಗೂ ಮಂಗಳದಾಯಕ. ಹಾಗಾಗಿ ಕನಕದಾಸರು ತಮ್ಮ 'ನಳಚರಿತ್ರೆ'ಯಲ್ಲಿ ಸರ್ವಮಂಗಳಗಳ ಒಡೆಯನಾದ ಗಣಪತಿಯನ್ನು ಸ್ತುತಿಸಲು ಮರೆತಿಲ್ಲ.

**ಸರಸ್ವತಿ ಸ್ತುತಿ**

ನಾರಿ ನಳಿನದಳಾಕ್ಷಿವರ ಜಂ
ಭಾರಿನುತೆ ಚತುರಾನನ ಪ್ರಿಯೆ
ಭೂರಿ ಶುಭಗುಣಭರಿತೆ ಭಕ್ತಾಶ್ರಿತಜನಾಧಾರೆ
ನೀರೆ ನಿಗಮ ವಿಚಾರೆ ಘನಶ್ರುಂ
ಗಾರೆ ಭಕ್ತರಿಗೊರವ ಕೊಡುವ ಉ
ದಾರೆ ಶಾರದೆ ನಲಿದೊಲಿದು ನೆಲಸೆನ್ನ ಜಿಹ್ವೆಯಲಿ

**ನಳಚರಿತ್ರೆ**(೧-೫)

ಕಮಲದ ಎಸಳಿನಂತೆ ಕಣ್ಣುಳ್ಳವಳೆ, ಜಂಬಾಸುರನೆಂಬ ರಕ್ಕಸನನ್ನು ಕೊಂದವಳೆ, ಬ್ರಹ್ಮನ ಅರಸಿಯೆ, ಶುಭಗುಣಗಳ ಸಂಪನ್ನೆ, ಭಕ್ತರ ಆಶ್ರಯದಾತೆ ವೇದ ವಿಚಾರವನ್ನು ಬಲ್ಲ ಉದಾರಿಯೇ, ಶಾರದೆಯೇ, ನಲಿದು-ಒಲಿದು ಬಂದು ನನ್ನ ನಾಲಗೆಯಲ್ಲಿ ನೆಲೆಸೆಂದು ಕೋರಿಕೊಳ್ಳುವನು.

ಕನಕದಾಸರು ತಮ್ಮ ಇನ್ನೊಂದು ಕೃತಿಯಾದ ಮೋಹನ ತರಂಗಿಣಿಯಲ್ಲೂ ಆದಿಕೇಶವನ ಸ್ತುತಿಯನ್ನು, ಲಕ್ಷ್ಮಿಯ ಸ್ತುತಿಯನ್ನು ಮಾಡಿದ ನಂತರ, ಇತರ ದೇವತೆಗಳಾದ ಕಾಶಿಯ ವಿಶ್ವನಾಥ, ಸರಸ್ವತಿ, ಪಾರ್ವತಿ, ಗಣಪತಿ, ಗರುಡ ಹಾಗೂ ಆದಿಶೇಷನ ಸ್ತುತಿಯನ್ನು ಮಾಡುವರು.

**ವಿಶ್ವನಾಥ ಸ್ತುತಿ**

ಭೂತಲದೊಲು ರಾಮನಾಮದ ಸುಜನ
ವ್ರಾತಕ್ಕೆ ವಾರಣಾಸಿಯಲಿ
ನೀ ತಪ್ಪದುಸುರುವ ಗುರುಕಾಶಿಯ ವಿಶ್ವ
ನಾಥ ಕುಡೆಮಗೆ ಸನ್ಮತಿಯ

**ಮೋಹನ ತರಂಗಿಣಿ**(೧-೮)

ಭೂಮಿಯ ಮೇಲಿನ ಭಕ್ತರಿಗಾಗಿ ಕಾಶಿಯಲಿ ತಪ್ಪದೆ ರಾಮನಾಮವನ್ನು ಹೇಳುವ ಕಾಶಿಯ ವಿಶ್ವನಾಥ ಗುರುವೆ ನನಗೆ ಸದ್ಬುದ್ಧಿಯನು ದಯಪಾಲಿಸು.

**ಸರಸ್ವತಿಯ ಸ್ತುತಿ ಹಾಗೂ ಬ್ರಹ್ಮನ ಸ್ತುತಿ**

ನಿಮ್ಮಯ ಪಿತ ಕೃಷ್ಣರಾಯನ ಮಹಿಮೆಯ
ಹಮ್ಮನಜೆದು ಕೀರ್ತಿಪೊಡೆ
ನಮ್ಮಳವಲ್ಲ ಶಾರದೆಗೂಡಿ ಚತುರಾಸ್ಯ
ಬೊಮ್ಮಬಾಯೆನ್ನೆದೆವರೆಗೆ

**ಮೋಹನ ತರಂಗಿಣಿ**(೧-೯)

**ಸರಸ್ವತಿ ಸ್ತುತಿ**

ಸಾವಿರ ಸಂತಾನವಡೆದಳ್ಗೆ ಮಮಕಾರ
ತೀವಿಹುದಬಲನ ಮೇಲೆ
ಕೋವಿದೆ ಪೆರ್ಮಕ್ಕಳ ಬಿಟ್ಟು ಸಲೆ ವಾ
ಗ್ದೇವಿ ಯನ್ನೊಳಗಿರು ತಾಯೆ

**ಮೋಹನತರಂಗಿಣಿ**(೧-೧೧)

ಮೊದಲ ಪದ್ಯದಲ್ಲಿ ಬ್ರಹ್ಮನಿಗೆ ಶಾರದೆಯ ಜೊತೆಗೂಡಿ, ಎನ್ನೆದೆಯವರೆಗೆ ಬಾ ಎಂದು ಆಹ್ವಾನಿಸಿದರೆ, ನಂತರದ ಸರಸ್ವತಿ ಸ್ತುತಿಯಲ್ಲಿ ಸಾವಿರ ಮಕ್ಕಳನ್ನು ಪಡೆದ ತಾಯಿ ಯಾದರೂ ದುರ್ಬಲ ಮಗುವಿನಲ್ಲಿ ಹೆಚ್ಚು ಪ್ರೀತಿಯಿರುತ್ತದೆ. ಆದ್ದರಿಂದ ನಿನ್ನ ಹಿರಿಯ ಮಕ್ಕಳಾದ ಮಹಾಕವಿಗಳನ್ನು ಬಿಟ್ಟು ನನ್ನಲ್ಲಿಗೆ ಬಂದು ವಾಸವಾಗೆಂದು ತಾಯಿ ಸರಸ್ವತಿಯಲ್ಲಿ ವಿನಂತಿಸಿಕೊಂಡಿದ್ದಾರೆ. ತಾನು ದುರ್ಬಲ ಮಗುವೆಂದು ಕವಿ ಹೇಳಿಕೊಂಡ ವಿನಮ್ರತೆ, ಸರಸ್ವತಿಯನ್ನು ಬರಮಾಡಿಕೊಳ್ಳುವ ಕನಕದಾಸರ ಸ್ತುತಿ ವಿನೂತನವಾಗಿದೆ.

**ಪಾರ್ವತಿ ಸ್ತುತಿ**

ಖ್ಯಾತ ವೇದಗಮಾತೀತೆ ಶರ್ವನ ಮನಃ
ಪ್ರೀತೆ ಷಣ್ಮುಖ ವಿನಾಯಕರ
ಮಾತೆ ದನುಜಕುಲಭೀತೆ ತುಹಿನಗಿರಿ
ಜಾತೆ ಕೊಡೆನಗೆ ಸನ್ಮತಿಯ

**ಮೋಹನ ತರಂಗಿಣಿ**(೧-೧೦)

ಖ್ಯಾತವಾದ ವೇದಾಗಮಗಳಿಗೆ ಮೀರಿದವಳೂ, ಪರಮೇಶ್ವರನ ಆತ್ಮ ಸಂಗಾತಿಯೂ, ಷಣ್ಮುಖ ಗಣಪತಿಯರ ಜನನಿಯೂ, ದಾನವರಿಗೆ ಭಯಂಕರಳೂ, ಹಿಮರಾಜನ ಮಗಳೂ ಆದ ಪಾರ್ವತಿಯೇ ನನಗೆ ಸದ್ಬುದ್ಧಿಯನ್ನು ಕೊಡು ಎಂದಿರುವನು.

**ವಿನಾಯಕ ಸ್ತುತಿ**

ಕಾಯಕವಿದು ನಿನ್ನದು ಕೇಳು ನಿರ್ವಿಘ್ನ
ದಾಯಕ ಎನಗೆ ಸಮ್ಮತಿಯ
ಜೀಯ ಕಾರುಣ್ಯದಿ ಕೊಡು ಪೊಂಬಳದ ವಿ
ನಾಯಕ ವಿಶ್ವಾವಲಂಬ

**ಮೋಹನ ತರಂಗಿಣಿ(೧.೧೨)**

ವಿಶ್ವಾಧಾರಿಯಾದ ಹೊಂಬಳದ ವಿನಾಯಕನೇ ಈ ಕಾವ್ಯ ರಚನೆಯು ನಿನ್ನದೆ ಕಾರ್ಯವಾಗಿದೆ. ಆದ್ದರಿಂದ ಒಡೆಯನಾದ ನೀನು ಕರುಣೆಯಿಂದ ಜ್ಞಾನವನ್ನುಂಟು ಮಾಡು ಎಂದಿರುವನು. ಕನಕದಾಸರು ಸರಸ್ವತಿ ಸ್ತುತಿಯಲ್ಲಿ ತಾವು ದುರ್ಬಲ ಮಗುವಿನಂತೆ ತಾಯಿಯಾದ ಸರಸ್ವತಿ ಪಂಡಿತರನ್ನು ತೊರೆದು ತಮ್ಮ ಮತಿಯಲ್ಲಿ ನೆಲೆಸಲೆಂದು ಬಯಸಿದರೆ, ಗಣೇಶ ಸ್ತುತಿಯಲ್ಲಿ ಹೊಂಬಳದ ಗಣಪತಿಯನ್ನು ಸ್ತುತಿಸುತ್ತ ಆ ಗಣೇಶನು ನನಗೆ ಸನ್ಮತಿಯನ್ನು ದಯಪಾಲಿಸಲಿ ಎನ್ನುವರು. ಇದು ಒಬ್ಬ ಕವಿಯ ವಿನಯ ಮತ್ತು ವಿಧೇಯತೆಯನ್ನು ತೋರಿಸುತ್ತದೆ. ಕುಮಾರವ್ಯಾಸನ 'ವೀರ ನಾರಾಯಣನೇ ಕವಿ ಲಿಪಿಕಾರ ಕುಮಾರವ್ಯಾಸ' ಎಂಬ ನುಡಿಯು ಸಹ ಕವಿಯ ಸ್ವಭಾವ ಚಿತ್ರಣವಾಗಿದೆ. ನಾಂದಿ ಪದ್ಯಗಳು ಕವಿಗಳ ಸ್ವಭಾವ, ಅವರ ಕಾವ್ಯಗುಣ ಇತ್ಯಾದಿ ವಿಷಯಗಳನ್ನೊಳಗೊಂಡಿವೆ.

**ಗರುಡ ಸ್ತುತಿ**

ಅಗಣಿತ ಲೋಕಾದಿಲೋಕಂಗಳುದರದಿ
ಸೊಗಯಿಪ ನಾರಾಯಣನ
ಹೆಗಲೊಳು ಹೊತ್ತು ಖೊಚರದೆ ಸಂಚರಿಸುವ
ಖಗರಾಜ ಕರುಣಿಪುದೆಮಗೆ

**ಮೋಹನ ತರಂಗಿಣಿ(೧.೧೩)**

ಅಸಂಖ್ಯಾತ ಲೋಕಗಳು ಗರ್ಭದಲ್ಲಿ ಶೋಭಿಸುವಂತಹ ನಾರಾಯಣನನ್ನು ಹೆಗಲ ಮೇಲೆ ಹೊತ್ತು, ಆಕಾಶದಲ್ಲಿ ಸಂಚರಿಸುವ ಗರುಡದೇವನೆ, ನಮಗೆ ದಾರಿ ತೋರಬೇಕು.

ಕವಿಗಳು ದೇವತೆಗಳನ್ನು ಸ್ತುತಿಸುವಾಗ ಕೇವಲ ಶಿವ, ಗಣಪತಿ, ಲಕ್ಷ್ಮಿ, ಸರಸ್ವತಿ ಇತ್ಯಾದಿ ದೇವತೆಗಳನ್ನು ಮಾತ್ರವಲ್ಲದೆ ಅವರ ವಾಹನಗಳಾದ ಗರುಡ, ನಂದಿ, ಹಂಸ, ಮೂಷಕ ಇತ್ಯಾದಿಗಳನ್ನು ನಾಂದಿ ಪದ್ಯಗಳಲ್ಲಿ ಸ್ಮರಿಸುವುದು ನಾಂದಿಪದ್ಯಗಳ ಒಂದು ವಿಶೇಷ ಲಕ್ಷಣವಾಗಿದೆ.

**ಆದಿಶೇಷನ ಸ್ತುತಿ**

ವರದುಗ್ಧಾಬ್ಧಿಯ ಮಥನದಿಂ ತುಸುಮಾತ್ರ
ಗರಳವ ಕರೆದಾಕ್ಷಣದಿ
ಸುರಮುಖ್ಯರ ಬೀತಿ ಪಡಿಸಿದ ಧರಣೀ
ಧರ ಪಣಿರಾಜ ರಕ್ಷಿಪುದು

**ಮೋಹನ ತರಂಗಿಣಿ**(೧.೧೪)

ಕ್ಷೀರಸಾಗರದ ಮಥನ ಕಾಲಕ್ಕೆ ಮಾತ್ರ ವಿಷವನ್ನು ಹೊಮ್ಮಿಸಿ, ಕೂಡಲೇ ದೇವಾದಿಗಳನ್ನು ಭೀತಿಪಡಿಸಿದ, ಭೂಮಿಯನ್ನು ಹೊತ್ತ ಆದಿಶೇಷನೇ ರಕ್ಷಿಸು. ಈ ರೀತಿ ಇತರ ದೇವತೆಗಳನ್ನು ಸ್ತುತಿಸುವುದಲ್ಲದೆ, ಇತರ ದೇವತೆಗಳನ್ನು ಸ್ತುತಿಸುವ ಒಂದು ಪದ್ಯವೇ ಮೋಹನ ತರಂಗಿಣಿಯಲ್ಲಿದೆ.

**ಇತರ ದೇವತಾ ಸ್ತುತಿ**

ಸುರಪತಿ ಶಿಖಿಕಾಲ ನಿಋುತಿ ವರುಣ ವಾಯು
ಹರಸಖನೀ ಶಾನ ಮುಖ್ಯ
ವರಮನುಮುನಿಜನರುಗಳೆನ್ನ ಚಿತ್ತಕೆ
ಪರಮನುಮುನಿಜನರುಗಳೆನ್ನ ಚಿತ್ತಕೆ
ಪರಮ ಸಂತಸವ ಪಾಲಿಪುದು

**ಮೋಹನ ತರಂಗಿಣಿ**(೧.೧೫)

ಇಂದ್ರ, ಅಗ್ನಿ, ಯಮ, ವರುಣ, ವಾಯು, ಕುಬೇರ ಮೊದಲಾದ ಪ್ರಮುಖ ಮನು-ಮುನಿಗಳು ನನ್ನ ಆತ್ಮಕ್ಕೆ ಅಪಾರ ಸಂತೋಷವನ್ನುಂಟು ಮಾಡಲಿ ಎನ್ನುವುದರ ಮೂಲಕ ಇತರ ದೇವತೆಗಳು ನನ್ನ ಮನಸ್ಸಿನಲ್ಲಿ ನೆಲೆಸಲಿ ಎನ್ನುವುದು ಕವಿಯ ಬಯಕೆಯಾಗಿದೆ. ಹೀಗೆ ಕನಕದಾಸರು ಸುಮಾರು ಹತ್ತು ಹಲವು ಪದ್ಯಗಳ ವ್ಯಾಪ್ತಿಯಲ್ಲಿ ಇತರ ದೇವತೆಗಳನ್ನು ಸ್ಮರಿಸುತ್ತಾರೆ.

ಕನ್ನಡ ಕಾವ್ಯಗಳಲ್ಲಿ ಬರುವ ಪೀಠಿಕಾ ಪದ್ಯಗಳಲ್ಲಿ ದೇವತಾ ಸ್ತುತಿ ಮಾಡುವಾಗ ಕವಿಗಳು ಸೌಮ್ಯ ದೇವತೆಗಳಾದ ಲಕ್ಷ್ಮಿ, ಸರಸ್ವತಿ, ವಿಷ್ಣು, ಬ್ರಹ್ಮ, ಮಹೇಶ್ವರ ಇತ್ಯಾದಿ ದೇವತೆಗಳನ್ನು ಸ್ಮರಿಸುತ್ತಾರೆ. ಆದರೆ ಉಗ್ರ ದೇವತೆಗಳಾದ ಕಾಳಿ, ಚಂಡಿಕೆ, ದುರ್ಗೆ, ಚಾಮುಂಡಿ, ವೀರಭದ್ರ, ಕಾಲರುದ್ರ ಮುಂತಾದ ದೇವತೆಗಳ ಸ್ತುತಿ ವಿರಳವಾಗಿದೆ. ನಾಗವರ್ಮನ ಛಂದೋಂಬುದಿಯಲ್ಲಿ ದುರ್ಗಾಸ್ತುತಿಯ ಪದ್ಯವಿದೆ.(ಪದ್ಯ ೧.೪) ರನ್ನನ ಗದಾಯುದ್ಧದಲ್ಲಿ ಚಾಮುಂಡಿಸ್ತುತಿ(೧.೫) ಮಾಡಲಾಗಿದೆ. ಚನ್ನಬಸವ ಪುರಾಣ ವೀರಭದ್ರನ ಸ್ತುತಿ(೧.೯) ಮಾಡಲಾಗಿದೆ. ಅಂದರೆ ಸೌಮ್ಯದೇವತೆಗಳಿಗಿಂತ ಉಗ್ರದೇವತೆಗಳ ಸ್ತುತಿ ಕನ್ನಡ ಕಾವ್ಯದ ನಾಂದಿಪದ್ಯಗಳಲ್ಲಿ ವಿರಳವೆಂದೇ ಹೇಳಬಹುದು. ಬ್ರಹ್ಮ, ವಿಷ್ಣು, ಮಹೇಶ್ವರ ಈ ತ್ರಿಮೂರ್ತಿಗಳ ಸ್ತುತಿಯನ್ನು ಮಾಡುವುದು ಸಾಮಾನ್ಯವಾಗಿದೆ. ಹಾಗೆಯೇ ಜಿನಸ್ತುತಿಯನ್ನು ಮಾಡುವುದು ಜೈನಕವಿಗಳ ಪ್ರಮುಖ ವಿಶಿಷ್ಟತೆಯಾಗಿದೆ ಹಾಗೂ ವಾಗ್ದೇವಿಯಾದ ಸರಸ್ವತಿಯನ್ನು ನೆನೆಯದ ಕವಿಗಳಿಲ್ಲ. ಏಕೆಂದರೆ ಅವಳು ವಿದ್ಯಾದಿದೇವತೆ, ಅವಳಿಲ್ಲದೆ ಕಾವ್ಯವೇ ಸಾಗುವುದಿಲ್ಲ. ಬ್ರಹ್ಮನನ್ನು ಸ್ತುತಿಸಿ ಅವಳನ್ನು ತಮ್ಮ ಕಾವ್ಯಕ್ಕೆ ಅನಕೂಲೆಯಾಗಿರಲೆಂದು ಓಲೈಸಿಕೊಳ್ಳುವ ಕವಿಗಳು ಇದ್ದಾರೆ. ಕವಿಗಳಿಂದ ಕಾವ್ಯವನ್ನು ನುಡಿಸುವ ಕಾವ್ಯದ ದೇವತೆಯನ್ನು ಯಾರಾದರೂ ನೆನೆಯದಿರಲು ಸಾಧ್ಯವೇ? ವಾಣಿ–ವೀಣಾ–ಪಾಣಿ, ಬ್ರಹ್ಮನ ರಾಣಿಯಾದ ಸರಸ್ವತಿಯು ಬಂದು ತಮ್ಮ ಮುಖಕಮಲದಲ್ಲಿ ಶಾಶ್ವತವಾಗಿ ನೆಲಸಲಿ ಎಂದೇ ಎಲ್ಲ ಕವಿಗಳು ಶಾರದೆಯನ್ನು ಬರಮಾಡಿಕೊಳ್ಳುತ್ತಾರೆ. ಹಾಗೆಯೇ ವಿಘ್ನ ನಿವಾರಕನಾದ ವಿದ್ಯಾಗಣಪತಿಯನ್ನು ತಮ್ಮ ಕಾವ್ಯಕ್ಕೆ ಯಾವ ವಿಘ್ನಗಳನ್ನುಂಟು ಮಾಡದಿರಲಿ ಎನ್ನುವುದರ ಮೂಲಕ ಗಣೇಶನನ್ನು ಸ್ತುತಿಸುತ್ತಾರೆ. ಒಂದು ವೇಳೆ ಶಿವನನ್ನು ಸ್ತುತಿಸಲು ಮರೆತರು ಗಣಪತಿಯನ್ನು ಸ್ತುತಿಸಲು ಮರೆತಿಲ್ಲ. ಕೆಲವು ಕವಿಗಳು ನನ್ನ ಮತಿಗೆ ಮಂಗಳವನ್ನುಂಟು ಮಾಡು ಎಂದು ಸ್ತುತಿಸಿದರೆ, ಇನ್ನೂ ಕೆಲವರು ಕಾವ್ಯಕ್ಕೆ ನಿರ್ವಿಘ್ನತೆಯನ್ನುಂಟು ಮಾಡೆಂದು ವಿನಂತಿಸಿಕೊಳ್ಳುತ್ತಾರೆ.

ಹೀಗೆ ಕನ್ನಡ ಕಾವ್ಯಗಳಲ್ಲಿ ಹತ್ತು ಹಲವು ರೀತಿಯ ದೇವತಾ ಹಾಗೂ ಇತರ ದೇವತಾ ಸ್ತುತಿ ಪದ್ಯಗಳಿರುವುದು ಕಂಡುಬರುತ್ತದೆ.

**ಅಡಿಟಿಪ್ಪಣಿಗಳು**

೧. ಮಹದೇವಯ್ಯ ಟಿ.ಆರ್., **ನಾಂದಿ,** ಪು.೨೬

೨. ಅದೇ, ಪು.೨೬

೩. ಅದೇ, ಪು.೨೭

೪. ವರದಾಚಾರ್ಯ ಎ.ಆರ್.(ಸಂ), **ಜಗನ್ನಾಥ ವಿಜಯ,** ಪು.೨೦

೫. ಶಿವಮೂರ್ತಿಶಾಸ್ತ್ರಿ(ಸಂ), **ಜೈಮಿನಿ ಭಾರತ,** ಪು.೨೮

೬. ಮುಗಳಿ ರಂ.ಶ್ರೀ, **ಕನ್ನಡ ಸಾಹಿತ್ಯದಲ್ಲಿ ಸರಸ್ವತಿಯ ದರ್ಶನ,** ಪು.೨೫

ಅಧ್ಯಾಯ ಐದು

# ಚಾರಿತ್ರಿಕ ಅಂಶಗಳು

## ನಾಂದಿ ಪದ್ಯಗಳಲ್ಲಿ ನಿರೂಪಿತವಾದ ಕರ್ನಾಟಕ ಮತ್ತು ಕನ್ನಡ ಕವಿಗಳಿಗೆ ಸಂಬಂಧಿಸಿದ ಚಾರಿತ್ರಿಕ ಅಂಶಗಳು

ಕರ್ನಾಟಕದಲ್ಲಿ ಹತ್ತು ಹಲವು ರಾಜ ಮನೆತನಗಳು ವೈಭವದಿಂದ ಮೆರೆದು ಮಾಯವಾಗಿವೆ. ರಾಜರು ಅಥವಾ ಆಳರಸರು ತಮ್ಮ ಆಸ್ಥಾನದಲ್ಲಿ ಅನೇಕ ಪ್ರಸಿದ್ಧ ಹಾಗೂ ಪಂಡಿತ ಕವಿಗಳಿಗೆ ರಾಜಾಶ್ರಯವನ್ನು ನೀಡಿ ಅನೇಕ ಕಾವ್ಯ ರಚನೆಗೆ ಕಾರಣರಾಗಿರುವರು. ಅರಸರ ಪೋಷಣೆ ಮತ್ತು ಪ್ರೋತ್ಸಾಹವನ್ನು ಪಡೆದ ಕವಿಗಳು ತಮ್ಮ ಪ್ರೀತಿಯ ದೊರೆಗಳ ಗುಣ ಹಾಗೂ ಆದರ್ಶಗಳನ್ನು ಪ್ರಶಂಸಾರೂಪದಲ್ಲಿ ಕಾವ್ಯ ಮುಖೇನ ಹೊರತಂದರು. ಕಾವ್ಯಗಳ ಪ್ರಾರಂಭದಲ್ಲಿ ಪ್ರಭುಪ್ರಶಂಸೆಗಾಗಿಯೇ ಪಂಪ ರನ್ನಾದಿಗಳು ಹಾಗೂ ಇನ್ನಿತರ ಕವಿಗಳು ಹಲವು ಪದ್ಯಗಳನ್ನು ಮೀಸಲಿಟ್ಟ ಉದಾಹರಣೆಗಳಿವೆ.

ಕವಿಗಳು ರಾಜನ ಬಗ್ಗೆ ಬರೆಯುವುದು ಅಥವಾ ಪ್ರಶಂಸಿಸುವುದು ಅತಿ ಅಗತ್ಯವಾಗಿತ್ತು. ಪಂಪ ರನ್ನ ನಾಗವರ್ಮಾದಿಗಳು ಲೌಕಿಕ ಆಗಮಿಕ ಕಾವ್ಯ ಪರಂಪರೆಯನ್ನು ಮುಂದುವರಿಸಿ, ಲೌಕಿಕ ಕೃತಿಯನ್ನು ರಾಜನಿಗಾಗಿಯೇ ಮುಡಿಪೆನ್ನುವಂತೆ ಪುರಾಣ ಕಾವ್ಯದ ನಾಯಕನೊಂದಿಗೆ ಸಮೀಕರಿಸಿ ಬರೆದಿರುವರು. ಹಾಗೂ ಕಾಲದಿಂದ ಕಾಲಕ್ಕೆ ಕರ್ನಾಟಕದಲ್ಲಿ ಆಳಿದ ಆಳರಸರ ಬಗ್ಗೆ, ಕವಿಗಳು ತಮ್ಮ ಬಗ್ಗೆ ಹಾಗೂ ಕರ್ನಾಟಕದ ನೆಲ–ಜಲ–ಸಂಸ್ಕೃತಿ–ಪರಂಪರೆಯ ಬಗ್ಗೆ ಚಾರಿತ್ರಿಕ ಅಂಶಗಳನ್ನು ತಿಳಿಸುತ್ತಾರೆ. ಆ ಪದ್ಯಗಳನ್ನು ಕೆಳಗಿನಂತೆ ಗಮನಿಸುವುದು.

### ಕರ್ನಾಟಕ ಮತ್ತು ಕನ್ನಡದ ವಿವರಗಳು

'ಕರ್ನಾಟಕ' ಎಂಬ ಪದ ಬಹು ಪ್ರಾಚೀನವಾದ ಪದವಾಗಿದ್ದು, ಕರ್ಣಾಟ, ಕರುನಾಡು ಕಪ್ಪು ಮಣ್ಣಿನ ನಾಡು ಎಂಬ ಪದ ಪ್ರಯೋಗಗಳು ಕಂಡುಬರುತ್ತವೆ. ಕರ್ನಾಟಕದ ಜನರನ್ನು

'ಕರುನಾಡಿಗರ್' ಎಂದು ಕವಿರಾಜಮಾರ್ಗಕಾರನು ಸಂಬೋಧಿಸುತ್ತಾನೆ. 'ಕರ್ಣಾಟಕ' ಎಂಬ ಪದವೇ 'ಕರ್ನಾಟಕ'ವೆಂದಾಗಿದೆ.

"ಕಾವೇರಿಯಿಂದಮಾ ಗೋ
ದಾವರಿವರಮಿರ್ಪ ನಾಡದಾ ಕನ್ನಡದೊಳ್
ಭಾವಿಸಿದ ಜನಪದಂ"

**ಕವಿರಾಜ ಮಾರ್ಗ(೧-೩೬)**

ಎಂಬ ಕವಿರಾಜಮಾರ್ಗಕಾರನ ಉಲ್ಲೇಖವನ್ನು ಗಮನಿಸಿದರೆ ಕನ್ನಡ ನಾಡಿನ ಸೀಮೆ ಅಥವಾ ಮೇರೆಯು ಕಾವೇರಿ ನದಿಯಿಂದ-ಮಹಾರಾಷ್ಟ್ರದ ಗೋದಾವರಿ ನದಿಯವರೆಗೂ ವ್ಯಾಪಸಿತ್ತು ಎಂಬುದು ತಿಳಿದುಬರುತ್ತದೆ. ಕರ್ನಾಟಕದ ವಿಸ್ತಾರವನ್ನು ತಿಳಿಯಲು 'ಕವಿರಾಜಮಾರ್ಗ'ವು ಬಹುದೊಡ್ಡ ಆಕರವಾಗಿ ಪರಿಣಮಿಸಿದೆ. ಹಾಗೂ ಅಂದು ಮಹಾ ರಾಷ್ಟ್ರವೆಂಬ ಪ್ರತ್ಯೇಕ ರಾಜ್ಯವೇ ಇರಲಿಲ್ಲ. ಕರ್ನಾಟಕದ ಕಾವೇರಿ ನದಿಯಿಂದ ಗೋದಾವರಿ ನದಿಯವರೆಗೆ ಕರ್ನಾಟಕದವರೇ ನೆಲಸಿದ್ದರು. ಹಾಗಾಗಿ ಮಹಾರಾಷ್ಟ್ರ ರಾಜ್ಯವೇ ಇರಲಿಲ್ಲ. ಅದು ಕನ್ನಡ ನಾಡಿನಲ್ಲೆ ಇತ್ತು ಎಂದು ಅರ್ಥವಾಗುತ್ತದೆ.

ಕನ್ನಡದ ಬಹುತೇಕ ಕವಿಗಳು ರಾಜಾಶ್ರಯವನ್ನು ಅವಲಂಬಿಸಿಯೇ ಕಾವ್ಯರಚನೆ ಮಾಡಿದ್ದಾರೆ. ನಿದರ್ಶನಕ್ಕೆ ಶ್ರೀ ವಿಜಯ, ಪಂಪ, ರನ್ನ, ಪೊನ್ನ, ನಾಗವರ್ಮ, ಜನ್ನ ಇತ್ಯಾದಿ ಕವಿಗಳು ಬಹುಶಃ ಜಗತ್ತಿನ ಯಾವುದೇ ಸಾಹಿತ್ಯವನ್ನು ಗಮನಿಸಿದರೂ ರಾಜಾಶ್ರಯವಿಲ್ಲದೆ ಕಾವ್ಯರಚನೆ ಮಾಡಿದವರ ಸಂಖ್ಯೆ ಕಡಿಮೆಯಾಗಿದೆ. ಸಂಸ್ಕೃತ ಸಾಹಿತ್ಯಕ್ಕೂ ರಾಜಾಶ್ರಯವೇ ಪ್ರೇರಕ ಪೋಷಕವಾಗಿತ್ತು. "ವಿನಾಶ್ರಯನ ಶೋಭಂತೆ ಪಂಡಿತಾವನಿತಾಲತಾ"[೧] ಆಶ್ರಯವಿಲ್ಲದೆ ಪಂಡಿತರು, ಸ್ತ್ರೀಯರು, ಬಳ್ಳಿಗಳು ಬದುಕಲಾರರು ಹೀಗಾಗಿ ಕವಿಗಳಿಂದ ಅರಸರು, ಅರಸರಿಂದ ಕವಿಗಳು ಪ್ರಸಿದ್ಧರಾದರು. ಪಂಡಿತರು ತಮ್ಮ ಕಾವ್ಯಮುಖೇನ ತಮ್ಮ ಆಶ್ರಯದಾತರನ್ನು ಸ್ತುತಿಸುವುದರ ಮೂಲಕ ಲಾಭಪಡೆದರು. ಕವಿಗಳಿಂದ ಆಳರಸರು ಪ್ರಸಿದ್ಧರಾದರು.

ಕರ್ನಾಟಕದಲ್ಲಿ ಕಾಲದಿಂದ ಕಾಲಕ್ಕೆ ಆಳಿದ ರಾಜ ವಂಶಗಳು

೧. ರಾಷ್ಟ್ರಕೂಟರು
೨. ಚಾಲುಕ್ಯರು

೩. ಕದಂಬರು

೪. ಹೊಯ್ಸಳರು

ಈ ಎಲ್ಲ ರಾಜವಂಶಗಳ ಜೊತೆಗೆ ಇನ್ನು ಹಲವು ರಾಜವಂಶಗಳೂ ಕನ್ನಡ ಸಾಹಿತ್ಯ, ಭಾಷೆ, ಸಂಸ್ಕೃತಿ, ಪರಂಪರೆ ಇತ್ಯಾದಿಗಳ ಬೆಳವಣಿಗೆಗೆ ಮೂಲ ಕಾರಣವಾಗಿದ್ದಾರೆ. ಕನ್ನಡ ನಾಡಿನ ನೆಲ–ಜಲ–ನಾಡು–ನುಡಿ–ಸಂಸ್ಕೃತಿ ಹಾಗೂ ಪರಂಪರೆ ರಕ್ಷಣೆಗೆ ಆಳರಸರು ಶ್ರಮಿಸಿದಂತೆ ಕನ್ನಡ ನಾಡಿನ ಕವಿಗಳು ಶ್ರಮಿಸಿದ್ದಾರೆ.

**೧. ರಾಷ್ಟ್ರಕೂಟರ ಇತಿಹಾಸ: ಕವಿರಾಜಮಾರ್ಗ**

ರಾಷ್ಟ್ರಕೂಟರ ಇತಿಹಾಸಕ್ಕೆ ಸಂಬಂಧಿಸಿದಂತೆ ಶ್ರೀವಿಜಯನಿಂದ ರಚಿಸಲ್ಪಟ್ಟ 'ಕವಿರಾಜ ಮಾರ್ಗ' ಬಹುದೊಡ್ಡ ಆಕರ ಕೃತಿಯಾಗಿದೆ. ಕನ್ನಡ ಭಾಷೆಯ ಮೊದಲ ಉಪಲಬ್ದ ಲಕ್ಷಣ ಗ್ರಂಥವಾಗಿರುವ ಈ ಕೃತಿಯು ಕನ್ನಡ–ನಾಡು–ನುಡಿ ಕವಿಗಳ ಪ್ರಶಂಸೆಗೆ ಸಂಬಂಧಿಸಿದಂತೆ ತುಂಬಾ ಉತ್ತಮವಾದ ಅಂಶಗಳನ್ನು ವ್ಯಕ್ತಪಡಿಸುತ್ತದೆ. ಕವಿರಾಜಮಾರ್ಗಕಾರನೇ ಹೇಳುವಂತೆ ಕರ್ನಾಟಕದ ಎಲ್ಲೆ ಅಥವಾ ಸೀಮೆ ಕರ್ನಾಟಕದ ಕಾವೇರಿ ನದಿಯಿಂದ ಮಹಾರಾಷ್ಟ್ರದ ಗೋದಾವರಿ ನದಿಯವರೆಗೂ ವಿಸ್ತೀರ್ಣವಿತ್ತು. ಅದಕ್ಕಾಗಿಯೇ "ಕಾವೇರಿ ಯಿಂದಮಾ ಗೋದಾವರಿಯವರೆಗೂ" ಕನ್ನಡ ನಾಡಿನ ಜನರಿದ್ದರೆಂಬ ಅಂಶ ತಿಳಿದುಬರುತ್ತದೆ. ಕನ್ನಡಿಗರು ಉದಾರಿಗಳು, ತ್ಯಾಗಮಯಿಗಳು, ದಾನಶೂರರಾಗಿದ್ದರು. ಕವಿರಾಜಮಾರ್ಗ ಮೊದಲ ಪರಿಚ್ಛೇದದ ಮೊದಲೆರಡು ಪದ್ಯಗಳಲ್ಲಿಯೇ ಚಾರಿತ್ರಿಕ ಧ್ವನಿ ಕಂಡುಬರುತ್ತದೆ. ಕನ್ನಡಿಗರ ಶೌರ್ಯ, ಔದಾರ್ಯಗಳು ವ್ಯಕ್ತವಾಗುತ್ತವೆ

ಶ್ರೀ ತಳ್ತುರದೊಳ್ ಕೌಸ್ತುಭ
ಚಾತದ್ಯುತಿ ಬಳಸಿ ಕಾಂಡಪಟದಂತಿರೆ ಸಂ
ಪ್ರೀತಿಯಿಂ ನಾವನನಗಲಳ್
ನೀತಿ ನಿರಂತರನುದಾರನಾ ನೃಪತುಂಗ

**ಕವಿರಾಜಮಾರ್ಗ** (೧.೧)

ಈ ಪದ್ಯದಲ್ಲಿ ತನ್ನ ಆಶ್ರಯದಾತನಾದ ಅಮೋಘವರ್ಷ ನೃಪತುಂಗ ದೇವನು, ನಿರಂತರ ನೀತಿವಂತನೂ, ಉದಾರನೂ ಆಗಿದ್ದನೆಂಬುದನ್ನು ವಿವರಿಸುತ್ತದೆ. ರಾಜಾಶ್ರಯ ಪಡೆದ ಕವಿಗಳು ಕಾವ್ಯದ ಮೂಲಕ ಸ್ತುತಿಸುವುದು ಅಂದಿನ ಒಂದು ಮೌಲ್ಯವಾಗಿತ್ತು.

ಕವಿರಾಜಮಾರ್ಗದ ನಂತರ ರಾಜನ ಸ್ತುತಿ ಮುಂದುವರಿಯಿತು. ಪಂಪಾದಿಗಳ ಕಾವ್ಯಗಳಲ್ಲೂ ರಾಜಸ್ತುತಿಗಳಿವೆ.

ಕೃತ ಕೃತ್ಯ ಮಲ್ಲನಪ್ರತಿ
ಹತ ವಿಕ್ರಮನೊಸೆದು ವೀರನಾರಾಯಣನ
ಪ್ಪತಿಶಯಧವಳಂ ನಮಗೀ
ಗತರ್ಕಿತೋಪಸ್ಥಿತ ಪ್ರತಾಪೋದಯಂ

**ಕವಿರಾಜಮಾರ್ಗ(೧-೨)**

ಮೇಲಿನ ಪದ್ಯದಲ್ಲಿ ಕೃತ ಕೃತ್ಯಮಲ್ಲ, ಅಪ್ರತಿಹತ ವಿಕ್ರಮ, ವೀರನಾರಾಯಣ, ಅತಿಶಯ ಧವಳಂ ಈ ವಿಶೇಷಣಗಳು ನೃಪತುಂಗನ ಬಿರುದಾವಳಿಗಳಾಗಿವೆ. ಈತ ಯಾರು ಎಂಬ ಪ್ರಶ್ನೆ ಬರುತ್ತದೆ. ರಾಷ್ಟ್ರಕೂಟರ ಅರಸನಾದ ಅಮೋಘವರ್ಷ ನೃಪತುಂಗನಿಗೆ ಈ ಎಲ್ಲ ಬಿರುದಾವಳಿಗಳು ಇರುವುದರಿಂದ ರಾಷ್ಟ್ರಕೂಟರ ಪ್ರಸಿದ್ಧ ದೊರೆಯಾದ ಅಮೋಘವರ್ಷ ನೃಪತುಂಗನಿಗೆ ಈ ಎಲ್ಲ ಬಿರುದುಗಳು ಬಹುಶಃ ಅನ್ವಯವಾಗಿದೆ ಎನಿಸುತ್ತದೆ. ಪದ್ಯದಲ್ಲಿ ಈ ಬಿರುದುಗಳ ಒಡೆಯ ಯಾರೆಂಬುದೇ ಕಂಡುಬರುವುದಿಲ್ಲ. ಆದರೆ ಇದು ಪ್ರಭು ಪ್ರಶಂಸೆಯ ಪದ್ಯವಾಗಿರುವುದರಿಂದ ನೃಪತುಂಗ ಬಿರುದಾವಳಿಗಳಾಗಿವೆ ಎಂದು ಊಹಿಸಬಹುದು.

ದೇಶದಲ್ಲೆ ಪ್ರಸಿದ್ಧವಾದ ನಾಡು ಕರ್ನಾಟಕ. ಕರ್ನಾಟಕದ ಬಗ್ಗೆ ಮೊದಲ ಬಾರಿಗೆ ತಿಳಿಸಿದವನೇ ಕವಿರಾಜಮಾರ್ಗಕಾರ ಹೆಚ್ಚಿನ ಇತಿಹಾಸ ಕೃತಿಗಳಿಗೆ ಕವಿರಾಜಮಾರ್ಗವೇ ಮೂಲಾಧಾರವಾಗಿವೆ. ಚರಿತ್ರೆಯನ್ನು ರಚಿಸುವ ಇತಿಹಾಸಕಾರರು ಪೂರ್ವಕವಿಗಳ ಕಾವ್ಯಗಳನ್ನೆ ಅವಲಂಬಿಸಬೇಕಾಗಿದೆ. ಇದರಿಂದ ಕನ್ನಡಿಗರೂ ಸಹ ಕನ್ನಡ ನೆಲ-ಜಲ-ಸಂಸ್ಕೃತಿ, ನಾಡು-ನುಡಿ ರಕ್ಷಣೆಯನ್ನು ಮಾರ್ಗಕಾರನಿಂದಲೇ ತಿಳಿಯಬೇಕಾಗಿದೆ. ಹಾಗಾಗಿ ಕವಿರಾಜಮಾರ್ಗವು ಇತಿಹಾಸಕ್ಕೆ ಸಂಬಂಧಪಟ್ಟಂತೆ ಬಹುದೊಡ್ಡ ಆಕರ ಕೃತಿಯಾಗಿದೆ.

**ಅಚ್ಚಗನ್ನಡ ಪ್ರದೇಶಗಳು(ಪ್ರಾದೇಶಿಕ ವಿವರಗಳು)**

ಕರ್ನಾಟಕದ ಅಚ್ಚಗನ್ನಡ ಪ್ರದೇಶಗಳನ್ನು ಕವಿರಾಜಮಾರ್ಗಕಾರನು ಬಲು ಅಚ್ಚುಕಟ್ಟಾಗಿ ಪದ್ಯರೂಪದಲ್ಲಿ ವಿವರಿಸುತ್ತಾನೆ. ಪ್ರಾದೇಶಿಕ ವಿವರಗಳು ಸಿಗುವುದೇ ಕವಿರಾಜಮಾರ್ಗದಿಂದ ಇತಿಹಾಸ ರಚನೆಗೆ ಇದು ದಾಖಲೆಯಾಗಿದೆ.

ಅದಜೊಳಗ ಕಿಸುವೊಟಿಲಾ
ವಿದಿತ ಮಹಾಕೋಪಣ ನಗರದಾ ಪುಲಿಗೆಜೆಯಾ
ಸದಬಿಸ್ತುತಮಪ್ಪೊಂಕುಂ
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್

**ಕವಿರಾಜಮಾರ್ಗ(೩೭)**

**ಕಿಸುವೊಟಿಲು**

ಕನ್ನಡ ನಾಡಿನಲ್ಲಿ ಕಿಸುವೊಳಲು ಎಂಬುದು ಕೆನ್ನಾಡು ಕಿಸುನಾಡು–ಕೆಂಪುಮಣ್ಣಿನ ನಾಡು ದುರ್ಗಸಿಂಹನ ಪಂಚತಂತ್ರದಲ್ಲೂ ಕಿಸುನಾಡು ಸೈಯ್ಯಡಿ–ಸವಡಿ ಎಂದು ಕೇಳಿ ಬರುತ್ತದೆ. ಉತ್ತರ ಕರ್ನಾಟಕದ ಬಯಲು ಸೀಮೆಯ ಕೆಂಪು ಮಣ್ಣಿನ ನೆಲವೇ ಕಿಸುವೊಳಲು. ಕಿಸು ಎಂದರೆ ಕೆಂಪು, ವೊಟಿಲು ಎಂದರೆ ಪ್ರದೇಶವೆಂದಾಗುತ್ತದೆ. ಇದು ಅಚ್ಚಗನ್ನಡದ ಪ್ರದೇಶವೆಂದು ಮಾರ್ಗಕಾರನ ಅಭಿಪ್ರಾಯ. ಕೆಲವೊಂದು ಕೃತಿಗಳಲ್ಲಿ ಬಾಗಲಕೋಟಿ ಜಿಲ್ಲೆಯ ಪಟ್ಟದಕಲ್ಲನ್ನು ಕಿಸುವೊಳಲು ಎಂದು ಕರೆಯಲಾಗಿದೆ.

**ಕೋಪಣ ನಗರ**

ಕವಿರಾಜಮಾರ್ಗದ ಕಾಲಕ್ಕೂ ಕೊಪ್ಪಳ ನಗರವಾಗಿತ್ತು ಎನಿಸುತ್ತದೆ. ಅದಕ್ಕಾಗಿಯೇ ಶ್ರೀವಿಜಯ ಮಹಾಕೋಪಣ ನಗರವೆಂದು ಕರೆಯುತ್ತಾನೆ. ಹೊಸಪೇಟೆಯಿಂದ ಸ್ವಲ್ಪ ದೂರವಿರುವ ಈ ಊರನ್ನು ಕುರಿತು ಹಲವು ದಾಖಲೆಗಳು ಲಭ್ಯವಾಗಿವೆ. ಇದು ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ಸಂಬಂಧಿಸಿದ ಊರಾಗಿದ್ದು, ಈಗ ಜಿಲ್ಲೆಯಾಗಿದೆ. ಹಾಗೂ ಮಹಾನಗರವಾಗಿದೆ. ಬೆಟ್ಟಗುಡ್ಡಗಳಿಂದ ಕೂಡಿರುವ ಈ ನಗರದ ಬಗ್ಗೆ ಕವಿರನ್ನ ತನ್ನ 'ಅಜಿತ ಪುರಾಣ'ದಲ್ಲಿ ದಾನಚಿಂತಾಮಣಿ ಅತ್ತಿಮಬ್ಬೆಯನ್ನು ಪ್ರಶಂಸಿಸುತ್ತ, ಅವಳ ದಾನ ಗುಣವು ಕೊಪಣಾಚಳದಂತೆ ಪರಿಶುದ್ಧವಾದುದು ಎನ್ನುತ್ತಾನೆ. ಅಂದಿನ ಕೋಪಣ ನಗರ ಅಚ್ಚಗನ್ನಡ ಪ್ರದೇಶವಾಗಿತ್ತು ಎಂಬ ವಿಷಯವನ್ನು ತಿಳಿಸುತ್ತಾನೆ.

**ಪುಲಿಗೆರೆ**

ಇಂದಿನ ಲಕ್ಷ್ಮೇಶ್ವರವೇ ಹಿಂದಿನ ಪುಲಿಗೆರೆ. ಬಹುಶಃ ಹುಲಿಗಳ ಕೆರೆ ಪುಲಿಗೆರೆಯಾಗಿರ ಬಹುದು. ಬೆಳಗಾವಿ ಜಿಲ್ಲೆಗೆ ಸಂಬಂಧಿಸಿದ ಒಕ್ಕುಂದ ಇವುಗಳ ನಡುವಿನ ಪ್ರದೇಶವೇ ಸಂಪೂರ್ಣವಾಗಿ ತಿರುಳ್ಗನ್ನಡ (ಅಚ್ಚಗನ್ನಡ) ಮಾತನಾಡುವ ಜನರ ಪ್ರದೇಶವಾಗಿತ್ತೆಂಬುದು

ಕಂಡುಬರುತ್ತದೆ. ಇತಿಹಾಸ ರಚನೆಗೆ ಇದು ಬಹಳ ಪೂರಕವಾದ ಅಂಶವಾಗಿದೆ. ಒಕ್ಕುಂದ ಎಂಬುದು ಬೆಳಗಾವಿ ಜಿಲ್ಲೆಗೆ ಸೇರಿದ ಪ್ರದೇಶವಾಗಿದೆ.

ಕವಿರಾಜ ಮಾರ್ಗಕಾರನು ತನ್ನ ಲಕ್ಷಣಗ್ರಂಥದ ೩೬ನೇ ಪದ್ಯದಲ್ಲಿ ಕನ್ನಡನಾಡಿನ ವಿಸ್ತೀರ್ಣವನ್ನು ಹಾಗೂ ಕನ್ನಡದ ಜನಪದವನ್ನು ಕುರಿತು ಹೇಳುವನು.

ಕಾವೇರಿಯಿಂದ ಮಾ ಗೋ
ದಾವರಿ ವರಮಿರ್ಪ ನಾಡದಾ ಕನ್ನಡದೊಳ್
ಭಾವಿಸಿದ ಜನಪದಂ ವಸು
ಧಾವಳಯ ವಿಲೀನ ವಿಶದ ವಿಷಯ ವಿಶೇಷಂ

**ಕವಿರಾಜಮಾರ್ಗ(೧–೩೬)**

ದೇಶದಲ್ಲೇ ಪ್ರಸಿದ್ಧವಾದ ನಾಡು ಕನ್ನಡನಾಡು. ಇದು ಕಾವೇರಿಯಿಂದ ಗೋದಾವರಿಯವರೆಗೂ ವ್ಯಾಪಿಸಿತ್ತು ಎಂಬ ಅಂಶ ಮೊದಲ ಬಾರಿಗೆ ತಿಳಿದುಬರುತ್ತದೆ. ರಾಷ್ಟ್ರಕೂಟರ ಇತಿಹಾಸ ರಚಿಸಲು ಕವಿರಾಜಮಾರ್ಗ ಬಹು ಮುಖ್ಯವಾದ ಕೃತಿಯಾಗಿದೆ. ಹೆಚ್ಚಿನ ಶಾಸನಗಳು ಸಿಕ್ಕಿಲ್ಲವಾದುದರಿಂದ ಕವಿರಾಜಮಾರ್ಗದಿಂದಲೇ ಹೆಚ್ಚಿನ ವಿವರಗಳು ದೊರೆಯುತ್ತವೆ. ಈ ಕೃತಿ ಚಾರಿತ್ರಿಕ ರಚನೆಗೆ ಪೂರಕವಾಗಿದೆ. 'ಕಾವ್ಯ ಚರಿತ್ರೆಯನ್ನು ರೂಪಿಸುತ್ತದೆ'. ಹಾಗಾಗಿ ಕವಿರಾಜಮಾರ್ಗ ಇತಿಹಾಸ ರಚನೆಗೆ ಅಗತ್ಯವಾದ ಕೃತಿಯಾಗಿದೆ. ಹೆಚ್ಚಿನ ದಾಖಲೆಗಳು ರಾಷ್ಟ್ರಕೂಟರ ಇತಿಹಾಸ ರಚನೆಗೆ ಲಭ್ಯವಿಲ್ಲ. ಪಂಪನ ಕಾವ್ಯಗಳು, ರನ್ನನ ಕಾವ್ಯಗಳು, ಕವಿರಾಜಮಾರ್ಗ ಕೃತಿ ಇವುಗಳೇ ಇತಿಹಾಸ ರಚನೆಗೆ ಪೂರಕವಾಗಿವೆ. ಹಾಗಾಗಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ರಚಿಸಲು ಹಾಗೂ ಚಾರಿತ್ರಿಕ ಕೃತಿರಚನೆಗೆ ಕವಿಗಳು ಕೊಡುವ ಉಲ್ಲೇಖಗಳು ಅತಿ ಅಗತ್ಯವಾಗಿವೆ.

**ಕನ್ನಡಿಗರ ಸ್ವಭಾವ ಚಿತ್ರಣ**

ಕನ್ನಡಿಗರ ಸ್ವಭಾವ ಎಂಥಹುದೆಂಬುದನ್ನು ತಿಳಿಸಲು ಕವಿರಾಜಮಾರ್ಗಕಾರನ ಸೊಗಸಾದ ವಿವರವನ್ನು, ಅವನಿಂದಲೇ ರಚಿತವಾದ ಪದ್ಯವನ್ನು ಗಮನಿಸಬೇಕು.

ಪದನಱಿದು ನುಡಯಲುಂ ನುಡಿ
ದುದನಱಿದಾರಯಲು ಮಾರ್ಪರಾ ನಾಡವರ್ಗಳ್
ಚದುರರ್ ನಿಜದಿಂ ಕುಱಿತೋ
ದದೆಯಂ ಕಾವ್ಯ ಪ್ರಯೋಗ ಪರಿಣತ ಮತಿಗಳ್

**ಕವಿರಾಜಮಾರ್ಗ (೧.೩೮)**

ಇದು ಕನ್ನಡ ಸಾಹಿತ್ಯದಲ್ಲೆ ಬಹುಜನಪ್ರಿಯವಾದ ಪದ್ಯವಾಗಿದೆ. ಕನ್ನಡಿಗರ ಜಾಣ್ಮೆ, ಭಾಷಾಕೌಶಲ, ಸಾಹಿತ್ಯ ಪ್ರೇಮ ಹಾಗೂ ಅವರ ಗುಣ ಸ್ವಭಾವವನ್ನು ಅಚ್ಚುಕಟ್ಟಾಗಿ ಚಿತ್ರಿಸಿದೆ. 'ಕನ್ನಡಿಗರು ಕ್ರಮವರಿತು ನುಡಿಯುವರು, ನುಡಿದುದನ್ನು ಅರಿತುಕೊಳ್ಳುವಲ್ಲಿ ಸಮರ್ಥರಾದವರು ಕನ್ನಡಿಗರು ನಿಜವಾಗಿಯೂ ಚತುರರು. ಅವರು ಅಧ್ಯಯನ ಮಾಡದಿದ್ದರೂ ಕಾವ್ಯ ರಚನಾ ಕೌಶಲವನ್ನು ಹೊಂದಿದವರು ಎಂಬ ವಿಷಯವನ್ನು ತಿಳಿಸುತ್ತ ಕನ್ನಡಿಗರ ಕೌಶಲವನ್ನು ಕುರಿತು ಚಿತ್ರಿಸಿರುವನು. ಇದು ಕನ್ನಡ ನಾಡು ಮತ್ತು ಕನ್ನಡಿಗರ ಪ್ರಶಂಸಾ ಪದ್ಯವಾಗಿದೆ.

ಕುಱಿತವರಲ್ಲದೇ ಮತ್ತಂ ಪೆಱರುಂತ
ತಮ್ಮ ನುಡಯೊಳ್ ಎಲ್ಲರ್ ಜಾಣರ್
ಕಿಱುವಕ್ಕಳ್, ಮೂಗರುಂ ಅಱಿಪಲ್ಕುಂ
ಅದಱಿವರ್ ವಿವೇಕಮಂ ಮಾತುಗಳಂ

**ಕವಿರಾಜ ಮಾರ್ಗ(೧-೩೯)**

ಕಲಿತವರಷ್ಟೇ ಅಲ್ಲ ಮಿಕ್ಕ ಜನರೂ ಕೂಡ ತಮ್ಮ ಮಾತಿನಲ್ಲಿ ಜಾಣರಾಗಿರುತ್ತಾರೆ. ಚಿಕ್ಕ ಮಕ್ಕಳು, ಹುಟ್ಟು ಮೂಗರೂ ಸಹ ವಿವೇಕವನ್ನು ಹೊಂದಿರುತ್ತಾರೆ. ಹೀಗೆ ಕನ್ನಡಿಗರ ಸ್ವಭಾವವನ್ನು ಅತ್ಯಂತ ಅಚ್ಚುಕಟ್ಟಾಗಿ ತಿಳಿಸಿದ್ದಾನೆ. ಕನ್ನಡನಾಡಿನಲ್ಲಿ ಹುಟ್ಟಿರುವ ಪ್ರತಿಯೊಬ್ಬರೂ ಪ್ರತಿಭಾವಂತರಾಗಿದ್ದಾರೆ.

ಚಾರಿತ್ರಿಕ ಅಂಶಗಳನ್ನೊಳಗೊಂಡಿರುವ ಕಾವ್ಯಗಳನ್ನು ಬರೆದಿರುವ ಕವಿಗಳ ಕಾಲ ಪ್ರಧಾನವಾಗಿ ಕ್ಷಾತ್ರಯುಗ ಆದ್ದರಿಂದ ಪೂರ್ಣಪ್ರಮಾಣದ ಐತಿಹಾಸಿಕ ಕಾವ್ಯಗಳನ್ನು ಬರೆಯುವ ಅವಕಾಶಗಳಿದ್ದರೂ, ಅವರು ಬರೆಯಲು ಸಾಧ್ಯವಾಗಲಿಲ್ಲ. ಕಾರಣ ಜನರ ಪುರಾಣಾಸಕ್ತಿಯನ್ನು ಇತಿಹಾಸಾಸಕ್ತಿಗೆ ಪರಿವರ್ತಿಸುವುದು ಬಹಳ ಕಷ್ಟಕರವಾದುದು. ಇದಕ್ಕಾಗಿಯೇ ಪುರಾಣ ವಸ್ತುವನ್ನು ಆರಿಸಿಕೊಂಡು ಆಶ್ರಯದಾತರನ್ನು ಹೊಗಳಿ ಬರೆದ ಕಾವ್ಯಗಳೇ ಕನ್ನಡ ಸಾಹಿತ್ಯದಲ್ಲಿ ಕಾಣಿಸಿಕೊಂಡಿವೆ. ಬಹುಶಃ ಪ್ರಾಚೀನ ಕನ್ನಡ ಕವಿಗಳಿಗೆ ಪುರಾಣ ಕಾವ್ಯಗಳ ಮೇಲೆಯೇ ಅಪಾರವಾದ ಪ್ರೀತಿಯಿತ್ತೆಂದು ಕಂಡುಬರುತ್ತದೆ. ಅದಕ್ಕಾಗಿಯೇ ಹಿಂದಿನ ರಾಮಾಯಣ, ಮಹಾಭಾರತದ ವಿಷಯವಸ್ತು ಇಂದಿನ ಕವಿಗಳ ಮನಸ್ಸಿನಲ್ಲಿ ಉಳಿದು ಅದೇ ವಿಷಯದ ಕಾವ್ಯ ರಚನೆಗಳು ಹೊರಬಂದಿವೆ. ಉದಾಹರಣೆ ಪಂಪ ಭಾರತ, ಕುಮಾರವ್ಯಾಸ ಭಾರತ ರಾಮಚಂದ್ರ ಚರಿತ ಪುರಾಣ ಇತ್ಯಾದಿ ಕೃತಿಗಳನ್ನು ಹೆಸರಿಸಬಹುದು.

ಪುರಾಣ ಕಾವ್ಯದ ಕಥಾನಾಯಕನೊಂದಿಗೆ ಸಮಕಾಲೀನ ಆಶ್ರಯದಾತನನ್ನು ಸಮೀಕರಿಸಿ ಬರೆಯುವ ಪದ್ಧತಿ ಬಹುಶಃ ಗುಣವರ್ಮನಿಂದಲೇ ಪ್ರಾರಂಭವಾಗಿರುವಂತೆ ಕಂಡುಬರುತ್ತದೆ. ಆದರೆ ಗುಣವರ್ಮನ ಕೃತಿ ಲಭ್ಯವಿಲ್ಲದ ಕಾರಣ ಮಹಾಕವಿ ಪಂಪನೆ ಆ ಮಾರ್ಗದ ರೂವಾರಿ ಎನಿಸಿಕೊಂಡಿರುವನು. ನಂತರ ಪೊನ್ನ, ರನ್ನ, ನಾಗವರ್ಮ, ಜನ್ನ ಇತ್ಯಾದಿ ಕವಿಗಳು ಮುಂದುವರಿಸಿಕೊಂಡು ಬಂದರು. ಹತ್ತನೇ ಶತಮಾನದ ಜೈನಯುಗದ ಸಂದರ್ಭ ಚಾರಿತ್ರಿಕ ಧ್ವನಿ ಕಾವ್ಯಗಳ ಮಹತ್ವದ ಕಾಲವಾಗಿ ಪರಿಣಮಿಸಿತು. “ಪುರಾಣ ಕಾವ್ಯದ ನಾಯಕನೊಂದಿಗೆ ಆಶ್ರಿತ ದೊರೆಯೊಬ್ಬನನ್ನು ಹೋಲಿಸಿ ಬರೆಯುವ ಪದ್ಧತಿಯು ಪ್ರಾರಂಭವಾದುದು ಸಂಸ್ಕೃತ ಕವಿ ಬಾಣಭಟ್ಟನ ‘ಹರ್ಷಚರಿತ"ದಿಂದ ಎಂಬ ವಾದವೊಂದು ಹುಟ್ಟಿಕೊಂಡಿದೆ. ಆದರೆ ಇದಕ್ಕೆ ನಿರ್ದಿಷ್ಟವಾದ ಆಧಾರಗಳಿಲ್ಲ. ಬಾಣನ ‘ಹರ್ಷಚರಿತೆ", ಇತಿಹಾಸ ಪ್ರಧಾನವಾದ ಒಂದು ಚರಿತ್ರ ಲೇಖನ ಪುರಾಣದ ಪ್ರಭಾವ ಇದರ ಮೇಲಿದ್ದರೂ, ಹರ್ಷನ ಜೀವನ ಚರಿತ್ರೆಯನ್ನು ಪ್ರಧಾನ ವಸ್ತುವಾಗಿ ಹೊಂದಿರುವ ಕಾವ್ಯ ಆದ್ದರಿಂದ ಇದರಲ್ಲಿ ಅಭೇದ ಕಲ್ಪಿಸುವ ಮಾತೇ ಇಲ್ಲ.”[೨] ಆದ್ದರಿಂದ ಪಂಪನೇ ಈ ಮಾರ್ಗ ತುಳಿದ ಮೊದಲ ಕವಿ ಎನ್ನಬಹುದು.

**ಚಾಲುಕ್ಯರು: ವಿಕ್ರಮಾರ್ಜುನ ವಿಜಯ**

ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ಸಂಸ್ಕೃತಿ ಮತ್ತು ಪರಂಪರೆಯನ್ನು ಮುಂದುವರಿಸಿದ ಹಿರಿಮೆ ಪಂಪನಿಗೆ ಸಲ್ಲುವುದು. ಪಂಪ ತನ್ನ ‘ವಿಕ್ರಮಾರ್ಜನ ವಿಜಯ’ ಎಂಬ ಕಾವ್ಯದ ಮೂಲಕ ಈ ಪರಂಪರೆಯನ್ನು ಗಮನಾರ್ಹವಾಗಿ ಮುಂದುವರಿಸಿರುವನು. ಲೌಕಿಕ ಆಗಮಿಕ ಎಂಬ ಎರಡು ಕಾವ್ಯ ಪರಂಪರೆಯಲ್ಲಿ ಲೌಕಿಕ ಕಾವ್ಯಗಳಲ್ಲಿ ಕಥಾನಾಯಕನಾದ ಅರ್ಜುನನೊಂದಿಗೆ ಇಮ್ಮಡಿ ಅರಿಕೇಸರಿಯಾದ ಚಾಲುಕ್ಯ ಸಾಮಂತ ದೊರೆಯನ್ನು ಸಮೀಕರಿಸಿ ಕಾವ್ಯರಚನೆ ಮಾಡಿದ ಕುಶಲ ಕವಿಯಾಗಿರುವನು. ಇದರಿಂದಾಗಿ ಕಾವ್ಯಗಳಲ್ಲಿ ಚಾರಿತ್ರಿಕ ಅಂಶಗಳು ನೇರವಾಗಿಯೇ ಅಥವಾ ಪರೋಕ್ಷವಾಗಿಯೋ ಕಾಣಿಸಿಕೊಳ್ಳಲು ಕಾರಣವಾಯಿತು.

ಚಾರಿತ್ರಿಕ, ವಿಷಯವನ್ನೊಳಗೊಂಡ ಮೊಟ್ಟ ಮೊದಲ ಉಪಲಬ್ದ ಕಾವ್ಯವಾಗಿರುವ ಪಂಪಭಾರತ ಇದುವರೆಗೂ ತನ್ನ ಮಹತ್ವವನ್ನು ಕಾಯ್ದುಕೊಂಡು ಬಂದಿದೆ. ವಿಕ್ರಮಾರ್ಜುನ ವಿಜಯದ ಪ್ರಾರಂಭದಲ್ಲೆ ಅರಿಕೇಸರಿಯ ವಂಶಾವಳಿಯ ನೇರ ಪ್ರಸ್ತಾಪವಿದೆ.

ಶ್ರೀ ಮಚ್ಚಳುಕ್ಯ ವಂಶ
ವ್ಯೋಮಾಮೃತಕಿರಣನೆನಿಪ ಕಾಂತಿಯನೊಳಕೊಂ
ಡೀ ಮಹಿಯೊಳಾತ್ಮ ವಂಶ ಶಿ
ಖಾಮಣಿ ಜಸಮೆಸೆಯೆ ಯುದ್ಧಮಲ್ಲಂ ನೆಗಟ್ದಂ

**ಪಂಪಬಾರತ(೧–೧೫)**

ಎಂಬ ಪದ್ಯದಲ್ಲಿ ಚಾಲುಕ್ಯ ವಂಶದ ನೇರ ಪ್ರಸ್ತಾಪವಿದೆ. ಚಾಲುಕ್ಯರ ಯುದ್ದ ವಿವರಗಳನ್ನು ಕುರಿತು ವಿವರಿಸುವ ದಾಖಲೆಗಳು ಪಂಪನಲ್ಲಿವೆ. ಆದರೆ ಚರಿತ್ರೆಯಲ್ಲಿಲ್ಲ. ಚಾಲುಕ್ಯರ ಯುದ್ಧ ಮಲ್ಲನಿಗೆ ಸಂಬಂಧಿಸಿದ ವಿವರಗಳು ಪಂಪಭಾತದಲ್ಲಿವೆ. ಇತಿಹಾಸದಲ್ಲಾಗಲಿ, ಶಾಸನಗಳಾಗಲಿ ಇತರ ದಾಖಲೆಗಳಾಗಲಿ ದೊರೆಯುವುದಿಲ್ಲ. ಕವಿಗಳ ಕೃತಿಗಳು ಇತಿಹಾಸ ರಚನೆಗೆ ಪೂರಕವಾಗಿವೆ. ಇದರ ಜೊತೆಗೆ ಪಂಪನಿಗೂ ಅರಿಕೇಸರಿಗೂ ಇದ್ದ ಸ್ನೇಹ ಸಂಬಂಧವೂ ಸಹ ಬಹುಶಃ ಇಂತಹ ಅಭೇದ ರೂಪದ ಚಾರಿತ್ರಿಕ ಕಾವ್ಯ ರಚನೆಗೆ ಕಾರಣವಾಗಿರಬೇಕು. ಇದರಿಂದಾಗಿ ಅರ್ಜುನ ಮತ್ತು ಅರಿಕೇಸರಿಯ ಅಭೇದ ರೂಪದ ಕಾವ್ಯ ರಚಿಸಲು ಸಾಧ್ಯವಾಗಿದೆ.

ಪಂಪಭಾರತದ ಮೊದಲ ಪದ್ಯದಲ್ಲೆ ಕವಿ ಪಂಪನು ಕವಿರಾಜಮಾರ್ಗದ ದಾರಿಯನ್ನು ಕ್ರಮಿಸಿರುವನೆಂಬಂತೆ ಕಂಡುಬರುತ್ತದೆ. ಕವಿರಾಜಮಾರ್ಗದ ನೃಪತುಂಗ ಮತ್ತು ವೀರನಾರಾಯಣರ ಅಭೇದರೂಪ ಇಲ್ಲಿ ಅರಿಕೇಸರಿ ಮತ್ತು ಅರ್ಜುನರಲ್ಲಿ ಮೂಡಿಬಂದಿದೆ. ಉದಾತ್ತ ನಾರಾಯಣನಾದ ಅರಿಕೇಸರಿ ಪಂಪನ ಕಾವ್ಯದಲ್ಲಿ ಮಧ್ಯಮ ಪಾಂಡವನಾದ ಅರ್ಜುನನಾಗಿದ್ದಾನೆ. ಇದು ಭಾರತದ ಕಥೆಯಾದರೂ ಅರಿಕೇಸರಿ ಅಥವಾ ಚಾಲುಕ್ಯರ ಚರಿತ್ರೆ ಎನಿಸಿದೆ. ವ್ಯಾಸಭಾರತಕ್ಕಿಂತ ಭಿನ್ನವಾದ ಶೈಲಿಯಲ್ಲಿ ನಿರೂಪಿತವಾದ ಪಂಪಭಾರತ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಹೊಸ ಪ್ರಯೋಗವೆಂಬಂತೆ ಗೋಚರವಾಗಿದೆ. ಇದೊಂದು ಸರ್ವಕಾಲಿಕ ಚಾರಿತ್ರಿಕ ಕಾವ್ಯವಾಗಿದೆ.

ಶ್ರೀಯನರಾತಿ ಸಾಧನ ಪಯೋನಿಧಿಯೊಳ್ ಪಡೆದುಂ ಧರಿತ್ರಿಯಂ
ಜೀಯನೆ ಬೇಡಿಕೊಳ್ಳದೆ ವಿರೋಧಿ ನರೇಂದ್ರರನೊತ್ತಿ ಕೊಂಡುಮಾ
ತ್ಮೀಯಸುಪುಷ್ಪವೃಷ್ಟಿಯನೊಡಂಬಡೆ ತಾಳ್ದಿಯುಮಿಂತುದಾತ್ತನಾ
ರಾಯಣನಾದ ದೇವನೆಮಗೀಗರಿಕೇಸರಿ ಸೌಖ್ಯ ಕೋಟಿಯಂ

**ಪಂಪಭಾರತ(೧.೧)**

ಈ ಪದ್ಯದಲ್ಲಿ ಅರಿಕೇಸರಿಯನ್ನು ದೇವತೆಗಳ ಜೊತೆ ಸೇರಿಸಿ ಉದಾತ್ತ ನಾರಾಯಣನೆಂದು ಸ್ತುತಿಸಲಾಗಿದೆ. ಕಾರಣ ಪಂಪನಿಗೆ ಆಶ್ರಯದಾತನ ವ್ಯಕ್ತಿತ್ವವನ್ನು ಪೌರಾಣಿಕರಣಗೊಳಿಸಬೇಕೆಂಬ ಅಭಿಲಾಷೆ ಇತ್ತೆಂದು ಕಂಡುಬರುತ್ತದೆ. ನಾರಾಯಣನಿಗಿಂತ ಅರಿಕೇಸರಿ ಶ್ರೇಷ್ಠನೆಂಬ ಭಾವ ಬರುವಂತೆ ಚಿತ್ರಿಸಲಾಗಿದೆ. ಹಾಗೂ ಅರಿಕೇಸರಿ ಯುದ್ಧ ವೀರನೆಂಬುದಕ್ಕೆ, ಜಯಲಕ್ಷ್ಮಿಯನ್ನು ಭೂಮಿಯನ್ನು ಬೇಡಿ ಪಡೆಯದೆ ಶತ್ರು ಸೈನ್ಯವನ್ನು ಸೋಲಿಸಿ ಪಡೆದನೆಂದೂ, 'ಸುಪುಷ್ಪವೃಷ್ಟಿಯ ನೊಡಂಬಡೆ ತಾಳ್ದಿಯುಂ' ಎಂಬ ಮಾತಿನಿಂದ ಅರಿಕೇಸರಿ ಬರೀ ಸಾಮಂತ ರಾಜನಾಗಿರದೇ ಪಟ್ಟ ಧರಿಸುವ ಅರ್ಹತೆಯನ್ನು ಹೊಂದಿದ್ದನೆಂಬ ಅಂಶ ಪಂಪಭಾರತದಲ್ಲಿಯೇ ದೊರೆಯುತ್ತದೆ. ಬೇರೆ ಇತಿಹಾಸ ಕೃತಿಯಲ್ಲಿ ಈ ಯುದ್ಧ ವೀರನ ಬಗ್ಗೆ ದೊರೆಯುವುದೇ ಇಲ್ಲ. ಪಂಪ ಭಾರತದಂತಹ ಕೃತಿಗಳು ಚರಿತ್ರೆಯನ್ನು ರೂಪಿಸುವಲ್ಲಿ ಯಶಸ್ವಿಯಾಗಿವೆ. ಆದ್ದರಿಂದ ಕಾವ್ಯ ಚರಿತ್ರೆಯನ್ನು ರೂಪಿಸುತ್ತದೆ. ಇಂತಹ ಎಲ್ಲ ಅರ್ಹತೆಗಳನ್ನು ಹೊಂದಿರುವ ಪ್ರತ್ಯಕ್ಷ ದೇವನಂತಿರುವ ಅರಿಕೇಸರಿಯು ನಮಗೆ ಸೌಖ್ಯ ಕೋಟಿಯನ್ನು ದಯಪಾಲಿಸಲೆಂದು ಹೇಳುವ ಪಂಪನ ಅಭಿಮಾನದ ನುಡಿಗಳು ಕೇವಲ ಹೊಗಳಿಕೆಯೇನಲ್ಲವೆಂದು ಎನಿಸುತ್ತದೆ. ಸ್ತುತಿಯ ಜೊತೆ ಯುದ್ಧವೀರನಾದ ಅರಿಕೇಸರಿಯ ಶೌರ್ಯ ಸಾಹಸವನ್ನು ವರ್ಣಿಸುತ್ತಾನೆ.

ಮುಳಿಸಂ ಲಲಾಟನೇತ್ರ ಶಿಖಿ ಮೆಚ್ಚೆ ವಿನೂತ ರಸಪ್ರಸಾದ ಮು
ಜ್ವಳ ಜಸಮಂಗ ಸಂಗತ ಲಸದ್ಭಸಿತಂ ಪ್ರಭುಶಕ್ತಿ ಶಕ್ತಿನಿ
ರ್ಮಳ ಮಣಿಭೂಷಣಂ ಫಣಿ ವಿಭೂಷಣಮಾಗೆ ನೆಗೞ್ತೆಯಂಪುದು
ಗೊಳಿಸಿದ ನೆಗೞ್ದುದಾರ ಮಹೇಶ್ವರನೀಗೆ ಭೋಗಮಂ

**ಪಂಪಭಾರತ(೧-೨)**

ಈ ಪದ್ಯ ಮೇಲ್ನೋಟಕ್ಕೆ ಶಿವಸ್ತುತಿಯ ಪದ್ಯವಾಗಿದ್ದರೂ ಅರಿಕೇಸರಿಯ ಕೋಪತಾಪವನ್ನು ಅವನ ಪ್ರಭುಶಕ್ತಿಯನ್ನು ವ್ಯಕ್ತಪಡಿಸುತ್ತದೆ. ಅರಿಕೇಸರಿಯ ಮುನಿಸು ಶಿವನ ಮೂರನೆಯ ಕಣ್ಣಿನ ಪ್ರತಾಪದಂತೆ ಅವನ ಮೆಚ್ಚುಗೆ ರಸಪ್ರಸಾದದಂತೆ ಉತ್ತಮ ಪ್ರಭುಶಕ್ತಿಯನ್ನು ಹೊಂದಿದ ಅರಿಕೇಸರಿಯ ಮಣಿಭೂಷಣಗಳೇ ಫಣಿಭೂಷಣವಾಗಿರಲು, ಉದಾರ ಮಹೇಸ್ವರ ನೆನಿಸಿದ ಅರಿಕೇಸರಿಯು ಭೋಗವನ್ನು ದಯಪಾಲಿಸಲಿ ಎನ್ನುವುದರ ಮೂಲಕ ತನ್ನ ಆಶ್ರಯದಾತ ಸಾಮಂತ ರಾಜನಾಗಿದ್ದರೂ ಅವನ ಕ್ರೋಧ ಪ್ರತಾಪ ಸಾಕ್ಷಾತ್ ಶಿವನಿಗೇ ಸಮಾನ. ಅವನ ಉದಾರತೆಗಳು ರಸಪ್ರಸಾದಗಳಂತೆ ಎಂದು ಕಾವ್ಯನಾಯಕನ ಔದಾರ್ಯತೆಯನ್ನು

ಸ್ತುತಿಸುತ್ತಾನೆ. ಆದರೆ ಪಂಪಕವಿ ಚಕ್ರವರ್ತಿಯಲ್ಲದ ಒಬ್ಬ ಸಾಮಂತ ರಾಜನನ್ನು ಕುರಿತು ಕಾವ್ಯ ರಚಿಸಿದ್ದಾದರೂ, ಏಕೆ ಎಂಬ ಪ್ರಶ್ನೆ ಬರುತ್ತದೆ. ಇಮ್ಮಡಿ ಅರಿಕೇಸರಿಯ ಪರಾಕ್ರಮ ಹಾಗೂ ಉದಾರ ಚರಿತ್ರೆಯೇ ಈ ಕಾವ್ಯ ರಚನೆಗೆ ಕಾರಣವಾಗಿರಬಹುದು. "ಭಾರತ ಕುರಿತ ತನ್ನ ಕಾವ್ಯದಲ್ಲಿ ಅರ್ಜುನನ ಸಾಹಸ ಜೀವನ ಬಂದಾಗಲೆಲ್ಲಾ ಅವನ ಕಣ್ಣ ಮುಂದೆ ಇದ್ದುದು ಅರಿಕೇಸರಿಯ ಪರಾಕ್ರಮದ ಕಥೆ. ಇದರಿಂದ ಪಂಪನಿಗೆ ತನ್ನ ಕಾವ್ಯವನ್ನು ಚಾರಿತ್ರಿಕ ಧ್ವನಿಯುಕ್ತ ಕಾವ್ಯವನ್ನಾಗಿ ಮಾಡಲು ಸಾಧ್ಯವಾಯಿತು. ಪಂಪ ತನ್ನ ಆಶ್ರಯದಾತನ ಜೀವನ ಚರಿತ್ರೆಯನ್ನು ಬರೆಯಲು ಮಹಾಭಾರತದ ಕಥೆಯನ್ನು ಆರಿಸಿಕೊಂಡುದು ಕೂಡ ಅದೊಂದು ಇತಿಹಾಸವೆಂದು ಭಾವಿಸಿದ್ದರಿಂದ ಎಂದು ಕಾಣುತ್ತದೆ."[೩]

ಪಂಪ ತನ್ನ ಕಾವ್ಯದ ಮೂರು ಮತ್ತು ನಾಲ್ಕನೇ ಪದ್ಯಗಳಲ್ಲಿ ಕ್ರಮವಾಗಿ ಸೂರ್ಯ ಮತ್ತು ಮನ್ಮಥರಿಗೆ ಅರಿಕೇಸರಿಯನ್ನು ಹೋಲಿಸುತ್ತಾನೆ. "ನಿಮಿರ್ಚುಗೆ ಕಬ್ಬಮಂ ನಯದಿಂ ಗುಣಾರ್ಣವ ಭೂಪನಾ(೧.೭ಪಂ.ಭಾ) ಎನ್ನುವಲ್ಲಿ ಗುಣಾರ್ಣವನೆಂಬ ಬಿರುದಾಂಕಿತ ಅರಿಕೇಸರಿ ಚಾಳುಕ್ಯ ಸೂರ್ಯನಂತೆ ಪ್ರಕಾಶಿಸುವನು ಎಂಬುದು ಸ್ಪಷ್ಟವಾಗುತ್ತದೆ. ಸೂರ್ಯನು ಜಗತ್ತಿಗೆ ಬೆಳಕನ್ನು ಕೊಡುವಂತೆ ಚಾಲುಕ್ಯ ಅರಿಕೇಸರಿ ಸಮಸ್ತ ರಾಜ್ಯದ ಬೆಳಕಾಗಿದ್ದ.

ವಿಪುಳ ಯಶೋವಿತಾನ ಗುಣವಿಲ್ಲನಂ ಪ್ರಭುಮಾಡಿ ಪೂರ್ವಭೂ
ಮಿಪರ ಪದಂಗಳಂ ಪುಗಿಸಿ ಪೋಲಿಪೊಡೀತನುದಾತ್ತ ಪೂರ್ವಭೂ
ಮಿಪರುಮನೊಳ್ಪಿನೊಳ್ ತಗುಳೆವಂದೊಡೆಯೀ ಕಥೆಯೊಳ್ ತಗುಳ್ಪಪೋ
ವಿಪೊಡೆ ನಗೆತ್ತಿಯಾದುದು ಗುಣಾರ್ಣವ ಭೂಭುಜನಾ ಕಿರೀಟಿಯೊಳ್

**ಪಂಪಭಾರತ(೧.೧೩)**

ವಿಪುಳವಾದ ಕೀರ್ತಿ, ಗುಣವಿಲ್ಲದವರನ್ನು ನಾಯಕನನ್ನಾಗಿ ಮಾಡಿ ಪೂರ್ವ ರಾಜರ ಪದವಿ ಹಾಗೂ ಬಿರುದಾವಳಿಗಳನ್ನು ಅವರಿಗರ್ಪಿಸಿ ಕೆಲವರು ಕಾವ್ಯ ರಚಿಸುತ್ತಾರೆ. ಆದರೆ ಅದಕ್ಕೆ ಅರಿಕೇಸರಿಯ ಉದಾತ್ತ ಗುಣಗಳು ಪೂರ್ವರಾಜರನ್ನು ಮೀರಿಸುವಂಥವು. ಇಂತಹ ಗುಣವಂತನಾದ ಗುಣಾರ್ಣವ ಅರಿಕೇಸರಿಯನ್ನು ಮಹಾಭಾರತದ ಕಥೆಯಲ್ಲಿ ಸೇರಿಸಿ, ಅರ್ಜುನನೊಡನೆ ಹೋಲಿಸುವುದು ಕಷ್ಟದ ಕೆಲಸವಲ್ಲ. ಮತ್ತೊಂದು ಪದ್ಯದಲ್ಲೂ ಇದೇ ರೀತಿಯ ಧೋರಣೆ ಇದೆ. "ವೈರಿ ನರೇಂದ್ರೋದ್ಧಾಮ ದರ್ಪೋದ್ದಳನನನೆ ಕಥಾನಾಯಕಂ ಮಾಡಿ ಸಂದರ್ಜುನನೊಳ್ ಪೊಲ್ವಿ ಕಥಾಬಿತ್ತಿಯನುನಯದಿಂ ಪೇಟಲೆಂದೆತ್ತಿಕೊಂಡೆ

(ಪಂ.ಭಾ.೧೫)" ವೈರಿ ಅರಸರನ್ನು ತನ್ನ ಪ್ರತಾಪ ಮತ್ತು ದರ್ಪದಿಂದ ಗೆಲ್ಲುವ ಅರಿಕೇಸರಿಯನ್ನು ಕಥಾನಾಯಕನನ್ನಾಗಿ ಮಾಡಿ ಅರ್ಜುನನೊಡನೆ ಹೋಲಿಸುವ ಈ ಕಥಾ ಚಿತ್ರವನ್ನು ಹೇಳಲು ತೆಗೆದುಕೊಂಡೆನೆಂದು ಕವಿ ಇಲ್ಲಿ ಸೂಚಿಸಿದ್ದಾನೆ.

ಚಾರಿತ್ರಕ ವಿವರಗಳಿಗೆ ಸಂಬಂಧಿಸಿದಂತೆ ಪಂಪನಂತೆ ರನ್ನನಲ್ಲೂ ಹಲವು ವಿಷಯಗಳು ದೊರೆಯುತ್ತವೆ. ಪಂಪನದು ವಿಕ್ರಮಾರ್ಜುನ ವಿಜಯವಾದರೆ ರನ್ನನದು ಸಾಹಸಭೀಮ ವಿಜಯ. ಗದಾಯುದ್ಧವೆಂದು ಹೆಸರಾಗಿರುವ ಈ ಕೃತಿ ಪಂಪಭಾರತದ ಹದಿಮೂರು ಮತ್ತು ಹದಿನಾಲ್ಕನೆಯ ಆಶ್ವಾಸಗಳಿಂದ ಎತ್ತಿಕೊಳ್ಳಲಾಗಿದೆ. ಪಂಪಭಾರತದ ನಾಯಕ ಚಾಲುಕ್ಯ ಇಮ್ಮಡಿ ಅರಿಕೇಸರಿಯಾದರೆ, ಸಾಹಸಭೀಮ ವಿಜಯದ ಕಥಾನಾಯಕ ಚಾಲುಕ್ಯ ಸತ್ಯಾಶ್ರಯ ಇಜೆವಬೆಡಂಗ ಇಲ್ಲೂ ಸಹ ಸತ್ಯಾಶ್ರಯನನ್ನು ಮಹಾಭಾರತದ ಭೀಮನೊಂದಿಗೆ ಅಭೇದ ಕಲ್ಪಿಸಿ ಚಾರಿತ್ರಿಕ ವಿಷಯವನ್ನು ತಿಳಿಸುತ್ತಾನೆ. ಸಾಹಸಭೀಮ ವಿಜಯವು ಕಲ್ಯಾಣಿ ಚಾಲುಕ್ಯರ ಇತಿಹಾಸಕ್ಕೆ ಸಂಬಂಧಿಸಿದ ಹತ್ತು ಹಲವು ವಿಷಯಗಳನ್ನೊಳ ಗೊಂಡಿದ್ದು, ಇದು ಚರಿತ್ರೆ ರಚನೆಗೆ ಪೂರಕವಾಗಿದೆ. ಹಾಗೂ ಸತ್ಯಾಶ್ರಯನು ಆಳುತ್ತಿದ್ದ ಕಾಲದ ರಾಜಕೀಯ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತದೆ.

ಪಂಪನ ಕಾವ್ಯ ಮಾರ್ಗವನ್ನು ಅನುಸರಿಸಿದ ಕವಿ ರನ್ನನು ಪಂಪನಂತೆಯೇ ಕಾವ್ಯದ ನಾಂದಿ ಪದ್ಯಗಳಲ್ಲಿ ವಿಷ್ಣು, ಶಿವ, ಸೂರ್ಯ ಮೊದಲಾದ ದೇವತೆಗಳೊಂದಿಗೆ ತನ್ನ ಆಶ್ರಯದಾತನೂ ಹಾಗೂ ಕಾವ್ಯದ ಕಥಾನಾಯಕನೂ ಆದ ಸತ್ಯಾಶ್ರಯನನ್ನು ಶ್ಲೇಷೆಯಿಂದ ಸ್ತುತಿಸಿರುವುದು ಕಂಡುಬರುತ್ತದೆ.

**ಚಾಳುಕ್ಯ ನಾರಾಯಣ ಸತ್ಯಾಶ್ರಯನ ಸ್ತುತಿ**

ಶ್ರೀ ಯುವತಿಪ್ರಿಯಂ ಬಲಯುತಂ ಬಲಿದರ್ಪಹರಂ ಜಿತಾರಿದ್ವೆ
ತೇಯನನಂತ ಭೋಗನಿಲಯಂ ಪ್ರತಿಪಾಲಿತ ಧರ್ಮಚಕ್ರನ
ಬ್ಜಾಯತನೇತ್ರನಾದಿ ಪುರುಷಂ ಪುರುಷೋತ್ತಮನೀಚಳುಕ್ಯ
ನಾರಾಯಣದೇವನೀಗೆಮಗೆ ಮಂಗಳ ಕಾರಣ ಮುತ್ಸವಂಗಳಂ

**ಗದಾಯುದ್ಧ(೧-೧)**

ಲಕ್ಷ್ಮೀಪ್ರಿಯನಾದವನು, ಬಲಿಯ ದರ್ಪವನ್ನು ಅಡಗಿಸಿದವನು, ರಾಕ್ಷಸರನ್ನು(ಶತ್ರುಗಳನ್ನು) ಜಯಿಸಿದವನು, ಅನಂತ ಭೋಗಗಳನ್ನು ಪಡೆದವನು, ಧರ್ಮರಾಯನ ಚಕ್ರಾದಿಪಥ್ಯ (ಧರ್ಮಚಕ್ರಾದಿಪತ್ಯ)ವನ್ನು ಪರಿಪಾಲಿಸಿದವನು, ಕಲ್ಯಾಣಿ ಚಾಲುಕ್ಯರ ಆದಿ ಪುರುಷನು,

ಪುರುಷೋತ್ತಮನು ಆದ ಚಾಳುಕ್ಯ ನಾರಾಯಣನೆಂಬ ಬಿರುದಿನ ಸತ್ಯಾಶ್ರಯದೇವನು ನಮಗೆ ಮಂಗಳಕರವಾದ ಉತ್ಸವಗಳನ್ನು ದಯಪಾಲಿಸಲಿ ಎನ್ನುವುದರ ಮೂಲಕ ಸತ್ಯಾಶ್ರಯನು ಶತ್ರುಗಳನ್ನು ನಾಶ ಮಾಡಿದ ಯುದ್ಧವೀರನೆಂಬುದು ಧರ್ಮದಿಂದ ರಾಜ್ಯಭಾರ ಮಾಡುತ್ತಿದ್ದನೆಂಬ ಐತಿಹಾಸಿಕ ವಿಚಾರಗಳು ವ್ಯಕ್ತವಾಗುತ್ತವೆ. ನಿಜವಾದ ಇತಿಹಾಸ ದಾಖಲೆಗಳು ದೊರೆಯುವುದು ಕವಿಗಳ ಕಾವ್ಯಗಳಲ್ಲೆ.

ಪಂಪನ ಮಾರ್ಗವನ್ನು ಅನುಸರಿಸಿದ ರನ್ನನು ಪಂಪನಂತೆಯೇ ಉದಾತ್ತ ನಾರಾಯಣನ ಬದಲಿಗೆ ಚಾಳುಕ್ಯ ನಾರಾಯಣನೆಂದು ಕರೆದು ನಂತರ ತನ್ನ ಆಶ್ರಯದಾತನನ್ನು ಚಾಳುಕ್ಯ ಮಾರ್ತಾಂಡನೆಂದು(ಚಾಲುಕ್ಯ ವಂಶದ ಸೂರ್ಯ) ಸ್ತುತಿಸುತ್ತಾನೆ. ಅವನು ದಾನದಲ್ಲಿ ವಿಶೇಷ ಗುಣವನ್ನು ಹೊಂದಿದ್ದನೆಂಬ ಅಂಶ ಕವಿ ರನ್ನನ ಕಾವ್ಯದಿಂದಲೇ ತಿಳಿದುಬರುತ್ತದೆ. ಅದಕ್ಕಾಗಿಯೇ 'ದಾನಗುಣದಿಂ ಚಳುಕ್ಯಕಂದರ್ಪನ' ಎಂದು ಸತ್ಯಾಶ್ರಯದ ಅಂದವು ಮನ್ಮಥನ ಅಂದಕ್ಕಿಂತ ಮಿಗಿಲಾದುದು ಎಂಬ ವಿಷಯವನ್ನು ತಿಳಿಸುತ್ತಾನೆ.

ಈ ರೀತಿ ಪಂಪ ರನ್ನರು ಹೇಳುವ ಚಾಲುಕ್ಯರ ಐತಿಹಾಸಿಕ ವಿಷಯಕ್ಕೆ ಸಂಬಂದಿಸಿ ದಂತೆ ಅನೇಕ ಅಂಶಗಳು ಕಾವ್ಯಗಳಿಂದಲೇ ವ್ಯಕ್ತವಾಗುತ್ತವೆ ವಿನಃ ಹೆಚ್ಚಿನ ಶಾಸನಗಳಾಗಲಿ, ದಾಖಲೆಗಳಾಗಲಿ ಲಭ್ಯವಿಲ್ಲ. ಹಾಗಾಗಿ ಇವುಗಳು ಇತಿಹಾಸಕಾರರಿಗೆ ಬಹು ಮುಖ್ಯಾವಾದ ಅಂಶಗಳಾಗಿವೆ.

**ಬನವಾಸಿಯ ವರ್ಣನೆ**

ಪಂಪನು ಕನ್ನಡದ ನೆಲ-ಜಲ ನಾಡು-ನುಡಿ ಸಂಸ್ಕೃತಿಯನ್ನು ಉತ್ಕಟತೆಯಿಂದ ಹೊಗಳಿದ ಕವಿ. ಹಾಗಾಗಿ ಅವನ ನಾಡ ಪ್ರೇಮ ಅಪಾರವಾದುದು. ನಾಡಿನ ಸೌಂದರ್ಯ ವನ್ನು ಹೊಗಳುವ ಪಂಪನಲ್ಲಿ ಸಾಮಾಜಿಕ ಹಾಗೂ ಚಾರಿತ್ರಿಕ ಪ್ರಜ್ಞೆಯ ಉಜ್ವಲತೆಯನ್ನು ಕಾಣಬಹುದು. ದೇಶಪ್ರೇಮಿಯಾದ ಪಂಪನಿಗೆ ಬನವಾಸಿಯ ನೆನಪು ಬಹಳ ಕಾಡಿದೆ. ಅದಕ್ಕಾಗಿಯೇ ಪದ್ಯದ ಮೂಲಕ ನಾಡನ್ನು ನೆನಪಿಸಿಕೊಳ್ಳುತ್ತಾನೆ. ಹಾಗೂ ವರ್ಣಿಸುತ್ತಾನೆ.

ಆರಂಕುಶಮಿಟ್ಟೊಡಂ ನೆನೆವುದೆನ್ನ ಮನಂ
ಬನವಾಸಿ ದೇಶಮಂ ಮರಿದುಂಬಿಯಾಗಿ
ಮೇಣ್ ಕೋಗಿಲೆಯಾಗಿ ಪುಟ್ಟುಗುಂ
ಬನವಾಸಿ ದೇಶದೊಳ್

**ಪಂಪಭಾರತ**

ಇನ್ನೊಂದು ಜನ್ಮವೆನ್ನುವುದೇನಾದರೂ ಇದ್ದರೆ ಮನುಷ್ಯನಾಗಿ ಹುಟ್ಟದಿದ್ದರೂ ಮರಿದುಂಬಿಯಾಗಿಯೋ ಅಥವಾ ಕೋಗಿಲೆಯಾಗಿಯೋ ಈ ಬನವಾಸಿಯಲ್ಲಿಯೇ ಹುಟ್ಟಿ ಬರುವೆನೆಂಬ ಪಂಪನ ನಾಡಪ್ರೇಮ ಅಗಾಧವಾದುದು. ಪಂಪನಿಂದ ಇಂದಿನ ಯುವಕರು ನಾಡಪ್ರೇಮ ಕಲಿಯಬೇಕಿದೆ.

ಪಂಪಭಾರತದ ಮೊದಲ ಆಶ್ವಾಸದಲ್ಲಿ ೫೨ನೇ ಪದ್ಯದಿಂದ ೫೭ನೇ ಪದ್ಯದವರೆಗೆ ನಾಡಸಿರಿಯನ್ನು ವರ್ಣಿಸುವ ಹಲವು ಪದ್ಯಗಳಿವೆ. ಭಾರತ ಕಥೆಯ ಪ್ರಾರಂಭದಲ್ಲಿ ಕುರುಜಾಂಗಣ ದೇಶದ ವರ್ಣನೆಯಲ್ಲಿ ನಾಡಿನ ಸೌಂದರ್ಯದ ಚಿತ್ರಣವಿದೆ. ಹರಿಯುವ ನೀರಿನ ಕಾಲುವೆಗಳು ಆ ಕಾಲುವೆಗಳಲ್ಲಿ ಬಿರಿದ ನೈದಿಲೆಗಳು ಗೊಂಚಲು, ಗೊಂಚಲಾಗಿ ಇಳಿದು ಜೋಲುತ್ತಿರುವ ಭತ್ತದ ತೆನೆಗಳು, ಆ ಭತ್ತದ ಆಸೆಗಾಗಿ ಸಾಲು ಸಾಲಾಗಿ, ಹಿಂಡು ಹಿಂಡಾಗಿ ಬರುವ ಗಿಳಿಗಳು, ಹೀಗೆ ರಮ್ಯವಾಗಿರುವ ದೇಶದ ರಮಣೀಯತೆಯ ದರ್ಶನವನ್ನು ಮಾಡಿಸುವುದರ ಮೂಲಕ ಈ ನಾಡ ಸಿರಿಯನ್ನು ಸಿರಿದೇವಿಯಾದ ಲಕ್ಷ್ಮೀಯು ನೋಡಿ ಆನಂದಪಡುತ್ತಿರುವಳೆಂದು ಕಲ್ಪಿಸುವ ವರ್ಣನೆ ಅಗಾಧವಾಗಿದೆ.

**ಕದಂಬ–ಕಬ್ಬಿಗರ ಕಾವ**

ಸಮಕಾಲೀನ ಚಾರಿತ್ರಿಕ ವಿಷಯವನ್ನು ಪುರಾಣ ಕಥಾ ವಸ್ತುವಿನೊಡನೆ ಸಮೀಕರಿಸುವ ಕೃತಿಗಳ ಸಾಲಿಗೆ 'ಆಂಡಯ್ಯನ' 'ಕಬ್ಬಿಗರ ಕಾವ್ಯ'ವನ್ನು ಸಹ ಸೇರಿಸಬಹುದು. ಈ ಕಾವ್ಯದಲ್ಲಿ ಕಥಾ ನಾಯಕನೊಡನೆ ಆಶ್ರಯದಾತನನ್ನು ಸೇರಿಸಿ ಹೇಳುವುದು ಮಾತ್ರವಲ್ಲದೆ ಇಡೀ ಕಥಾವಸ್ತುವೇ ಚಾರಿತ್ರಿಕ ಧ್ವನಿಯಾಗಿ ಪರಿವರ್ತಿಸುವಲ್ಲಿ ಕವಿ ಆಂಡಯ್ಯ ಯಶಸ್ವಿಯಾಗಿದ್ದಾನೆ. ಇದು ಮುಂದಿನ ಚಾರಿತ್ರಿಕ ಕಾವ್ಯಗಳಿಗೆ ಪೂರ್ವಸೂಚನೆಯಾಗಿ ಪರಿಣಮಿಸಿದೆ. ಪುರಾಣ ಪ್ರಸಿದ್ಧನಾದ ಕಾಮದೇವನ ಕಥೆ ಕಾಮನ ವಿಜಯವನ್ನು ತಿಳಿಸುತ್ತಾ ಜೈನ ಸಂಪ್ರದಾಯದಂತೆ ಕಥಾವಸ್ತುವನ್ನು ಬಳಸಿಕೊಂಡಿದ್ದಾನೆ. ಹಾನಗಲ್ಲಿನ ಕದಂಬ ಕಾಮದೇವನನಿಗೂ, ಪುರಾಣ ಕಾಮನಿಗೂ, ಅಭೇದ ಕಲ್ಪಿಸಿ, ಇಬ್ಬರನ್ನು ಸಮಾವೇಶಗೊಳಿಸಿ, ಚಾರಿತ್ರಿಕ ಕಾವ್ಯವನ್ನು ರಚಿಸಿದ್ದಾನೆ. "ಪುರಾಣ ಪ್ರಸಿದ್ಧ ಕಾಮನ ಕಥೆಯನ್ನು ಹೇಳುತ್ತಲೇ ಕದಂಬ ಕಾಮದೇವನ ರಾಜಕೀಯ ಹೋರಾಟದ ಕಥೆಯನ್ನು ಹೆಣೆಯುತ್ತಾ ಹೋಗುವುದು ಮುಖ್ಯವಾಗಿದೆ. ಆದ್ದರಿಂದ ಇದು 'ಮದನ ವಿಜಯ' ಆಶ್ರಯದಾತನ ವಿಜಯ ಯಾತ್ರೆಯೂ ಆಗಿದೆ."[೪] ಕಾವ್ಯದ ಕಥಾವಸ್ತು ಐತಿಹಾಸಿಕ ಅಂಶಗಳ ಮೇಲೆ ಬೆಳಕು ಚೆಲ್ಲುತ್ತದೆ. ಕವಿ ತನ್ನ ಕೃತಿಗೆ 'ಕಾವನಗೆಲ್ಲ' ಎಂದು ಹೇಳಿರುವುದೇ ಐತಿಹಾಸಿಕ ಧ್ವನಿಯನ್ನು ಪ್ರತಿನಿಧಿಸುತ್ತದೆ. ವಾಸ್ತವವಾಗಿ

ಕಾವನಗೆಲ್ಲ ಕದಂಬ ಎಂದರೆ ಕದಂಬ ಕಾಮನ ಗೆಲುವು ಎಂದೇ ಅರ್ಥ. ಪಂಪನ ದೊರೆ ಅರಿಕೇಸರಿಯಂತೆ ರನ್ನನ ಸತ್ಯಾಶ್ರಯನಂತೆ ಕದಂಬ ಕಾಮನು ಯುದ್ಧವೀರನೆಂಬುದರಲ್ಲಿ ಸಂಶಯವಿಲ್ಲ. ಕಾಮದೇವನನ್ನು "ನನೆವಿಲ್ಲ ಬಲ್ಲಹ"ನೆಂದು ಕರೆಯುತ್ತಾನೆ. ನನೆವಿಲ್ಲ ಎಂದರೆ ಹೂಬಾಣವನ್ನು ಹೊಂದಿದವನು, ಬಲ್ಲಹ ಎಂಬ ಪದ ವಲ್ಲಭ ಪದದ ತದ್ಭವ ರೂಪವಾಗಿದೆ.

ಅವನ ಗಾಡಿ ನೋಡಿದವರಂ ಸಲೆ ಸೋಲಿಸುತಿರ್ಪುದುರ್ಕಿನಿಂ
ದಾವನ ಪೂವಿನಂಬದಟರಂ ತಲೆಬಾಗಿಸುತಿರ್ಪುದೆಳ್ಗೆಯಿಂ।
ದಾವನ ಪಜ್ಜಳಿಪ್ಪ ಜಪಮೆಣ್ದೆಸೆಯೊಳ್ ನೆಲಸಿರ್ಪುದಾತನೀ
ಗಾವಗಮೆನ್ನ ಜಾಣ್ನುಡಿಗೆ ಮೆಯ್ಸಿರಿಯಂ ನನೆವಿಲ್ಲ ಬಲ್ಲಹ॥

**ಕಬ್ಬಿಗರ ಕಾವಂ(೧.೧)**

ಕಬ್ಬಿಗರ ಕಾವ್ಯದ ಈ ಮೊದಲ ಪದ್ಯದಲ್ಲೆ ಕದಂಬ ಕಾಮದೇವ ಸಾಕ್ಷಾತ್ ಕಾಮನಂತೆ ಸುಂದರನಾಗಿದ್ದು, ಅವನ ಚಲುವು ನೋಡಿದವರನ್ನು ಮನಸೋಲುವಂತೆ ಮಾಡುತ್ತಿತ್ತು. ಅವನ ಹೂಬಾಣ ವೀರರನ್ನು ತಲೆಬಾಗಿಸುತ್ತಿತ್ತು, ಅವನ ಕೀರ್ತಿ ಹಾಗೂ ಯಶಸ್ಸು ಎಂಟು ದಿಕ್ಕಿನಲ್ಲೂ ವ್ಯಾಪಿಸಿತ್ತು, ಅವನ ಜಾಣ್ನುಡಿಗೆ ಸೋಲದವರಿಲ್ಲ ಎಂದಿರುವನು.

"ತಿಂಗಳ ಸಿರಿಯಂತೆ ಸೋಲಿಸದೆ" ಎಂಬ ಮಾತು ಇದರಲ್ಲಿ ಬರುತ್ತದೆ. ತಿಂಗಳ ಎನ್ನುವುದಕ್ಕೆ ಹಂಗಳ(ಹಾನಗಲ್ಲು) ಎಂಬ ಅರ್ಥವನ್ನು ಕೊಟ್ಟಿರುವುದರಿಂದ ತಿಂಗಳ ಸಿರಿ ಎನ್ನುವುದಕ್ಕೆ ಹಂಗಳದ ಸಿರಿ(ಹಾನಗಲ್ಲಿನ ಸಿರಿ) ಎಂದಾಗುವುದು. ಹಾನಗಲ್ಲಿನ ಸೊಬಗಿನಂತೆಇರುವ ಕಾಮದೇವನನ್ನು ಕುರಿತಿರುವ ಈ ಕಾವ್ಯ ಯಾರನ್ನಾದರೂ ಸೋಲಿಸದೇ ಇರದು ಎಂಬ ಅರ್ಥ ಪಡೆಯುವುದು."[೫] ಕದಂಬ ರಾಜನಾದ ಕಾಮದೇವನನ್ನು ಅವನ ರಾಜಧಾನಿಯಾದ ಹಾನಗಲ್ಲನ್ನು ಕುರಿತು ವರ್ಣಿಸಲಾಗಿದೆ. ಇದರ ಜೊತೆಗೆ ಆಂಡಯ್ಯನು 'ಕಬ್ಬಿಗರ ಕಾವ್ಯ ನೊಲವಿಂದೊರೆವೆ'(ಪದ್ಯ ೧೬) ಮತ್ತು ನನೆವಿಲ್ಲನ ಬೀರಮನೊಲ್ದು ಪೇಟ್ವೆನಾಂ ತಿಂಗಳ ಸೊಂಪು ಗುಂಪು ವಡೆದೆಣ್ದೆಸೆಗಂ ಪರಿಗೊಂಡುದೆಂಬಿನಂ(ಪದ್ಯ ೧೭) ಕಾಮನ ಮೇಲಿನ ಒಲವಿನಿಂದ ಕಾವ್ಯ ರಚಿಸಿದನೆಂದು ಕವಿ ಹೇಳಿಕೊಂಡಿರುವುದರಿಂದ ಆಂಡಯ್ಯನ ಆಶ್ರಯದಾತ ಕದಂಬ ಕಾಮದೇವನೇ ಎಂದು ತಿಳಿದುಬರುವುದು.

ಕನ್ನಡ ನಾಡು ನುಡಿಗೆ ಸಂಬಂಧಿಸಿದಂತೆ ಆಂಡಯ್ಯ, ನಯಸೇನ ಮಹಲಿಂಗರಂಗ, ಮುದ್ದಣ, ಇವರ ಹೆಸರುಗಳು ಸ್ಮರಣೀಯವಾಗಿವೆ. ದೇಶೀಯ ಪದಗಳನ್ನು ಕನ್ನಡ ಸಾಹಿತ್ಯದಲ್ಲಿ ಬಳಸಬೇಕು. ಅತಿಯಾದ ಸಂಸ್ಕೃತ ಪದಗಳ ವ್ಯಾಮೋಹಕ್ಕೆ ಗುರಿಯಾಗದೇ

ಕನ್ನಡ ಪದಗಳನ್ನೇ ಬಳಸಿ ಕಾವ್ಯರಚಿಸಬೇಕೆಂದು ಘಂಟಾಘೋಷವಾಗಿ ಸಾರಿ ಆ ತತ್ವಗಳಿಗೆ ಅನುಸಾರವಾಗಿ ಕಾವ್ಯರಚನೆ ಮಾಡಿದ ಕವಿಗಳಿವರು. ಸುಲಭವಾದ ಸಂಸ್ಕೃತ–ಕನ್ನಡ ಪದಗಳ ಹದವಾದ ಬೆರಕೆಯ ಭಾಷೆ ಬಳಸಿ, ಜೈನ ಮತದ ಅಮೋಘತತ್ವಗಳನ್ನು ಕಥೆಯ ರೂಪದಲ್ಲಿ ನಿರೂಪಣೆ ಮಾಡಿ, ವಿಷಯ ವಿವರಣೆ ಮಾಡಲು ತನ್ನ ಕಾವ್ಯದಲ್ಲಿ ಮಾಲಾಕಾರದ ಉಪಮೆಗಳನ್ನು ಬಳಸಿ 'ಧರ್ಮಾಂಮೃತ"ವೆಂಬ ಚಂಪೂ ಕಾವ್ಯವನ್ನು ರಚಿಸಿದ ನಯಸೇನನು ಶುದ್ಧಗನ್ನಡದಲ್ಲೆ ಕಾವ್ಯ ರಚಿಸಬೇಕೆಂದು ಹೇಳಿ ಕನ್ನಡದಲ್ಲಿ ಸಂಸ್ಕೃತವನ್ನು ಬೆರಸಿದರೆ, ತುಪ್ಪದಲ್ಲಿ ಎಣ್ಣೆಯನ್ನು ಬೆರಸಿದ ಹಾಗೆ ಜಿಡ್ಡು ಜಿಡ್ಡಾಗುವುದು, ಸರಿಯಲ್ಲ. ಹಾಗೆಯೇ ಸಂಸ್ಕೃತ–ಕನ್ನಡಗಳ ಬೆರಕೆ ಸರಿಯಲ್ಲವೆನ್ನುವನು. ಒಂದು ರೀತಿಯಲ್ಲಿ ನಯಸೇನನು ಸಂಸ್ಕೃತದ ವಿರೋಧಿ ಕನ್ನಡಾಭಿಮಾನಿಯೇ

ಸಕ್ಕದಮಂ ಪೇಳ್ವೊಡೆ ನೆಱೆ
ಸಕ್ಕದಮಂ ಪೇೞ್ಗೆ ಸುದ್ದಗನ್ನಡದೊಳ್ತಂ
ದಿಕ್ಕುವುದೇ ಸಕ್ಕದಮಂ
ತಕ್ಕುದೆ ಘೃತಮಂ ತೈಲಮುಮಂ

**ಧಮಾಂಮೃತ(೧–೪೨)**

ಕನ್ನಡ ಕಾವ್ಯಗಳಲ್ಲಿ ಕನ್ನಡ ಭಾಷೆಯನ್ನು ಬಳಸಿ ಕಾವ್ಯ ರಚಿಸಬೇಕೇ ವಿನಃ ಸಂಸ್ಕೃತ ಭಾಷೆಯ ಬಳಕೆ ಖಂಡಿತ ಸಲ್ಲದು. ಸಂಸ್ಕೃತವನ್ನು ಹೇಳುವ ಮನಸ್ಸಿದ್ದರೆ ಸಂಸ್ಕೃತದಲ್ಲೆ ಬರೆಯಿರಿ, ಶುದ್ಧಗನ್ನಡದಲ್ಲಿ ಸಂಸ್ಕೃತದ ಬೆರಕೆಯಾದರೆ ತೈಲ ಮತ್ತು ತುಪ್ಪದ ಬೆರಕೆಯಾದಂತೆ ರುಚಿಸಲಾರದು. ಹಾಗೂ ಮುತ್ತು ಮೆಣಸುಗಳನ್ನು ಕೋದಂತೆ ವಿಕಾರವಾಗುವುದು ಎಂದು ಹೇಳಿ ಸಂಸ್ಕೃತ ಬಳಕೆಗೆ ಕಡಿವಾಣ ಹಾಕಿದನು.

'ಅನುಭವಾಮೃತ'ವನ್ನು ರಚಿಸಿದ ಮಹಲಿಂಗ ರಂಗ ಕವಿಯು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಕನ್ನಡ ಭಾಷೆ ಮಧುರವಾದುದು, ವಿಶಿಷ್ಟವಾದುದು ಹಾಗೂ ಸರಳ ಸುಂದರವಾದುದೆಂಬುದನ್ನು ತಿಳಿಸುವನು.

ಕನ್ನಡ ಭಾಷೆ ಸುಲಿದ ಬಾಳೆಯ ಹಣ್ಣಿನಂದದಿ
ಕಳಿದ ಸಿಗುರಿನ ಕಬ್ಬಿನಂದದಿ
ಅಳಿದ ಉಷ್ಣದ ಹಾಲಿನಂದದಿ

**ಅನುಭವಾಮೃತ**

ಕನ್ನಡ ಭಾಷೆ ಸುಲಿದ ಬಾಳೆಯ ಹಣ್ಣಿನಂತೆ ಸರಳವಾದುದು. ಸುಲಿದ ಸಿಪ್ಪೆಯ

ಕಬ್ಬಿನಂತೆ, ರಸಭರಿತವಾದುದು ಅಳಿದ ಉಷ್ಣದ ಹಾಲಿನಂತೆ ಮಧುರವಾದುದು. ಲಲಿತ, ಸುಂದರವಾದ ಭಾಷೆಗಿಂತ ಮಿಗಿಲಾದ ಭಾಷೆಯಿಲ್ಲ. ಈ ಭಾಷೆಯಲ್ಲೆ ಮೇಲ್ಮೆಯನ್ನು ಸಾಧಿಸಿದರೆ ಸಾಲದೆ? ಇದಕ್ಕಿಂತ ಬೇರೆ ಇನ್ನೇನಿದೆ ಎಂದು ಪ್ರಶ್ನಿಸುತ್ತಾನೆ.

ಕನ್ನಡ ಕಾವ್ಯಗಳಲ್ಲಿ ಹೆಚ್ಚು ಸಂಸ್ಕೃತ ಪದಗಳನ್ನು ಬಳಸುವ ಕ್ರಮವನ್ನು ಅಲ್ಲಗಳೆದು 'ನೀರಿಳಿಯದ ಗಂಟಲೋಳ್ ಕಡುಬಂ ತುರುಕಿದಂತಾಯ್ತು' ಎಂದು ಮನೋರಮೆಯ ಮೂಲಕ ಹೇಳಿಸಿದ ಮುದ್ದಣ ಕವಿಯೂ ಕೂಡ ಕನ್ನಡಾಭಿಮಾನಿ. "ತಿರುಳ್ಗನ್ನಡ ಬೆಳ್ನುಡಿಯೊಳೆ ಪುರುಳೊಂದೆ ಪೇೞ್ವುದು ಕನ್ನಡ ಕತ್ತುರಿಯಲ್ತೆ" ಎನ್ನುವುದರ ಮೂಲಕ ಕನ್ನಡದ ಕಂಪನ್ನು ಸಾರುತ್ತಾನೆ.

ಆಂಡಯ್ಯನಾದರೋ ವೀರ ಪಂಥದವನು 'ಸೊಗಯಿಪ ಸಕ್ಕದಂ ಬೆರಸಿದಲ್ಲದೆ ಕನ್ನಡದಲ್ಲಿ ಕಬ್ಬಮಂ ಪೇವಿಲಾರರ್' ಎಂಬ ಮೂದಲಿಕೆಯನ್ನು ಎದುರಿಸಿ, ಅಚ್ಚಗನ್ನಡ ಬಿಗಿಯೊಂದಿಗೆ ಕಬ್ಬಿಗರ ಕಾವವನ್ನು ರಚನೆ ಮಾಡಿದನು. ಅಚ್ಚಗನ್ನಡವೆಂದರೆ ತದ್ಭವಗಳು ಸೇರಿದ್ದರೇ, ಅಚ್ಚಗನ್ನಡ ಶಬ್ದಗಳೆಂದು ಕರೆಯುತ್ತಾನೆ. ಆಂಡಯ್ಯನು ಕನ್ನಡದ ಮೇಲೆ ಇಟ್ಟಿರುವ ಅಭಿಮಾನ ಮರೆಯಲಾದೀತೆ.

ಹಲವುಂ ನಾಲಗೆಯುಳ್ಳವಂ ಬಗೆವೊಡೆಂದು ಬಣ್ಣಿಸ
ಲಾಱನಾ ನೆಲನಂ ಮತ್ತಿನ ಮಾನಿಸರ್ ಪೊಗಟಲೇನ ಬಲ್ಲ
ರೆಂಬೊಂದು ಬಲ್ಲಾಲಿಯಂ ನೆಟ್ಟನೆ ತಾಳ್ದು ಕನ್ನಡ
ಮೆನಿಪ್ಪಾ ನಾಡು ಚಲ್ವಾಯ್ತು ಮೆಲ್ಲೆಲ್ಲರಿಂ
ಪೂತಕೊಳಗಳಿಂ ಕೆಱೆಗಳಿಂ ಕಾಲೂರ್ಗಳಿಂ ಕೆಯ್ಗಳಿಂ

**ಕಬ್ಬಿಗರ ಕಾವ್ಯ(೧-೮)**

ಹಲವು ನಾಲಗೆಯನ್ನು ಹೊಂದಿದ ಆದಿಶೇಷನಿಗೆ ಈ ನಾಡನ್ನು ಕುರಿತು ವರ್ಣಿಸಲು ಸಾಧ್ಯವಿಲ್ಲವೆಂದ ಬಳಿಕ, ಮನುಷ್ಯರಿಂದ ಹೇಳಲು ಸಾಧ್ಯವೇ, ಕನ್ನಡನಾಡು ಸುಂದರವಾಗಿದೆ, ಚೆಲುವಾಗಿದೆ. ಇಲ್ಲಿ ಹರಿಯುವ ನದಿಗಳಿವೆ, ಕೆರೆಗಳಿವೆ, ಹಳ್ಳಗಳಿವೆ ಎಂದು ಕನ್ನಡ ನಾಡನ್ನು ಹೃದಯಂಗಮವಾಗಿ ಬಣ್ಣಿಸುವುದನ್ನು ನೋಡಿದರೆ ಯಾರಿಗೆ ತಾನೇ ರೋಮಾಂಚನವಾಗುವುದಿಲ್ಲ. "ನಾಡು-ನುಡಿಗಳ ವೀರಾಭಿಮಾನವನ್ನು ಉಕ್ಕಿಸುವ ಪದ್ಯಗಳನ್ನು ರಚಿಸಿದ ಆಂಡಯ್ಯನ ಸ್ಥಾನ ಕನ್ನಡಿಗರ ಹೃದಯಲ್ಲಿ ಶಾಶ್ವತ."* ಆಂಡಯ್ಯ ತನ್ನ ಗ್ರಂಥದ ಹಿರಿಮೆಯನ್ನು ತಿಳಿಸುತ್ತ

ಅಚ್ಚಗನ್ನಡದಲ್ಲಿ ಕಾವ್ಯ ರಚನೆ ಮಾಡುವುದರ ಅತಿಶಯತೆಯನ್ನು ಹಾಗೂ ಕಾವ್ಯೋದ್ದೇಶವನ್ನು ಸ್ಪಷ್ಟಪಡಿಸುತ್ತಾನೆ.

ಕನ್ನಡ ನಾಡಿನ ಚಲುವಿಕೆಯನ್ನು ಆತ್ಮೀಯವಾಗಿ ಭಾವೋನ್ಮಾದದಿಂದ ಮನಸಾರೆ ಹೊಗಳಿ ಪೂವಿನ ಪೊಳಲಿನ ವೈಭವ ಮತ್ತು ಶ್ರೀಮಂತಿಕೆ, ಅಲ್ಲಿಯ ರಾಜನಾದ ನನೆಯಂಬನ ಶೌರ್ಯ, ಔದಾರ್ಯ, ಗಾಂಭಿರ್ಯ ಹಾಗೂ ಆತನ ಪ್ರತಿಷ್ಠೆಗಳನ್ನು ಪ್ರಶಂಸಿಸುತ್ತಾನೆ. ವಸಂತ ಋತುವಿನ ಆಗಮನವನ್ನು ದೀರ್ಘವಾಗಿ ವರ್ಣಿಸುವ ಆಂಡಯ್ಯ ಹಲವು ನಾಲಿಗೆಯನ್ನು ಹೊಂದಿದ ಆದಿಶೇಷನಿಗೂ ವರ್ಣಿಸಲು ಸಾಧ್ಯವಿಲ್ಲದ ಕನ್ನಡ ನಾಡಿನ ಸೊಬಗನ್ನು ಸಾಮಾನ್ಯ ಮನುಷ್ಯರಿಂದ ವರ್ಣಿಸಲು ಸಾಧ್ಯವೇ? ಎಂದು ಆತ್ಮ ಪ್ರತ್ಯಯದಿಂದ ಹೇಳಿಕೊಂಡಿದ್ದಾನೆ. ಆಂಡಯ್ಯನ ಮಾತಿನ ಅಂತರಾಳದಲ್ಲಿರುವ ದೇಶಪ್ರೇಮ ಈ ಕೆಳಗಿನ ಪದ್ಯದಲ್ಲಿ ಗಮನಿಸಬಹುದು.

ಕನ್ನಡದೊಳ್ಪಿನ ನುಡಿಯಂ
ಮುನ್ನಿದಜೊಳೆ ನೋಡಿ ತಿಳಿದುಕೊಳ್ವುದು ಚದುರರ್
ರನ್ನದ ಕನ್ನಡಿಯಂ ನಲ
ವಿನ್ನೋಡಿದವರಿಗೆ ಕುಂದದೇನಾದಪುದೆ

**ಕಬ್ಬಿಗರಕಾವ(೧-೭)**

ರತ್ನದ ಕನ್ನಡಿಯನ್ನು ಪ್ರೀತಿಯಿಂದ ನೋಡಿದರೇ ಕುಂದುಂಟಾಗುವುದೇ, ಕನ್ನಡ ನುಡಿಯನ್ನು ಚದುರರು ಅರ್ಥಮಾಡಿಕೊಂಡು ಬಳಸಬೇಕು ಎಂದಿರುವನು. ಕನ್ನಡ ನುಡಿ ರತ್ನಕ್ಕಿಂತ ಮಿಗಿಲಾದುದು ಎನ್ನುವನು.

ಕನ್ನಡ ಕಾವ್ಯಗಳಲ್ಲಿ ಪ್ರಾಚೀನ ಕಾಲದಿಂದಲೂ ಚಾರಿತ್ರಿಕ ಸಂಗತಿಗಳು ದೊರೆತಿವೆಯಾದರೂ ಅದನ್ನು ಬಳಸುವ ವಿಧಾನ ಮಾತ್ರ ಬದಲಾಗುತ್ತ ಬಂದಿದೆ. ಇದು ನಂಜುಂಡ ಕವಿಯ ಕಾವ್ಯವಾದ ಕುಮಾರರಾಮನ ಸಾಂಗತ್ಯ ಅಥವಾ ರಾಮನಾಥ ಚರಿತದಿಂದ ಪ್ರಾರಂಭವಾದ ಅಂಶವಾಗಿದೆ. ಪಂಪನಿಂದಲೇ ಪ್ರಾರಂಭವಾದ ಅಂಶವಾಗಿದೆ. ಪಂಪನಿಂದಲೇ ಪ್ರಾರಂಭವಾದ ಕವಿಕಾವ್ಯ ಪರಂಪರೆಯಲ್ಲಿ ಕರ್ನಾಟಕ ಮತ್ತು ಕನ್ನಡ ಕವಿಗಳಿಗೆ ಸಂಬಂಧಿಸಿದಂತೆ ಹಲವು ತೆರನಾದ ವಿಷಯಗಳು ಹಾಗೂ ಕರ್ನಾಟಕದ ಅರಸು ಮನೆತನಗಳಿಗೆ ಸಂಬಂಧಿಸಿರುವಂತೆ ಚಾರಿತ್ರಿಕ ವಿಚಾರಗಳು ಉಪಲಬ್ದವಾಗಿವೆ. ಆದರೆ ಕನ್ನಡದಲ್ಲಿ ಚಾರಿತ್ರಿಕ ಕಾವ್ಯವನ್ನೆ ಬರೆದು

ಪ್ರಸಿದ್ಧನಾದ ಮೊದಲಿಗನೆಂದರೆ ಕವಿ ನಂಜುಂಡ. ಈತನ ಕುಮಾರರಾಮನ ಸಾಂಗತ್ಯ ಕನ್ನಡದ ಮೊದಲ ಐತಿಹಾಸಿಕ ಕಾವ್ಯ. ಇತಿಹಾಸ ವೀರನಾದ ಕುಮಾರರಾಮನ ಕಥೆಯನ್ನೊಳಗೊಂಡಿದೆ. ನಂತರ ತಿರುಮಲಾರ್ಯ ಇತ್ಯಾದಿ ಕವಿಗಳನ್ನು ಹೆಸರಿಸಬಹುದು. ಐತಿಹಾಸಿಕ ಕಾವ್ಯಗಳು ಕರ್ನಾಟಕ ಮತ್ತು ಕನ್ನಡದ ಹಲವು ಸಾಮ್ರಾಜ್ಯಗಳ ವಿಷಯಗಳನ್ನೊಳಗೊಂಡಿರುತ್ತವೆ. ಕುಮಾರರಾಮನ ಸಾಂಗತ್ಯದಲ್ಲಿ ಯುದ್ಧವೀರನಾದ ಕುಮಾರರಾಮನ ಶೌರ್ಯ ಸಾಹಸಗಳು ವ್ಯಕ್ತವಾಗುತ್ತದೆ. ಅಷ್ಟೇ ಅಲ್ಲ ಇದೊಂದು ಸಂಪೂರ್ಣವಾದ ಚಾರಿತ್ರಿಕ ಕಾವ್ಯ ಎಂಬ ಹಿರಿಮೆಗೆ ಪಾತ್ರವಾಗಿದೆ. ಐತಿಹಾಸಿಕ ವೀರನೊಬ್ಬನ ಚರಿತ್ರೆಯನ್ನು ಹೇಳುವುದಷ್ಟೇ ಅಲ್ಲದೆ ಕನ್ನಡ ನಾಡಿನ ಸೌಂದರ್ಯವನ್ನು ಕುರಿತು ವರ್ಣಿಸಿದ್ದಾನೆ.

ಪಲ್ಲವವಿಲ್ಲದ ಮಾವು ಮಾವಿಲ್ಲದ
ಮಲ್ಲಿಗೆ ಮಲ್ಲಿಕಾಲತಿಕೆ
ಯಿಲ್ಲದ ವನ ವನವಿಲ್ಲದ ಭೋಗಿಗ
ಳಿಲ್ಲಾ ದೇಶದೆಡೆಯೊಳ್

**ರಾಮನಾಥ ಚರಿತಂ**

ಈ ಪದ್ಯದಲ್ಲಿ ಕನ್ನಡ ನಾಡಿನ ಹಣ್ಣುಗಳು ಗಿಡ, ಮರ, ಬಳ್ಳಿ, ವನ, ವೃಕ್ಷಗಳನ್ನು ಕುರಿತು ಚಿಗುರಿಲ್ಲದ ಮಾವು, ಮಾವಿಲ್ಲದ ಮಲ್ಲಿಗೆ, ಮಲ್ಲಿಗೆಯ ಬಳ್ಳಿಯಿಲ್ಲದ ವನಗಳು, ವನವಿಲ್ಲದ ಭೋಗಿಗಳಿಲ್ಲಾ, ದೇಶದೆಡೆಯೊಳ್ ಎಂದು ಹೇಳುತ್ತ ಈ ದೇಶ ಸಂಪದ್ಭರಿತವಷ್ಟೇ ಅಲ್ಲದೆ ಕನ್ನಡ ನಾಡಿನವರು, ಈ ಎಲ್ಲ ಸಂಪತ್ತನ್ನು ಪಡೆದ ಭೋಗಿಗಳಾಗಿದ್ದಾರೆಂದು ಹೇಳುತ್ತಾನೆ.

ನಡೆವಕ್ಕಿ ನುಡಿವಕ್ಕಿ ಪೊಣರ್ವಕ್ಕಿ
ಪಡಿಯರವಕ್ಕಿ ಕೇಳಿಸುವಾ
ಗೆಡೆವಕ್ಕಿ ಗರಿಗಣ್ವಕ್ಕಿಗಳಾ ನೆಲ
ದೆಡೆಯ ಬನದೊಳಿರುತಿಹುದು

**ಕುಮಾರರಾಮನ ಸಾಂಗತ್ಯ**

ಕನ್ನಡ ನಾಡಿನ ಪಕ್ಷಿ ಸಂಕುಲವನ್ನು ಕುರಿತಿರುವ ಈ ಪದ್ಯ ನಂಜುಂಡ ಕವಿಯ ಪ್ರಸಿದ್ಧವಾದ ಪದ್ಯವಾಗಿದೆ. ಕನ್ನಡ ನಾಡಿನ ಬನದಲ್ಲಿ ಹಂಸ, ಗಿಳಿ, ರತ್ನಪಕ್ಷಿ, ನವಿಲು, ಕೋಗಿಲೆ ಇತ್ಯಾದಿ ಪಕ್ಷಿಗಳು ಈ ನೆಲದ ಬನದಲ್ಲಿ ಇರುತಿಹವು.

ವೀರರಲ್ಲದೆ ಹಂದೆಗಳು ವಿತರಣಗುಣ

ಶೂರರಲ್ಲದೆ ಲೋಬಿಗಳು
ಸಾರಗುಣಗ್ರಾಹಿ ರಸಿಕರಲ್ಲದೆ ದುರ್ವಿ
ಕಾರಿಗಳಿಲ್ಲಾ ನೆಲದೊಳು

**ರಾಮನಾಥ ಚರಿತ**

ಕನ್ನಡನಾಡು ಯಾವಾಗಲೂ ವೀರರಿಂದ ಮೆರೆಯುತ್ತಿರುವ ಭೂಮಿಯಾಗಿದೆ. ಇಲ್ಲಿ ವೀರರಲ್ಲದೆ ಹೇಡಿಗಳು ದಾನಿಗಳಲ್ಲದೆ, ಲೋಬಿಗಳು, ಸರ್ವಗುಣ ಸಂಪನ್ನರಲ್ಲದೆ ವಿಕಾರಿಗಳು ಈ ಭೂಮಿಯಲಿಲ್ಲ ಎನ್ನುತ್ತ, ಕರ್ನಾಟಕ ವೀರರಿಗೆ, ದಾನಿಗಳಿಗೆ, ರಸಿಕರಿಗೆ, ಉದಾರಿಗಳಿಗೆ ವೀರರಿಗೆ ತಾಣವಾಗಿದೆ ಎಂದಿರುವನು.

ವಿರೂಪಾಕ್ಷ ಪಂಡಿತನು ತನ್ನ ಚನ್ನಬಸವ ಪುರಾಣದಲ್ಲಿ ನಾಡವರ್ಣನೆಯನ್ನು ಮಾಡುತ್ತಾನೆ.

"ಅಲ್ಲಿಗಲ್ಲಿಗೆ ಬೆಳೆದ ಬೆಳೆಗಳಿಂ ಮೆಳೆಗಳಿಂ
ದಲ್ಲಿ ಗಲ್ಲಿಗೆ ವನಸ್ಥಳಗಳಂ ಕೊಳಗಳಿಂ
ದಲ್ಲಿಗಲ್ಲಿಗೆ ರನ್ನದರೆಗಳಿಂ ಕೆರೆಗಳಿಂ ಪರಿವ ಪರಿಕಾಲ್ಗಳಿಂದೆ
ಅಲ್ಲಿಗಲ್ಲಿಗೆ ತೋರ್ಪ ಗಿರಿಗಳಿಂ ಕರಿಗಳಿಂ
ದಲ್ಲಿಗಲ್ಲಿಗೆ ನೆರೆದ ಶುಕಗಳಿಂ ಪಿಕಗಳಿಂ
ದಲ್ಲಿಗಲ್ಲಿಗೆ ಗವಾಸ್ಪದಗಳಿಂ ನದಗಳಿಂ ದೇಶ ಮೊಪಿರ್ದುದು"

**ಚನ್ನಬಸವಪುರಾಣ**

ವಿರೂಪಾಕ್ಷ ಪಂಡಿತನ ಈ ಮೇಲಿನ ನಾಡವರ್ಣನೆಯ ಪದ್ಯ ನಂಜುಂಡ ಕವಿಯ ಕುಮಾರರಾಮನ ಸಾಂಗತ್ಯದ ನಾಡವರ್ಣನೆಯ ಪದ್ಯಗಳನ್ನು ಹೋಲುತ್ತದೆ. ಅಲ್ಲಲ್ಲಿ ಬೆಳೆದ ಬೆಳೆಗಳು ಪೊದೆಗಳು ಕೊಳಗಳು ರನ್ನದರೆಗಳಂ ಕೆರೆಗಳು ಕಾಲುವೆಗಳು ಹಾಗೂ ಅಲ್ಲಲ್ಲಿ ಕಾಣುವ ಗಿರಿಗಳು, ಆನೆಗಳು ಗುಂಪಾಗಿ ಸೇರಿದ ಗಿಳಿಗಳು ಕೋಗಿಲೆಗಳು ಗುಹೆಗಳು ಸಮುದ್ರಗಳಿಂದ ಕೂಡಿದ ಈ ದೇಶದ ಚೆಲುವು ರಮ್ಯವಾಗಿದೆ.

ಕರ್ನಾಟಕಕ್ಕೆ ಸಂಬಂಧಿಸಿದಂತೆ ಐತಿಹಾಸಿಕ ಚಿತ್ರವನ್ನೊಳಗೊಂಡ ಮತ್ತೊಂದು ಚಾರಿತ್ರಿಕ ಕಾವ್ಯವೆಂದರೆ ಗೋವಿಂದ ವೈದ್ಯನಿಂದ ರಚಿತವಾದ 'ಕಂಠೀರವ ನರಸರಾಜ ವಿಜಯ' ಈ ಕಾವ್ಯದಲ್ಲಿ ಕರ್ನಾಟಕದ ಜನರ ರೀತಿ–ನೀತಿಯನ್ನು ಯಾವ ರೀತಿಯಲ್ಲಿ ವರ್ಣಿಸಲಿ ಎಂದಿರುವ ಪದ್ಯವಿದು.

ಜಾತಿ ಸಂಕರವಿಲ್ಲ ಜಡದೇಹಿಗಳಿಲ್ಲ

ನೀತಿಹೀನರು ಚೋರರಿಲ್ಲ
ಘಾತುಕರಿಲ್ಲ ದುರ್ಜನರಿಲ್ಲ ಕರ್ಣಾಟಕ
ರೀತಿಯನೆಂತು ಬಣ್ಣಿಪೆನು

**ಕಂಠೀರವ ನರಸರಾಜ ವಿಜಯ**

ಕರ್ನಾಟಕದಲ್ಲಿ ಅವನ ಕಾಲಕ್ಕೆ ಜಾತಿ–ಮತ ಕುಲ–ಗೋತ್ರ ಇತ್ಯಾದಿ ಭಿನ್ನ ಭೇದಗಳಿರಲಿಲ್ಲ. ಅದಕ್ಕಾಗಿ

ಕನ್ನಡದ ನೆಲದಲ್ಲಿ ವರ್ಣಸಂಕರವಿಲ್ಲ, ಜಾತಿ–ಕುಲ–ಗೋತ್ರ ಇತ್ಯಾದಿಗಳಿಲ್ಲ, ಜಡದೇಹಿ ಗಳಿಲ್ಲ, ನೀತಿ ಹೀನರಿಲ್ಲ, ಕಳ್ಳಕಾಕರಿಲ್ಲ, ಇನ್ನೊಬ್ಬರಿಗೆ ತೊಂದರೆ ಕೊಡುವ ಜನ ಮೊದಲೇ ಇಲ್ಲ. ಕರ್ನಾಟಕದ ಜನತೆಯ ರೀತಿ ನೀತಿಯನ್ನು ಏನೆಂದು ಬಣ್ಣಿಸಲಿ ಎನ್ನುವುದರ ಮೂಲಕ ಕನ್ನಡ ನಾಡು ಸಂಸ್ಕೃತಿಯ ತವರುಮನೆಯಾಗಿತ್ತು. ಆಚಾರವಂತರ, ಸುಸಂಸ್ಕೃತರ ಬೀಡಾಗಿತ್ತು ಎಂಬ ಅಂಶವನ್ನು ತಿಳಿಯಬಹುದು.

ಕಟ್ಟೆಂಬ ಮಾತಿಲ್ಲ ಕುಟ್ಟೆಂಬ ನುಡಿಯಿಲ್ಲ
ಕೊಟ್ಟು ಬೇಡುವ ಜನವಿಲ್ಲ।
ಕಟ್ಟು ಕುಟ್ಟೆಂಬರು ಮನೆಯನು ಭತ್ತವ
ಕೊಟ್ಟು ಬೇಡುವರು ಮುನಿಗಳ॥

**ಪದ್ಮಾವತಿ ಚರಿತೆ(ಪದ್ಮನಾಭ)**

ಈ ಪದ್ಯದಲ್ಲಿ ಕರ್ನಾಟಕದ ಜನತೆಯ ತ್ಯಾಗಗುಣವನ್ನು ಕುರಿತು ವಿವರಿಸುತ್ತಾನೆ. ಇವರು ದಾನದಲ್ಲಿ ಶರಣರು ಕೊಟ್ಟ ನಂತರ ಮರಳಿ ಬೇಡುವವರಲ್ಲ. ಗುಣದಲ್ಲಿ ತ್ಯಾಗಿಗಳು ಯೋಗಿಗಳಿಗಂತೂ ಮೊದಲು ದಾನ ಮಾಡುವರು ಎಂದಿರುವರು.

ಪಲ್ಲವವಿಲ್ಲದ ಮಾವು ಮಾವಿಲ್ಲದ ಮಲ್ಲಿಗೆ
ಮಲ್ಲಿಗೆಯಿಲ್ಲದ ವನ ವನವಿಲ್ಲದ ಬೋಗಿ
ಗಳಿಲ್ಲಾ ದೇಶದೆಡೆಯೋಳ್

**ರಾಮನಾಥಚರಿತಂ**

ಕನ್ನಡ ನಾಡಿನ್ನಲಿ ಮಾವು ಮಲ್ಲಿಗೆಯ ವನಗಳು ತುಂಬಿರುವವು. ಮುಡಿಯುವ ಅನುಭವಿಸುವ ಭೋಗಿಗಳಿಗೂ ಕೊರತೆಯಿಲ್ಲ ಎನ್ನುವನು.

ಹೀಗೆ ಕನ್ನಡ ನಾಡು ಸುಂದರವಾಗಿದೆ ಎನ್ನುವುದನ್ನು ಕುರಿತು ಹಲವು ಕವಿಗಳು

ತಮ್ಮದೆ ಆದ ರೀತಿಯಲ್ಲಿ ವರ್ಣಿಸಿದ್ದಾರೆ. ಬಿಟ್ಟುಬಿಡದೆ ಕಾಣುವ ಸರೋವರಗಳು, ತೊರೆಗಳು, ಕೆರೆಗಳು ನುಡಿಗೋಚರವಾದ ಬಗೆ-ಮೃಗಗಳಿಂದ ಕೂಡಿದ ಮಣಿಮಯವಾದ ಬೆಟ್ಟಗಳಿಂದ ಹಳ್ಳಿಗಳಿಂದ ಕೂಡಿದ, ಉದ್ಯಾನ ವನಗಳಿಂದ ಶೋಭಿಸುವ ಸೊಂಪಿನ ಇಂಪಿನ ಬಂಗಾರ ಬೆಳೆಯುವ ಭೂಮಿ ಹಲವು ಪಶು-ಪಕ್ಷಿಗಳು ಉಲಿಯುವ, ಸುಂದರವಾದ ನೀರೆಯರು ವಾಸಿಸುವ ನಾಡಸಿರಿಯನ್ನು ಅದೇನೆಂದು ಬಣ್ಣಿಸಲಿ ಎಂದಿರುವರು.

**ಅಡಿಟಿಪ್ಪಣಿಗಳು**

೧. ರಾಮೇಗೌಡ, **ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು,** ಪು.೯

೨. ಅದೇ, ಪು.೧೧

೩. ಅದೇ, ಪು.೧೩

೪. ಅದೇ, ಪು.೧೮

೫. ಅದೇ, ಪು೩೦

೬. ಆಂಡಯ್ಯ, **ಕಬ್ಬಿಗರ ಕಾವ್ಯ,** ಪು.೨೦

ಅಧ್ಯಾಯ ಆರು

# ನಾಂದಿ ಪದ್ಯಗಳಲ್ಲಿ ವ್ಯಕ್ತವಾಗುವ ಕಾವ್ಯಮೀಮಾಂಸೆ

ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಕವಿಗಳು ಪೀಠಿಕಾ ಪದ್ಯಗಳಲ್ಲಿ ಕಾವ್ಯ ಮೀಮಾಂಸೆಗೆ ಸಂಬಂಧಿಸಿದಂತೆ ವಿಶೇಷವಾದ ಚರ್ಚೆಯನ್ನು ಮಾಡಿರುವರು. ಕಾವ್ಯ ಎಂದರೇನು? ಕಾವ್ಯದ ಸ್ವರೂಪ ಲಕ್ಷಣಗಳೇನು ಎಂಬ ಪದ್ಯಗಳು ನಾಂದಿ ಪದ್ಯಗಳಲ್ಲಿ ಕಂಡುಬರುತ್ತವೆ. ಕಾವ್ಯಾರಂಭದಲ್ಲಿ ದೊರೆಯುವ ಪೀಠಿಕಾ ಪದ್ಯಗಳಲ್ಲಿ ಕಂಡುಬರುವ ಕಾವ್ಯಮೀಮಾಂಸೆಯನ್ನು ತಿಳಿಯುವ ಪೂರ್ವದಲ್ಲಿ ಕಾವ್ಯಮೀಮಾಂಸೆ ಎಂದರೇನು? ಎಂಬುದನ್ನು ತಿಳಿದುಕೊಳ್ಳುವುದು ಅತಿ ಅಗತ್ಯವಾಗಿದೆ.

**ಕಾವ್ಯಮೀಮಾಂಸೆ**

ಕಾವ್ಯದ ಸ್ವರೂಪ ಲಕ್ಷಣಗಳನ್ನು ತಿಳಿಸುವುದೇ ಕಾವ್ಯಮೀಮಾಂಸೆ. ಮೀಮಾಂಸೆ ಎಂದರೆ ಚರ್ಚೆ ಅಥವಾ ಚಿಂತನೆ ಎಂದು ಅರ್ಥ. “ಕಾವ್ಯ ಮೀಮಾಂಸೆ ಎಂಬ ಪದ ಬಳಕೆಗೆ ಬಂದುದು ೯ನೆಯ ಶತಮಾನದ ವೇಳೆಗೆ. ಇದು ಅಲಂಕಾರಿಕನಾದ ರಾಜಶೇಖರನ ಕೃತಿಯಲ್ಲಿಯೇ ಕಾಣಸಿಗುತ್ತದೆ. ಈತನ ಅಲಂಕಾರ ಕೃತಿಯ ಹೆಸರೆ “ಕಾವ್ಯಮೀಮಾಂಸೆ” ಕಾವ್ಯಮೀಮಾಂಸೆಗೆ ಮೊದಲು ಅಲಂಕಾರ ಅಥವಾ ಕಾವ್ಯಾಲಂಕಾರ ಎಂಬ ಹೆಸರಿತ್ತು. ಉತ್ತಮವಾದ ಸಾಹಿತ್ಯ ವಿಮರ್ಶೆ ನಡೆಸಲು ಕಾವ್ಯಮೀಮಾಂಸೆ ಅತ್ಯಗತ್ಯವಾಗಿ ಬೇಕು. ಕಾವ್ಯಮೀಮಾಂಸೆಯಲ್ಲಿ ಕವಿ ಕಾವ್ಯ ಲಕ್ಷಣ ಸ್ವರೂಪದೊಂದಿಗೆ ಕಾವ್ಯಪ್ರಭೇದಗಳು ಅಲಂಕಾರ, ರೀತಿ, ರಸ ಧ್ವನಿ ಮುಂತಾದ ವಿಷಯಗಳಿಗೆ ಸಂಬಂಧಪಟ್ಟಂತೆ ಶಾಸ್ತ್ರೀಯವಾದ ವಿವೇಚನೆ ಇರುತ್ತದೆ. ಭಾರತೀಯ ಕಾವ್ಯ ಮೀಮಾಂಸೆಯಲ್ಲಿ ಕವಿ, ಸಹೃದಯ ಕಾವ್ಯದ ಉದ್ದೇಶ, ಸ್ವರೂಪ, ಪ್ರಯೋಜನ ಆಲಂಕಾರ, ರೀತಿ ರಸ, ಧ್ವನಿ

ಇತ್ಯಾದಿಗಳ ಬಗೆ ವಿವರವಾದ ವಿವೇಚನೆ ನಡೆದಿರುತ್ತದೆ. ಕಾವ್ಯಮೀಮಾಂಸೆಗೆ ಆಂಗ್ಲ ಭಾಷೆಯಲ್ಲಿ poetics ಎಂದು ಕರೆಯುತ್ತಾರೆ. ಗ್ರೀಕ್ ದೇಶದ ತತ್ವಜ್ಞಾನಿಯಾದ ಅರಿಸ್ಟಾಟಲ್ ಪೊಯಟಿಕ್ಸ್ ಎಂಬ ಕೃತಿ ರಚನೆ ಮಾಡಿ ಪ್ರಸಿದ್ಧನಾಗಿದ್ದಾನೆ. ಭಾರತದಲ್ಲೂ ಹಲವಾರು ಮೀಮಾಂಸಕರು ಕಾವ್ಯಮೀಮಾಂಸೆಯನ್ನು ರಚಿಸಿದ್ದಾರೆ. ಅವರಲ್ಲಿ ದಂಡಿ ಕಾವ್ಯದರ್ಶ ಬಾಮಹ(ಧ್ವನ್ಯಾಲೋಕ) ವಾಮನ ಕಾವ್ಯಾಲಂಕಾರ ಸೂತ್ರ ವೃತ್ತಿ ಆನಂದವರ್ದನ(ಧ್ವನ್ಯಾಲೋಕ) ಕುಂತಕ(ವಕ್ರೋಕ್ತಿ) ಜೀವಿತ ವಿಶ್ವನಾಥ(ಸಾಹಿತ್ಯ ದರ್ಪಣ) ಇತ್ಯಾದಿ ಪ್ರಮುಖ ಮೀಮಾಂಸಾ ಕೃತಿಗಳನ್ನು ಹೆಸರಿಸಬಹುದು.

**ಅಲಂಕಾರ**

ಅಲಂಕಾರ ಶಾಸ್ತ್ರವೇ ಕಾವ್ಯಮೀಮಾಂಸೆಯಾಗಿ ಬೆಳೆದಿದೆ. ಅಲಂಕಾರಕ್ಕೆ, ಸಂಬಂಧಪಟ್ಟ ಮೊದಲ ಕೃತಿ ಭರತನ ನಾಟ್ಯಶಾಸ್ತ್ರ ಈ ಕೃತಿಯಿಂದ ಅಲಂಕಾರ ಶಾಸ್ತ್ರಕ್ಕೆ ಸಂಬಂಧಪಟ್ಟ ಕೆಲವು ಅಂಶಗಳು ತಿಳಿದುಬರುತ್ತವೆ. ಅವು ನಾಟ್ಯಾಲಂಕಾರ ವರ್ಣಾಲಂಕಾರ ಇತ್ಯಾದಿ ಅಲಂಕಾರಕ್ಕೆ ಸಂಬಂಧಿಸಿದ ಇತಿಹಾಸವನ್ನು ಗಮನಿಸಲು ಬಾಹಮನ ಕಾವ್ಯಾಲಂಕಾರ ಉತ್ತಮ ಕೃತಿಯಾಗಿದೆ. ನಂತರ ದಂಡಿಯ ಕಾವ್ಯಾದರ್ಶ, ವಾಮನನ ಕಾವ್ಯಲಂಕಾರ ಸೂತ್ರವೃತ್ತಿ ಇವು ಅಲಂಕಾರ ಶಾಸ್ತ್ರ ಸಂಬಂಧಿಯಾದ, ಇತರ ಕೃತಿಗಳು ಅಲಂಕಾರ ಶಾಸ್ತ್ರದಲ್ಲಿ ಶಬ್ದಾಲಂಕಾರ ಮತ್ತು ಅರ್ಥಾಲಂಕಾರಗಳಿರುತ್ತವೆ. ಶಬ್ಧಾಲಂಕಾರದಲ್ಲಿ ಅನುಪ್ರಾಸ, ಯಮಕ ಚಿತ್ರಕವಿತ್ವಗಳಿದ್ದರೆ, ಅರ್ಥಾಲಂಕಾರದಲ್ಲಿ ಉಪಮೆ, ರೂಪಕ, ದೀಪಕ ದೃಷ್ಟಾಂತ, ಉತ್ಪ್ರೇಕ್ಷೆ ಮತ್ತು ಸ್ವಭಾವೋಕ್ತಿಗಳಿರುತ್ತವೆ. ಕನ್ನಡ ಕಾವ್ಯದಲ್ಲಿ ಉಪಮೆಗಳನ್ನು ಹೆಚ್ಚು ಬಳಸಿ ಕಾವ್ಯ ರಚಿಸಿದವನು ಲಕ್ಷ್ಮೀಶನಾದರೆ, ರೂಪಕಗಳನ್ನು ಬಳಸಿದವನು ಕುಮಾರವ್ಯಾಸ. ಇವರಿಗೆ ಉಪಮಾಲೋಲ ಮತ್ತು ರೂಪಕ ಸಾಮ್ರಾಜ್ಯದ ಚಕ್ರವರ್ತಿ ಎಂಬ ಬಿರುದುಗಳೇ ಬಂದಿವೆ.

ಪ್ರಾಚೀನ ಭಾರತೀಯ ಕಾವ್ಯ ಪರಂಪರೆಯಲ್ಲಿ ಕಾವ್ಯ ಎಂದರೇನು? ಅದರ ಲಕ್ಷಣವೇನು? ಎಂಬುದನ್ನು ಕವಿಗಳು ತಮ್ಮ ಕಾವ್ಯಾರಂಭದ ಮೀಮಾಂಸಾ ಪದ್ಯಗಳ ಮೂಲಕ ವಿವರಿಸುತ್ತಾರೆ. ಅಂದರೆ ಪ್ರಾಚೀನ ಕವಿಗಳ ಕಾವ್ಯಗಳಲ್ಲೂ ಕಾವ್ಯ ಮೀಮಾಂಸೆಗೆ ಸಂಬಂಧಿಸಿದ ಕೆಲವು ಪದ್ಯಗಳಿವೆ. ಕನ್ನಡ ಕವಿಗಳು ಕಾವ್ಯಲಕ್ಷಣವನ್ನು ಕುರಿತ ಕೃತಿಗಳಲ್ಲಿ ತಮ್ಮ ಕಾವ್ಯದ ಒಂದು ಅಂಗವಾಗಿ ಕಾವ್ಯ ಚರ್ಚೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆನ್ನುವುದು ಬಹು ಮುಖ್ಯವಾದ ಅಂಶವಾಗಿದೆ. ಆದರೆ ಸಂಸ್ಕೃತ ಭಾಷೆಯಲ್ಲಿ ಕಾವ್ಯವೇ ಬೇರೆ, ಕಾವ್ಯ ಮೀಂಆಂಸೆಯೇ ಬೇರೆ ಎಂಬಂತೆ ಕಂಡುಬರುತ್ತದೆ. ಆದರೆ

ಕನ್ನಡದಲ್ಲಿ ಹಾಗಲ್ಲ ಕಾವ್ಯದಲ್ಲೆ ಕಾವ್ಯಮೀಮಾಂಸೆ ಇರುತ್ತದೆ. ಹಾಗೂ ಕಾವ್ಯ ಮೀಮಾಂಸೆಗೆ ಸಂಬಂಧಿಸಿದ ಪ್ರತ್ಯೇಕ ಕೃತಿಗಳೂ ದೊರೆಯುತ್ತವೆ. ಆ ಪ್ರತ್ಯೇಕ ಕೃತಿಗಳ ಜೊತೆಗೆ ಕಾವ್ಯದ ಪೀಠಿಕಾ ಭಾಗದಲ್ಲಿ ಕಾವ್ಯ ಎಂದರೇನು? ಕವಿತೆಯ ಆಕರ, ಪರಿಕರ, ಕಾವ್ಯ ಪ್ರಯೋಜನ, ಕಾವ್ಯದ ಲಕ್ಷಣ ಇತ್ಯಾದಿಗಳನ್ನು ಚರ್ಚಿಸಿ ಆ ಮೂಲಕ ತಮ್ಮ ಕಾವ್ಯ ಕಲ್ಪನೆಯನ್ನು ರೂಪಿಸುವ ಪದ್ಧತಿಯೊಂದನ್ನು ರೂಢಿಸಿಕೊಂಡಿದ್ದಾರೆ. "ಕನ್ನಡ ಅಲಂಕಾರ ಗ್ರಂಥಗಳಲ್ಲಿರುವ ಸಂಗತಿಗಳಾಗಲಿ, ಕನ್ನಡ ಕವಿಗಳು ತಮ್ಮ ಕಾವ್ಯಗಳ ಪೀಠಿಕಾ ಪ್ರಕರಣಗಳಲ್ಲಿರುವ ಕಾವ್ಯ ವಿಷಯಕವಾದ ಸಂಗತಿಗಳಾಗಲಿ, ಇರುವ ಕಾವ್ಯ ಮೀಮಾಂಸೆಯ ಹಿನ್ನಲೆ ಮೂಲತಃ ಸಂಸ್ಕೃತದ್ದೇ ಆದರೆ ಅವುಗಳನ್ನು ಗ್ರಹಿಸಿ ನಿರೂಪಿಸುವ ಕ್ರಮದಲ್ಲಿ ಕನ್ನಡ ಲಾಕ್ಷಣಿಕರಿಗೂ ಹಾಗೂ ಕನ್ನಡ ಕವಿಗಳಿಗೂ ಗುರುತಿಸುವಂತಹ ವ್ಯತ್ಯಾಸವಿದೆ."[೧]

ಕನ್ನಡ ಕಾವ್ಯಕ್ಕೆ ವಿಶಿಷ್ಟವೆಂಬಂತೆ ತೋರುವ ಕಾವ್ಯಾಂತರರ್ಗತವಾದ ಕಾವ್ಯ ಚರ್ಚೆಯೊಂದು ಪ್ರಾರಂಭವಾದುದು ಬಹುಶಃ ಜಿನಸೇನಾಚಾರ್ಯರ ಪೂರ್ವ ಪುರಾಣದಿಂದಲೇ ಎಂದು ಕಾಣುತ್ತದೆ. ಇದು ಸಂಸ್ಕೃತ ಕೃತಿಯಾದರೂ ಅದುವರೆಗಿನ ಸಂಸ್ಕೃತ ಕಾವ್ಯದಲ್ಲಿ ಇಲ್ಲದ ಒಂದು ಪದ್ಧತಿಯಾಗಿದೆ. ಪೂರ್ವ ಪುರಾಣದ ಪೀಠಿಕಾ ಪದ್ಯಗಳಲ್ಲಿ ಕಾವ್ಯ ಲಕ್ಷಣ, ಕಾವ್ಯದ ವಸ್ತು, ರೀತಿ, ಪ್ರಯೋಜನ ಅಕವಿ–ಕುಕವಿ ವಿಚಾರಗಳು ವ್ಯಕ್ತವಾಗಿವೆ.

ಕನ್ನಡದ ಮೊದಲ ಕೃತಿ ಕವಿರಾಜ ಮಾರ್ಗದಲ್ಲೂ ಆರಂಭದ ಪದ್ಯಗಳಲ್ಲಿ ಕಾವ್ಯ ಪ್ರಯೋಜನ, ಕಾವ್ಯ ಲಕ್ಷಣ, ಅಲಂಕಾರ, ಗದ್ಯ ಮತ್ತು ಪದ್ಯ ಕಾವ್ಯಗಳ ಕುರಿತು ಕಾವ್ಯಮೀಮಾಂಸೆ ವ್ಯಕ್ತವಾಗಿದೆ.

**ಕಾವ್ಯ ಪ್ರಯೋಜನ**

ಪಾಪಮಿದು ಪುಣ್ಯಮಿದು ಹಿತ
ರೂಪಮಿದಹಿತ ಪ್ರಕಾರಮಿದು ಸುಖಮಿದು ದುಃ
ಖೋ ಪಾತ್ರಮಿದೆಂದಜೆಪುಗು
ಮಾ ಪರಮ ಕವಿ ಪ್ರಧಾನರಾ ಕಾವ್ಯಂಗಳ್

ಕವಿರಾಜಮಾರ್ಗ(೧–೧೮)

ಕಾವ್ಯ ಪ್ರಯೋಜನಕ್ಕೆ ಸಂಬಂಧಿಸಿರುವ ಈ ಪದ್ಯದಲ್ಲಿ ಇದು ಪಾಪ, ಇದು ಪುಣ್ಯ ಇದು ಹಿತಕರ ಇದು ಅಹಿತಕರ ಇದು ಸುಖ, ಇದು ದುಃಖದ ಪರಿ ಎಂದು ಪರಮಶ್ರೇಷ್ಠ ಕವಿಗಳ ಕಾವ್ಯಗಳು ತಿಳಿಸಿಕೊಡುತ್ತವೆ. ಎನ್ನುವುದರ ಮೂಲಕ ಶ್ರೇಷ್ಠ ಕವಿಗಳ ಕಾವ್ಯಗಳಿಂದ

ಒಳ್ಳೆಯದಾವದು, ಕೆಟ್ಟದ್ದು ಯಾವುದು ಎಂಬುದನ್ನು ತಿಳಿದುಕೊಳ್ಳಬಹುದು ಇದುವೆ ಕಾವ್ಯಪ್ರಯೋಜನ ಎಂದು ಹೇಳುವನು.

ಲೌಕಿಕ ಸಾಮಯಿಕೋರುವಿ
ವೇಕಮುಮಭ್ಯುದಯ ಪರಮ ನಿಃಶ್ರೇಯಸಮುಂ
ಪ್ರಾಕಟಮಕ್ಕಂ ಪ್ರಯೋಗ ಪದ ಪದ್ದತಿಯೊಳ್

**ಕವಿರಾಜಮಾರ್ಗ(೧.೧೯)**

ಕಾವ್ಯಾಧ್ಯಯನದಿಂದ ಲೌಕಿಕ ಮತ್ತು ಸಾಯಯಿಕ (ಸಮಯಕ್ಕೆ ತಕ್ಕ) ವಿವೇಕ ಪರತೆ, ವ್ಯವಹಾರ ಜ್ಞಾನ, ಜೀವನದ ಅಭ್ಯುದಯ, ಶ್ರೇಯಸ್ಸು ದೊರಕುತ್ತದೆ ಎನ್ನುವನು. ಲೌಕಿಕ ಮತ್ತು ಸಾಮಯಿಕ ಜ್ಞಾನಗಳು ಕಾವ್ಯದಿಂದ ದೊರೆಯುವ ಕಾವ್ಯ ಪ್ರಯೋಜನಗಳು.

ಅಧಿಕೃತ ಸತ್ಪುರುಷಾರ್ಥ
ಪ್ರಧಾನ ಧರ್ಮ, ಅರ್ಥ ಕಾಮ ಮೋಕ್ಷಂಗಳ್
ವಿಬುಧಜನ ವಿವಿಕ್ತ ಕಾವ್ಯ ಪರಧಾರಿತಾ
ರ್ಥಂಗಳೆಖಿಳ ಭುವನ ಹಿತಂಗಳ್

**ಕವಿರಾಜಮಾರ್ಗ(೧.೨೦)**

ಕವಿರಾಜಮಾರ್ಗಕಾರನಂ ಕಾವ್ಯ ಪ್ರಯೋಜನಗಳನ್ನು ಕುರಿತು ಹೇಳುತ್ತ ಕಾವ್ಯದಿಂದ ಮೋಕ್ಷ ದೊರಕುತ್ತದೆ. ಅಷ್ಟೇ ಅಲ್ಲದೆ ಅಧಿಕೃತವಾದ ಸತ್ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಈ ಚತುರ್ವಿಧ ಪುರುಷಾರ್ಥಗಳು ವಿವಿಧ ವಿದ್ವಾಂಸರ ಕಾವ್ಯಾಧ್ಯಯನದಿಂದ ದೊರೆಯುತ್ತದೆ. ವಿವಿಧ ಕಾವ್ಯದಿಂದ ದೊರಕುವ ಅರ್ಥಗಳಿಂದ ಜಗತ್ತಿಗೆ ಒಳ್ಳೆಯದಾಗುತ್ತದೆ ಎಂದಿರುವನು. ಇವೇ ಕಾವ್ಯ ವಾಚಕನಿಗೆ ಅಥವಾ ಸಹೃದಯನಿಗೆ ದೊರಕುವ ಕಾವ್ಯ ಪ್ರಯೋಜನಗಳಾಗಿವೆ.

ಲೋಕದೊಳದಜೆಂ ಕಾವ್ಯ
ಶ್ರೀಕರಣೋದ್ಯಕ್ತನಕ್ಕೆ ಕವಿ ತನ್ನಱುವಂ
ತಾಕಲ್ಪಾಂತ ಸ್ಥಾಯಿ
ಶ್ರೀ ಕೀರ್ತಿವಧೂ ಪ್ರಧಾನವಲ್ಲಭ ನಕ್ಕುಂ

**ಕವಿರಾಜಮಾರ್ಗ(೧-೨೧)**

ಕಾವ್ಯರಚನೆಯಿಂದ ಕವಿಯು ಕೀರ್ತಿ ವನಿತೆಯ ಶಾಶ್ವತವಾದ ವಲ್ಲಭವೆನಿಸುವನು, ಕವಿ ತನ್ನನ್ನು ತಾನು ಅರಿತುಕೊಳ್ಳಲು ಸಾಧ್ಯವಾಗುವುದು, ಹಾಗೂ ಸಿರಿಸಂಪತ್ತು ಪ್ರಾಪ್ತವಾಗುವುದು.

**ಕಾವ್ಯಲಕ್ಷಣ**

ಕವಿಭಾವ ಕೃತಾನೇಕ
ಪ್ರವಿಭಾಗ ವಿವಿಕ್ತ ಸೂಕ್ತ ಮಾರ್ಗ ಕಾವ್ಯ।
ಸವಿಶೇಷ ಶಬ್ದರಚನಂ
ವಿವಿಧಾರ್ಥ ವ್ಯಕ್ತಿ ವರ್ತಿತಾಲಂಕಾರಂ॥

**ಕವಿರಾಜಮಾರ್ಗ(೧-೨೨)**

ಕಾವ್ಯವು ವಿಶೇಷವಾದ ಕವಿಭಾವದಿಂದ ಅನೇಕ ಸೂಕ್ತ ಮಾರ್ಗದಿಂದ ರಚಿಸಲ್ಪಡುತ್ತದೆ. ವಿವಿಧ ಶಬ್ಧ ಮತ್ತು ಅರ್ಥಗಳಿಂದ ಕೂಡಿದ, ಅನೇಕ ರೀತಿಯ ಅಲಂಕಾರ ಸಹಿತವಾದ ಪದ ಪ್ರಯೋಗದಿಂದ ಕೂಡಿದೆಯೆಂದು ಕಾವ್ಯ ಲಕ್ಷಣವನ್ನು ಹಾಗೂ ಅದರ ವ್ಯಾಪ್ತಿಯನ್ನು ತಿಳಿಸಿದ್ದಾನೆ.

**ಕಾವ್ಯದ ಅಲಂಕಾರ**

ನರಲೋಕ ಚಂದ್ರ ಮತದಿಂ
ಪರಮಾಲಂಕಾರಮುಂ ಶರೀರಮುಮೆಂದಿಂ
ತೆರಡಕ್ಕುಂ ಭೇದಂ ಬಹು
ಪರಿಕರಮಾ ಕಾವ್ಯವಸ್ತು ಪುರುಷಂಗೆಂದುಂ

**ಕವಿರಾಜಮಾರ್ಗ(೧-೨೩)**

ಈ ಪದ್ಯದಲ್ಲಿ ಕಾವ್ಯ ವಸ್ತುವೆ ಒಬ್ಬ ಪುರುಷ ಎಂದು ರೂಪಕವನ್ನಾಗಿಸಿದ ಕಲೆಗಾರಿಕೆ ಕವಿರಾಜ ಮಾರ್ಗಕಾರನಲ್ಲಿದೆ. ಇದು ಕಾವ್ಯದ ಅಲಂಕಾರವನ್ನು ತಿಳಿಸುತ್ತದೆ. ಕಾವ್ಯವೇ ಒಂದು ಶರೀರ ಅದನ್ನು ಅಲಂಕರಿಸುವ ಪದಗಳೆಲ್ಲವೂ ಅಲಂಕಾರವೆನಿಸುವುದು.

**ಕಾವ್ಯದ ಅಂಗಗಳು (ಗದ್ಯ-ಪದ್ಯ)**

ಅವಜೊಳ್ ಶರೀರಮೆಂಬುದು
ಕವಿಪ್ರಧಾನ ಪ್ರಯೋಗ ಪದ ಪದ್ಧತಿಯೊಳ್
ದ್ವಿವಿಧಮೆನಿಕ್ಕುಮದತಿಶಯ
ಧವಳೋಕ್ತ ಕ್ರಮದೆ ಗದ್ಯ ಪದ್ಯಾಖ್ಯಾತಂ

**ಕವಿರಾಜ ಮಾರ್ಗ(೧-೨೪)**

ಮಹಾಕವಿಗಳ ಕಾವ್ಯ ಪ್ರಯೋಗದಲ್ಲಿ ಕಾವ್ಯ ಶರೀರದ ಎರಡು ಮುಖ್ಯ ಅಂಗಗಳೆಂದರೆ ಗದ್ಯ ಮತ್ತು ಪದ್ಯ ಎಂದು ಎರಡು ವಿಧವಾಗಿವೆ.

### ಗದ್ಯಕಾವ್ಯ

ಪದಪಾದ ವಿಯುತ ನಿಯಮಾ
ಸ್ಪದ ಮಲ್ಲದಳಂಕೃತಂ ಕ್ರಿಯಾಕಾರಕದೊಳ್॥
ಪುದಿದರ್ಥ ವ್ಯಕ್ತಿಯ ನೀ
ವುದು ಗದ್ಯಮನೇಕ ರೂಪಭೇದ ವಿವಿಕ್ತಂ॥

**ಕವಿರಾಜಮಾರ್ಗ(೧.೨೫)**

ಅರ್ಥಕೊಡುವುದೇ ಗದ್ಯಕಾವ್ಯ ಪದ್ಯಕಾವ್ಯದಂತೆಯೇ ಗದ್ಯಕಾವ್ಯವೂ ಅಲಂಕಾರಗಳಿಂದ ಕೂಡಿರುತ್ತದೆ. ಗದ್ಯದಲ್ಲಿ ಕ್ರಿಯಾಕಾರಕ ಸಂಬಂಧವು, ನೇರವಾಗಿ ಅನ್ವಯವಾಗಿ ಅರ್ಥ ವ್ಯಕ್ತಿಯಾಗುವಂತೆ ಇರಬೇಕು. ಛಂದಶಾಸ್ತ್ರದಲ್ಲಿ ಹೇಳಿದ ಪಾದಗಳ ನಿಯಮ ಅನ್ವಯವಾಗದಿದ್ದರೂ ಅಲಂಕಾರ ಸಹಿತವಾಗಿರಬೇಕು.

ಸದಮಳ ಸಮಸಂಸ್ಕೃತ ಕಾ
ವ್ಯದ ಹೃದಯಂ ಹರ್ಷಚರಿತ ಕಾದಂಬರಿಗಳ್।
ಮೊದಲಾಗಿ ನೆಗಲ್ದವಿದಜೊಳ್
ಸದಳಂಕಾರಂಗಳಖಿಳ ಕವಿವಿದಿತಂಗಳ್॥

**ಕವಿರಾಜಮಾರ್ಗ್(೧–೨೬)**

ಗದ್ಯಕಾವ್ಯ ಪ್ರಕಾರಗಳಲ್ಲಿ ಪ್ರಸಿದ್ಧವಾದ ಕಾವ್ಯಗಳೆನಿಸಿದ ಹರ್ಷಚರಿತೆ, ಕಾದಂಬರಿ ಮುಂತಾದ ಕಾವ್ಯಗಳು ಪ್ರಸಿದ್ಧವಾಗಿವೆ. ಈ ಗದ್ಯಕೃತಿಗಳಲ್ಲೂ ಉತ್ತಮವಾದ ಕಾವ್ಯಾಲಂಕಾರ ತುಂಬಿರುವುದು ಕವಿಗಳಿಗೆ ಗೊತ್ತೆ ಇರುವುದೆಂದಿರುವನು.

### ಪದ್ಯಕಾವ್ಯ

ಪದ್ಯಂ ಸಮಸ್ತ ಜನತಾ
ಹೃದ್ಯಂ ಪದವಿಧಿತ ಪಾದನಿಯಮ ನಿವೇದ್ಯಂ॥
ವಿದ್ಯಾಪಾರ ಪರಾಯಣ
ಮಾದ್ಯಂ ಸದ್ವೃತ್ತಿ ವೃತ್ತಜಾತ್ಯಯತ್ತಂ॥

**ಕವಿರಾಜಮಾರ್ಗ(೧.೩೦)**

ಸಕಲರಿಗೂ ಪದ್ಯಕಾವ್ಯವೇ ಹೃದಯಕ್ಕೆ ಹೆಚ್ಚು ಹತ್ತಿರವಾದುದು, ಪಾದಗಳ ನಿಯಮಗಳಿಗೆ ತಕ್ಕಂತೆ ಹಾಗೂ ಶಬ್ದ ನಿಯಮದಂತೆ ರಚನೆಯಾದ ಹಾಗೂ ಛಂದೋಬದ್ಧವಾದ ವರ್ಣವೃತ್ತ ಮಾತ್ರಾಗಣ, ಅಂಶ ಗಣಾನ್ವಯವಾಗಿ ಕೂಡಿದ ಕಾವ್ಯವೇ

ಪದ್ಯವಾಗಿದೆ ಎಂದು ಪದ್ಯದ ಬಗ್ಗೆ ತನಗಿರುವ ಅಭಿಮಾನವನ್ನು ವ್ಯಕ್ತಪಡಿಸುತ್ತಾನೆ.

ಮಹಾಕವಿ ಪಂಪನು ತನ್ನ ಆದಿಪುರಾಣದ ಪೀಠಿಕಾ ಪದ್ಯಗಳಲ್ಲಿ ಕಾವ್ಯ ಎಂದರೇನು? ಕಾವ್ಯದ ಲಕ್ಷ ಲಕ್ಷಣಗಳಾವುವು, ಕಾವ್ಯ ಗುಣಗಳಾವುವು ಎಂಬ ವಿಷಯ ಕುರಿತು ಚರ್ಚಿಸಿದ್ದಾನೆ.

ಇದು ನಿಚ್ಚಂ ಪೊಸತು ಅರ್ಣವಂಬೋಲ್ ಅತಿಗಬೀರ ಕವಿತ್ವಜಗ
ಕ್ಕೆ ಅದಱಿಂದ ಕವಿತಾ ಗುಣಾರ್ಣವನಿಂ ಇಳಾಲೋಕೈಕ ಅ
ಭ್ಯುದಯ ಪ್ರಾಪ್ತಿ ನಿಮಿತ್ಯ ಉತ್ತಮಯಶಂ ಸಂಸಾರದೊಳ್ ಸಾರಮ
ಪ್ಪುದಱಿಂ ಧರ್ಮಮದಂ ನಿಮಿರ್ಚುವುದಱಿ ಸಂಸಾರಸಾರೋದಯ

**ಆದಿಪುರಾಣ(೧–೨೭)**

ಈ ಪದ್ಯದಲ್ಲಿ ಕವಿತ್ವ ನಿತ್ಯವೂ ಹೊಸತು–ಹೊಸತು ಸಾಗರದ ಹಾಗೆ ಅತಿ ಗಂಭೀರ, ಭೂಮಿಗೆಲ್ಲ ತಾನೊಂದೆ ಹೆಸರಾದದ್ದು. ಅಭ್ಯುದಯ ಪ್ರಾಪ್ತಿಗೆ ಕಾರಣವಾಗಿದ್ದು, ಉತ್ತಮವಾದ ಯಶಸ್ಸು ಕೊಡುವಂಥದ್ದು, ಸಂಸಾರ ಸಾರವೇ ಆಗಿರುವುದರಿಂದ ಕಾವ್ಯದಿಂದ ಪ್ರಯೋಜನಗಳಿವೆ ಎಂದು ವರ್ಣಿಸಿರುವನು. ಸಂಸಾರಸಾರೋದಯ ಎಂಬ ವಿಶೇಷಣವು ಅರ್ಥಪೂರ್ಣವಾಗಿದೆ. ಕವಿ ಪಂಪನು ತನ್ನ ವಿಕ್ರಮಾರ್ಜುನ ವಿಜಯದ ಪೀಠಿಕಾ ಪದ್ಯಗಳಲ್ಲಿ ೮ ರಿಂದ ೧೧ನೇ ಪದ್ಯದವರೆಗೆ ಕಾವ್ಯ ಎಂದರೇನು? ಎಂಬ ಕಾವ್ಯ ಮೀಮಾಂಸೆಗೆ ಸಂಬಂಧಿಸಿದ ವಿವಿಧ ವಿಚಾರಗಳನ್ನು ಕುರಿತು ಹೇಳುತ್ತಾನೆ.

**ಮಾರ್ಗ–ದೇಶಿ**

ಬಗೆ ಹೊಸತಪ್ಪುದಾಗಿ ಮೃದು ಬಂಧದೊಳೊಂದುವುದೊಂದಿ ದೇಶಿಯೊಳ್
ಪುಗುವುದು ಪೊಕ್ಕ ಮಾರ್ಗದೊಳೆ ತಳ್ವುದು ತಳೊಡೆ ಕಾವ್ಯ ಬಂದಮೊ
ಪ್ಪುಗು ಗೆಳಮಾವು ಕೆಂದಳಿರಪೂವಿನ ಬಿಣ್ಪೊಯಿಂ ಬಟಿಲ್ದು ತುಂ
ಬಿಗಳನೆ ತುಂಬಿ ಕೋಗಿಲೆಯೆ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆವೊಲ್

**ಪಂಪಭಾರತ(೧.೮)**

ಕಾವ್ಯಮಾರ್ಗವನ್ನು ಹೊಸದಾಗಿ ಕಂಡುಕೊಂಡಿರುವ ಕವಿ ಪಂಪನು, ಮೃದುಬಂಧದಲ್ಲಿ ದೇಸಿ ಛಂದಸ್ಸಿನಲ್ಲಿ, ಪೊಕ್ಕು, ಮಾರ್ಗ ಕಾವ್ಯದಲ್ಲಿ ತಳ್ವುದು ಎಂಬ ಮಾತಿನಿಂದ ಪಂಪನ ಕಾವ್ಯದಲ್ಲಿ ದೇಸಿ ಹಾಗೂ ಮಾರ್ಗ ಕಾವ್ಯಗಳ ಸಮ್ಮಿಶ್ರಣವಿದೆ ಎಂದು ತಿಳಿದುಬರುವುದು. ಪಂಪನಿಗೆ ದೇಶೀಯ ಛಂದಸ್ಸು ಹಾಗೂ ಮಾರ್ಗ ಛಂದಸ್ಸು ಎರಡೂ ಇಷ್ಟವಾದವುಗಳೇ. ಅದಕ್ಕಾಗಿ ಒಂದು ಉಪಮೆಯನ್ನು ಬಳಸಿ, ಕಾವ್ಯಬಂಧ ಹೇಗಿರಬೇಕೆಂಬುದನ್ನು ಹೇಳುತ್ತಾನೆ.

ಎಳೆಮಾವು, ಕೆಂದಳಿರು, ಹೂವು, ದುಂಬಿಗಳನ್ನು ಆಕರ್ಷಿಸಿ ಕೋಗಿಲೆಗಳು ಕೂಗುವಂತೆ ಸುಗ್ಗಿಯಲ್ಲಿ ಒಪ್ಪುವಂತೆ ಕಾವ್ಯಬಂಧವು ಕಾವ್ಯಕ್ಕೆ ಒಪ್ಪಬೇಕೆಂದಿರುವನು.

**ವಸ್ತುಕ-ವರ್ಣಕ**

ಕತೆ ಪಿರಿದಾದೊಡಂ ಕತೆಯಮೆಯ್ಗಿಡಲೀಯದೆಮುಂ ಸಮಸ್ತಭಾ
ರತಮನಪೂರ್ವಮಾಗೆ ಸಲೆ ಪೇೞ್ದ ಕವೀಶ್ವರರಿಲ್ಲ ವರ್ಣಕಂ
ಕತೆಯೊಳೊಡಂಬಡಂ ಪಡೆಯೆ ಪೇೞ್ವೊಡೆಪಂಪನೆ ಪೇೞ್ಗುಮೆಂದುಪಂ
ಡಿತರೆ ತಗುಳ್ದು ಬಿಚ್ಚಮಿಸೆ ಪೇವಿಲೊಡರ್ಚಿದೆನೀ ಪ್ರಬಂಧಮಂ

**ಪಂಪಭಾರತ(೧.೧೧)**

ಕತೆ ಪಿರಿದಾಗಿದ್ದರೂ ಕೃತಿಯ ಬಂಧ ಹಾಳಾಗದ ಹಾಗೆ ಸಮಸ್ತ ಭಾರತದ ಕಥೆಯನ್ನು ಹೇಳಿದ ಕವಿಗಳೇ ಇಲ್ಲ. ವರ್ಣಕ ಕಥೆಯಲ್ಲಿ ಒಂದಾಗುವಂತೆ ಕೃತಿಯನ್ನು ರಚಿಸುವವನೆಂದರೆ ಪಂಪ ಮಾತ್ರ, ಪಂಡಿತರು ಮೆಚ್ಚುವಂತೆ ಈ ಕಥೆಯನು ಹೇಳಲೆಂದು ಎತ್ತಿಕೊಂಡಿರುವೆನು. ತನ್ನ ಕಾವ್ಯಕ್ಕೆ ಪ್ರಬಂಧ ಎಂದು ಕರೆದಿರುವುದನ್ನು ಗಮನಿಸಿದರೆ ಪಂಪನ ಕಾಲಕ್ಕೆ ಕಾವ್ಯವನ್ನು ಪ್ರಬಂಧ ಎಂಬ ಹೆಸರಿನಿಂದಲೂ ಕರೆಯುತ್ತಿದ್ದರೆಂದು ಕಾಣುತ್ತದೆ. ನೇಮಿಚಂದ್ರನು ತನ್ನ ಕಾವ್ಯ ಲೀಲಾವತಿಯನ್ನು ಲೀಲಾವತಿ ಪ್ರಬಂಧ ಎಂದೇ ಕರೆಯುತ್ತಾನೆ.

ಈ ರೀತಿ ಪಂಪನ ಕಾವ್ಯಗಳಲ್ಲಿ ಬರುವ ನಾಂದಿ ಪದ್ಯಗಳಲ್ಲಿ ಕಾವ್ಯದ ದೇಶಿ-ಮಾರ್ಗ, ಲಕ್ಷ-ಲಕ್ಷಣ, ವಸ್ತುಕ ವರ್ಣಕ ವಿಚಾರ ಕಾವ್ಯಮೀಮಾಂಸೆ, ಸ್ವಪ್ರಶಂಸೆಗಳೂ ಅಭಿವ್ಯಕ್ತಗೊಂಡಿವೆ.

ಪಂಪನ ಕಾವ್ಯಗಳಿಂದ ಸ್ಫೂರ್ತಿ ಹೊಂದಿದ ಕವಿರನ್ನನು ತನ್ನ ಗದಾಯುದ್ದದಲ್ಲಿ ಸರಸ್ವತಿಯನ್ನು ವಾಕ್ಸುಂದರಿ(ಮಾತಿನ ಅಂದಚಂದಗಳನ್ನು ಪಡೆದವಳು) ಎಂದು ಕರೆಯುವುದರೊಂದಿಗೆ ಕಾವ್ಯಾಲಂಕಾರಗಳನ್ನು ಕುರಿತು ಪದ್ಯಮುಖೇನ ವಿವರಿಸುವನು.

ಪದಿನಾಱಲಂಕ್ರಿಯಾ ರಚನೆ ಮೂವತ್ತಾರು ನೇರ್ಪಟ್ಟವು ಒಂ
ದಿಂದ ಶೃಂಗಾರ ಆದಲ್ಲಂ ಒಂದೇ ರಸಂ ಒಂಬತ್ತು ಎಯ್ದೆ ಒಡಂಬಟ್ಟವು ಎಂ
ಬುದನೆಂಬನ್ನೆಗಂ ಅಂಗನೋಚಿತ ರಸಾಲಂಕಾರಮಂ ತಾಳ್ದಿದೆ ಒ
ಪ್ಪಿದ ವಾಕ್ಸುಂದರಿ ಬಂದು ಸನ್ನಿಹಿತೆಯಕ್ಕೆ ಎನ್ನ ಮುಖಾಂಭೋಜದೊಳ್

**ಗದಾಯುದ್ಧ(೧-೧೪)**

ಈ ಪದ್ಯ ಸರಸ್ವತಿಯ ಸ್ತುತಿ ಮಾತ್ರವಲ್ಲ, ಕನ್ನಡ ಕಾವ್ಯ ಮೀಮಾಂಸೆಯ ಮುಖ್ಯ ಅಂಶಗಳಾದ ರಸ ರೀತಿ, ಅಲಂಕಾರಗಳ ನಿರೂಪಣೆಯನ್ನೂ ಔಚಿತ್ಯ ಪೂರ್ಣವಾಗಿ

ಮಾಡಿಸುತ್ತವೆ. ರನ್ನ ಕಾವ್ಯ ದೇವತೆಯಾದ ಸರಸ್ವತಿಯು ಉಳಿದ ಸ್ತ್ರೀಯರಿಗಿಂತ ಹೆಚ್ಚಿನ ರಸಾಲಂಕಾರಗಳನ್ನು ಉಳ್ಳವಳಾಗಿದ್ದು, ಅವಳು ಚತುರ ಪದಗಳನ್ನು ನುಡಿಸುವವಳೆಂದು ಅರ್ಥೈಸಲಾಗಿದೆ. ಮೂವತ್ತಾರು ಅಲಂಕಾರಗಳಿಂದಲೂ, ಒಂಭತ್ತು ರಸ(ನವರಸ)ಗಳಿಂದಲೂ, ಹದಿನೆಂಟು ರೀತಿಯ ವರ್ಣನೆಗಳಿಂದಲೂ ಕೂಡಿದುದೆ ಕಾವ್ಯವೆಂದು ಹೇಳಿರುವನು. ಸತ್ಕವಿಯು ಬರೆದ ಕಾವ್ಯ ಈ ಎಲ್ಲಾ ಅಂಶಗಳನ್ನು ಹೊಂದಿರಬೇಕು ಎಂದು ಮೀಮಾಂಸೆಯ ರೂಪದಲ್ಲಿ ವ್ಯಕ್ತಪಡಿಸಿರುವನು.

ಪ್ರಾಚೀನ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಗದ್ಯ ಪ್ರಕಾರದ ಕೊರತೆ ಕಂಡುಬರುತ್ತದೆ. ಆ ಸಂದರ್ಭದಲ್ಲಿ ಕಾವ್ಯವೇ ಸಾಹಿತ್ಯದ ಕೇಂದ್ರ ಬಿಂದುವಾಗಿತ್ತು. ನಾಟಕ ಸಾಹಿತ್ಯವನ್ನು ರೂಪಕದಂತೆ ಪರಿಗಣಿಸಿ ಕಾವ್ಯದಂತೆಯೇ ಭಾವಿಸಿದ್ದರೆ, ಪಾಶ್ಚಾತ್ಯ ಕವಿಗಳೂ ನಾಟಕ ಲಕ್ಷಣವನ್ನು ಕುರಿತ ಚರ್ಚೆಯನ್ನು ಕಾವ್ಯಮೀಮಾಂಸೆ Peotics (ಪೊಯಿಟಿಕ್ಸ್) ಎಂದು ಕರೆದರು. ಒಟ್ಟಿನಲ್ಲಿ ಕಾವ್ಯ ಕೇಂದ್ರಿತವಾಗಿದ್ದೇ ಸಂಸ್ಕೃತ ಸಾಹಿತ್ಯ ಸಂದರ್ಭದಲ್ಲಿ.

ಕನ್ನಡದ ಶೃಂಗಾರ ಕಾವ್ಯವೆನಿಸಿದ ಭರತೇಶ ವೈಭವದಲ್ಲಿ ಕವಿ ರತ್ನಾಕರವರ್ಣಿಯು ಕಾವ್ಯ ವರ್ಣನೆಗಳನ್ನು ಕುರಿತು ಹೇಳುತ್ತಾನೆ.

**ಕಾವ್ಯಪ್ರಯೋಜನ**

ಪ್ರಚುರದಿ ಪದಿನೆಂಟು ರಚನೆಯ ವಾಕ್ಯಕೆ
ರಚಿಸುವ ರಾನಂತು ಪೇಳೆ
ಉಚಿತಕೆ ತಕ್ಕಷ್ಟು ಪೇಳ್ವೆನಧ್ಯಾತ್ಮವೆ
ನಿಚಿತ ಪ್ರಯೋಜನವೆನಗೆ

**ಭರತೇಶ ವೈಭವ**(೧.೧೦)

ಪ್ರಸಿದ್ಧವಾದ ಹದಿನೆಂಟು ರೀತಿಯ ವರ್ಣನೆಗಳನ್ನು ಬಳಸಿ ಕಾವ್ಯ ರಚಿಸುವರು. ಆದರೆ ನಾನು ಆಧ್ಯಾತ್ಮದ ಔಚಿತ್ಯಕ್ಕಾಗಿ ಕಾವ್ಯರಚನೆ ಮಾಡುವೆ. ಆಧ್ಯಾತ್ಮವೇ ನನಗೆ ಕಾವ್ಯ ಪ್ರಯೋಜನ ಎನ್ನುತ್ತಾನೆ. ಕಾವ್ಯ ಮೀಮಾಂಸಕನಾದ ಮುಮ್ಮಟನು ಹೇಳಿದ ಹಾಗೆ

ಕಾವ್ಯ ಯಶಸೇ
ಅರ್ಥಕೃತೆ ವ್ಯವಹಾರವಿದೆ
ಶಿವೇತರಕ್ಷತೆಯೇ ಕಾಂತಾ ಸಮ್ಮೀ
ತೋಪದೇಶಯುಜೆ

**ಮುಮ್ಮಟ(ಕಾವ್ಯಪ್ರಕಾಶ)**

ಕಾವ್ಯದಿಂದ ಯಶಸ್ಸು, ಹಣ, ವ್ಯವಹಾರ ಜ್ಞಾನ, ಶಿವನಂತೆ ರಕ್ಷಣೆ, ಹಾಗೂ ಕಾಂತೆಯಂತೆ ಸೂಕ್ಷ್ಮವಾಗಿ ಬುದ್ಧಿವಾದ ಹೇಳುತ್ತದೆ. ಇವೆಲ್ಲ ಕಾವ್ಯದಿಂದಾಗುವ ಪ್ರಯೋಜನೆಗಳು ಎಂದ ಹಾಗೆ, ರತ್ನಾಕರನೂ ಕೂಡ ಕಾವ್ಯದಿಂದ ಆಧ್ಯಾತ್ಮ ಲಾಭವಾಗುವುದು ಎಂದು ಅದೇ ನನಗೆ ಕಾವ್ಯ ಪ್ರಯೋಜನ ಎನ್ನುತ್ತಾನೆ. ಉಂಡುಪವಾಸಿ ಬಳಸಿ ಬ್ರಹ್ಮಚಾರಿ ಎಂಬ ತತ್ವಕ್ಕೆ ಕಟ್ಟುಬಿದ್ದ ರತ್ನಾಕರನು ಪರಮಯೋಗಿಯಾಗಿದ್ದ ಹಾಗಾಗಿ ಈತನಿಗೆ ಆಧ್ಯಾತ್ಮವೇ ಕಾವ್ಯ ಪ್ರಯೋಜನವಾಗಿದೆ.

ಪದ್ಯಂಗಳ್ ನವರಸ ನಿರ
ವದ್ಯಂಗಳ್ ಸುಜನ ಸಂಕುಳಕ್ಕೆ ನಿತಾಂಶಂ
ಹೃದ್ಯಂಗಳ್ ಧಾರಿಣಿಗತಿ
ಚೋದ್ಯಂಗಳ್ ಮೆಚೆಯುತಿರ್ಪುದೀ ಸತ್ಕವಿಯೊಳ್

**ಗಿರಿಜಾಕಲ್ಯಾಣ (೧.೧೩)**

ಕವಿ ಹರಿಹರನ 'ಗಿರಿಜಾ ಕಲ್ಯಾಣ'ದಲ್ಲಿರುವ ಪದ್ಯಗಳು ನವರಸಗಳನ್ನು ಉಕ್ಕಿಸುದಲ್ಲಿ ಸಫಲವಾಗಿವೆ. ಈ ತನ್ನ ಕಾವ್ಯವು ಸಹೃದಯರಿಗೆ ಅತ್ಯಂತ ಪ್ರಿಯವಾಗಿದೆ. ಲೋಕದ ವೃತ್ತಾಂತವನ್ನು ಚಮತ್ಕಾರವಾಗಿ ವ್ಯಕ್ತಗೊಳಿಸುತ್ತದೆ. ಹಾಗಾಗಿ ನವರಸ ಭರಿತವಾದ ಈ ಕಾವ್ಯವನ್ನು ಓದಿ ಆನಂದಿಸಬೇಕೆಂದಿರುವನು. ಈ ಪದ್ಯದಲ್ಲಿರುವ ನವರಸ ಮತ್ತು ಸಹೃದಯವೆಂಬ ಪದಗಳೆರಡೂ ಕಾವ್ಯ ಮೀಮಾಂಸೆಯ ವ್ಯಾಪ್ತಿಗೆ ಒಳಪಡುವ ಪದಗಳಾಗಿವೆ. ಕುಮಾರವ್ಯಾಸನು ತನ್ನ ಕರ್ಣಾಟ ಭಾರತ ಕಥಾಮಂಜರಿಯಲ್ಲಿ ನವರಸ ಪ್ರೌಢವಾದ ಕಾವ್ಯ ತನ್ನದೆನ್ನುವನು.

ಪದದ ಪ್ರೌಡಿಯ ನವರಸಂಗಳ
ವುದಿತವೆನುವಭಿದಾನ ಭಾವವ
ಬೆದಕಲಾಗದು ಎಲ್ಲ ಪ್ರೌಢರು ಮೀ ಕಥಾಂತರಕೆ
ಇದ ವಿಚಾರಿಸೆ ಬಜೆಯ ತೊಳಸಿಯ
ವುದಕದಂತಿಕೆಯಿಲ್ಲಿ ನೋಳ್ಪುದು
ಪದುಮನಾಭವ ಮಹಿಮೆ ಧರ್ಮ ವಿಚಾರ ಮಾತ್ರವನು

**ಕರ್ಣಾಟ ಭಾರತ ಕಥಾಮಂಜರಿ(೧.೧೪)**

ನವರಸಗಳನ್ನು ಬಳಸಿ ಪ್ರೌಢವಾದ ಕಾವ್ಯರಚನೆ ಮಾಡಿರುವ ಕವಿ ಕುಮಾರವ್ಯಾಸನು ಕಾವ್ಯ ಪ್ರಶಂಸೆಯ ಜೊತೆಗೆ ಕಾವ್ಯ ಮೀಮಾಂಸೆಯನ್ನು ಮಾಡಿರುವನು.

ರಸದೊಳರ್ಥದೊಳು ಭಾವದೊಳಲಂಕಾರದೊಳು
ಪೊಸ ರೀತಿಯೊಳು ಬಂಧದೊಳು ಲಕ್ಷಣದೊಳು ಪದ
ವಿರಸದೊಳು ಕಾವ್ಯದೊಳು ತಪ್ಪುಳ್ಳಡಿದಜೊಳಗೆ ಪರರು ಕೈಯಿಕ್ಕದಂತೆ
ಸಸಿನೆ ಮಾಡುವುದು ತಿದ್ದುವುದು ಕೊಂಡಾಡಿ ಲಾ
ಲಿಸಿ ಕೇಳ್ವುದೆಲ್ಲಾ ಶಿವಾರ್ಚಕರು ನಾನಿಮ್ಮ
ಶಿಶುವೆನಗೆ ಕುಂದಿಲ್ಲ ವೇತಜೆಂದೆನಲೆನ್ನ ಭರಭಾರ ನಿಮ್ಮದಾಗಿ

**ಹರಿಶ್ಚಂದ್ರ ಕಾವ್ಯ (೧.೨೦)**

ಈ ಪದ್ಯದಲ್ಲಿ ರಸ, ಅರ್ಥ, ಭಾವ, ಅಲಂಕಾರ, ರೀತಿ ಬಂಧ, ಲಕ್ಷಣ, ಪದವಿಸ್ತಾರ ಇತ್ಯಾದಿ ಕಾವ್ಯ ಮೀಮಾಂಸೆಯ ಪದ-ಪ್ರಯೋಗವನ್ನು ಮಾಡುತ್ತ ತನ್ನನ್ನು ಮಗುವೆಂದು ಭಾವಿಸಿ, ತಿದ್ದಿ, ತನ್ನ ಕಾವ್ಯವನ್ನು ಸ್ವೀಕರಿಸಬೇಕೆಂದು ವಿನಂತಿಸಿಕೊಂಡಿದ್ದಾನೆ.

ಭಾರತೀಯ ಕಾವ್ಯ ಮೀಮಾಂಸೆಯ ಹಿನ್ನೆಲೆಯಲ್ಲಿ ತಮ್ಮ ಕಾವ್ಯ ಚರ್ಚೆಯನ್ನು ಮುಂದುವರಿಸಿದ ಕನ್ನಡ ಕವಿಗಳು ಕಾವ್ಯವೆನಿಸಿಕೊಳ್ಳಲು ಅಷ್ಟಾದಶ ವರ್ಣನೆಗಳಿರಬೇಕೆಂದು ತಿಳಿಸಿದರು. ಅಷ್ಟಾದಶ ವರ್ಣನೆಗಳು ಕನ್ನಡ ಕಾವ್ಯದ ಮುಖ್ಯ ಲಕ್ಷಣವೆಂದು ಎಲ್ಲರೂ ತಿಳಿದ ಮಾತೇ ಆದರೆ ಯಾವುದೇ ಚಂಪೂ ಕವಿಗಳು ತಮ್ಮ ಕಾವ್ಯದ ಪೀಠಿಕಾ ಭಾಗದ ಕಾವ್ಯಚರ್ಚೆಯ ಸಂದರ್ಭದಲ್ಲಿ ಹದನೆಂಟು ರೀತಿಯ ವರ್ಣನೆ ತಾವು ಅನುಸರಿಸಬೇಕಾದ ಒಂದು ಕಾವ್ಯಲಕ್ಷಣ ಎಂಬಂತೆ ಎಲ್ಲೂ ಹೇಳಿಕೊಂಡಿಲ್ಲ. ಕಾವ್ಯಲಕ್ಷಣ ಹಾಗೂ ಸ್ವಕಾವ್ಯ ಪ್ರಶಂಸೆಯನ್ನು ಸರಾಗವಾಗಿ ಸಾಕಷ್ಟು ವಿವರವಾಗಿಯೇ ಮಾಡುವ ಕನ್ನಡ ಕವಿಗಳು ಅಷ್ಟಾದಶ ವರ್ಣನೆಯು ಕಾವ್ಯದ ಮುಖ್ಯ ಲಕ್ಷಣವೆಂದು ಮಾತ್ರ ಹೇಳಿಲ್ಲ. ಆದರೆ ಕಾವ್ಯಗಳಲ್ಲಿ ಅಷ್ಟಾದಶ ವರ್ಣನೆಗಳು ಇಲ್ಲವೆಂದಾಗಲಿ, ಕವಿಗಳು ಆ ವರ್ಣನೆಗಳನ್ನು ಅನುಸರಿಸಿಲ್ಲವೆಂದಾಗಲಿ ಹೇಳುವುದು ತಪ್ಪಾಗುತ್ತದೆ. ಕವಿರಾಜ ಮಾರ್ಗದಲ್ಲೂ ಅಷ್ಟಾದಶ ವರ್ಣನೆಗಳನ್ನು ಕುರಿತು ಹೇಳಿಲ್ಲ. ಸಂಸ್ಕೃತ ಕವಿ ದಂಡಿಯು ಕಾವ್ಯಾದರ್ಶದಲ್ಲಿ ಹದಿನೆಂಟು, ರೀತಿಯ ವರ್ಣನೆಗಳಿರಬೇಕೆಂದು ಹೇಳುತ್ತಾನೆ.

ಕಾವ್ಯದಲ್ಲಿ ಹದಿನೆಂಟು ರೀತಿಯ ವರ್ಣನೆಗಳಿರುವುದು ಲಕ್ಷಣವೆಂದು ಕವಿಗಳು ಹೇಳದಿದ್ದರೂ ಅದು ಹೇಗೋ ತನ್ನಿಂದ ತಾನೇ ಕಾವ್ಯದಲ್ಲಿ ನುಸುಳಿಕೊಂಡು ಬಂದಿದೆ. ಕವಿಗಳು ಪ್ರಾಚೀನ ಕಾಲದಿಂದಲೇ ಈ ವರ್ಣನಾ ಪದ್ಧತಿಯನ್ನು ಅನುಸರಿಸಿದಂತೆ ಕಂಡುಬರುತ್ತದೆ. ಬಹುಪಾಲು ಕವಿಗಳು ಸಮುದ್ರ ವರ್ಣನೆಯಿಂದ ಆರಂಭಿಸಿ, ಇನ್ನಿತರ ಹತ್ತು ಹಲವು ವರ್ಣನೆಗಳನ್ನು ಒಂದು ಸಂಪ್ರದಾಯವೆಂಬಂತೆ ಕಾವ್ಯದಲ್ಲಿ ತಂದಿದ್ದಾರೆ.

ಭಾರತೀಯ ಕಾವ್ಯಮೀಮಾಂಸೆ(ಸಂಸ್ಕೃತ ಕಾವ್ಯ ಮೀಮಾಂಸೆಯನ್ನು) ಅಧ್ಯಯನ ಮಾಡುವ ನಮ್ಮವರು ನಮ್ಮದೆನ್ನುವ ಕನ್ನಡ ಕಾವ್ಯ ಮೀಮಾಂಸೆಯನ್ನು ಮಾತ್ರ ಮರೆತಂತೆ ಕಾಣುತ್ತದೆ.

ಭಾರತೀಯ ಕಾವ್ಯ ಮೀಮಾಂಸೆಗಳನ್ನು ಮಾತ್ರ ನಾವು ಕಲಿತದ್ದು ಹಾಗೂ ಕಲಿಯುತ್ತಿರುವುದ. ಆದರೆ ತಮ್ಮದೇ ಆದ ಕಾವ್ಯಮೀಮಾಂಸೆ ಇದೆ. ಅದು ಕನ್ನಡ ಕಾವ್ಯ ಮೀಮಾಂಸೆ ಅದನ್ನು ಪಂಪಾದಿ ಮಹಾಕವಿಗಳು ತಮ್ಮ ಕಾವ್ಯಗಳ ಮೂಲಕ ನಮಗೆ ಕೊಟ್ಟು ಹೋಗಿದ್ದಾರೆಂಬ ಅರಿವು ನಮಗಿಲ್ಲ. ಭಾರತೀಯ ಕಾವ್ಯ ಮೀಮಾಂಸೆಯ ಪರಿಕಲ್ಪನೆಯಲ್ಲಿ ಕನ್ನಡ ಕವಿಗಳು ತಮ್ಮ ಕಾವ್ಯಗಳಲ್ಲಿ ಕನ್ನಡದ್ದೇ ಆದ ಕಾವ್ಯಮೀಮಾಂಸೆಯನ್ನು ಕಟ್ಟಿಕೊಂಡು ಬಂದಿದ್ದಾರೆ. ಇಂದು ಕನ್ನಡ ಕಾವ್ಯಮೀಮಾಂಸೆಯನ್ನು ಅಧ್ಯಯನ ಮಾಡುವ ಮೂಲಕ ಕನ್ನಡ ಕವಿಗಳು ತಮ್ಮ ಕಾವ್ಯಗಳ ಮೂಲಕ ಏನು ಹೇಳುತ್ತಾರೆಂಬುದನ್ನು ಅರಿತುಕೊಳ್ಳಬೇಕಾಗಿದೆ. ಕನ್ನಡ ಕಾವ್ಯಕ್ಕೆ ಪ್ರಾಚೀನವಾದ ಇತಿಹಾಸವಿದೆ. ಜೊತೆಗೆ ತನ್ನದೇ ಆದ ಒಂದು ಕಾವ್ಯಮೀಮಾಂಸೆಯೂ ಇದೆ. ಶೈಲಿ ಕುರಿತು ಪಂಪ ಹೇಳುವ ಮಾರ್ಗದೇಸಿ ಬಹಳ ಮುಖ್ಯವಾದ ಕಾವ್ಯಮೀಮಾಂಸೆಯ ಚರ್ಚೆಯಾಗಿದೆ. ಭಾರತೀಯ ಕಾವ್ಯಮೀಮಾಂಸೆ ಯನ್ನು(ಸಂಸ್ಕೃತ) ಅಧ್ಯಯನ ಮಾಡುವುದಕೊಸ್ಕರ ನಮ್ಮ ಕಾವ್ಯಮೀಮಾಂಸೆಯನ್ನು ದೂರವಿಟ್ಟ ಕನ್ನಡಿಗರು ಕನ್ನಡ ಕಾವ್ಯ ಏನು ಹೇಳುತ್ತದೆ ಎಂಬುದನ್ನು ಅರಿತುಕೊಳ್ಳುವ ಸಂದರ್ಭಗಳಿಂದ ವಂಚಿತರಾಗಿದ್ದಾರೆ. ಕನ್ನಡದ ಕಾವ್ಯ ಮೀಮಾಂಸೆಯನ್ನು ಕನ್ನಡಿಗರೆ ಅರಿತುಕೊಂಡು ಆಧರಿಸದಿದ್ದರೆ, ಬೇರೆ ಯಾರು ತಾನೇ ಅರಿತುಕೊಳ್ಳಲು ಸಾಧ್ಯ.

ಪ್ರತಿಸಾರೆ ಕನ್ನಡ ಕಾವ್ಯವನ್ನೊದಿದಾಗ ಹೊಸತು, ಹೊಸತೆನಿಸುತ್ತದೆ. ಸಂಸ್ಕೃತ ಕಾವ್ಯ ಮೀಮಾಂಸೆ ಅಥವಾ ಭಾರತೀಯ ಕಾವ್ಯಮೀಮಾಂಸೆಯಲ್ಲಿಲ್ಲದ ವಿಚಾರಗಳನ್ನು ಕನ್ನಡ ಕಾವ್ಯಗಳು ತಿಳಿಸಿಕೊಡುತ್ತವೆ. ಕಾವ್ಯ ಜನನವಾಗುವುದು ಕವಿಯಲ್ಲಲ್ಲ ಕೇಳುಗನಲ್ಲಿ ಅಥವಾ ಸಹೃದಯನಲ್ಲಿ ಕನ್ನಡ ಕಾವ್ಯ ಸಂಗೀತ ಪ್ರಧಾನವಾದುದು. ಉಪಮೆ, ರೂಪಕ, ಅಲಂಕಾರ, ಪ್ರಾಸ ಇತ್ಯಾದಿಗಳು ಕಾವ್ಯದಲ್ಲಿ ದೊರೆಯುತ್ತವೆ. ಭಾರತೀಯ ಕಾವ್ಯ ಪರಂಪರೆಗಿಂತ ಕನ್ನಡ ಕಾವ್ಯಮೀಮಾಂಸೆ ಭಿನ್ನವಾಗಿದೆ ಹಾಗೂ ವಿನೂತನವಾಗಿದೆ.

**ಅಡಿಟಿಪ್ಪಣಿ**

೧. ಶಿವರುದ್ರಪ್ಪ ಜಿ.ಎಸ್., **ಕನ್ನಡ ಕಾವ್ಯತತ್ವ ಚಿಂತನೆ,** ಪು.೫೭

ಅಧ್ಯಾಯ ಏಳು

# ಕುಕವಿ ನಿಂದೆ ಮತ್ತು ನಾಂದಿ ಪದ್ಯಗಳು

ಪ್ರಸ್ತುತ ಅಧ್ಯಾಯದಲ್ಲಿ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಸುದೀರ್ಘವಾಗಿ ಬೆಳೆದು ಬಂದಿರುವ ಕುಕವಿ ನಿಂದೆಯನ್ನು ಸಂಗ್ರಹಿಸಿ ಇದು ಕಾವ್ಯ ಮೀಮಾಂಸೆಯ ಇನ್ನೊಂದು ಮಾದರಿಯೇ ಎಂದು ಚರ್ಚಿಸಲಾಗಿದೆ.

**ಕುಕವಿಗಳ ಲಕ್ಷಣ**

ಕುಕವಿಗಳ ಲಕ್ಷಣ ಹೇಳುವ ಮೊದಲು ಕುಕವಿಗಳೆಂದರೆ ಯಾರು, ಅವರು ಹೇಗಿರುತ್ತಾರೆಂಬುದನ್ನು ತಿಳಿದುಕೊಳ್ಳುವುದು ಅಗತ್ಯವಾಗಿದೆ. ನಿಜವಾದ ಕಾವ್ಯಸಾಮರ್ಥ್ಯವಿಲ್ಲದೆ ಬೇರೆ ಕವಿಗಳನ್ನು ನಿಂದಿಸುವವರು ಕುಕವಿಗಳಾಗಿರುತ್ತಾರೆ. ಇನ್ನು ಕಾವ್ಯ ರಚನೆ ಚೆನ್ನಾಗಿದ್ದರೂ ಆ ಕಾವ್ಯವನ್ನು ಮೆಚ್ಚಿಕೊಳ್ಳದ ಕುಕವಿಗಳು ಹೊಸ ಕಾವ್ಯವೊಂದು ಬಂದ ಸಂದರ್ಭದಲ್ಲಿ ಕೆಲವರು ಆ ಕೃತಿಯನ್ನು ಇಷ್ಟಪಟ್ಟರೆ, ಇನ್ನೂ ಕೆಲವು ಕವಿಗಳಿಗೆ ಅದು ಇಷ್ಟವಾಗುವುದೇ ಇಲ್ಲ. ಆ ಕೃತಿಯನ್ನು ಅವರು ಅನಾದರದಿಂದ ಕಾಣುತ್ತಿದ್ದರು. ಇವರು ಕವಿಗಳಲ್ಲೆ ದುರ್ಜನರೋ ಖಳರೋ ಆಗಿ ಪರಿಣಮಿಸುತ್ತಿದ್ದರು. ಇವರು ಉತ್ತಮ ಕವಿಗಳ ದೃಷ್ಟಿಯಲ್ಲಿ ಕುಕವಿಗಳಾಗುತ್ತಿದ್ದರು. ಉತ್ತಮ ಕಾವ್ಯವು ಜನಮನ್ನಣೆಗೆ ಪಾತ್ರವಾದರೆ ಕುಕಾವ್ಯವು ಜನನಿಂದೆಗೆ ಕಾರಣವಾಗುತ್ತಿತ್ತು.

**ಕುಕಾವ್ಯದ ಲಕ್ಷಣ**

ಕಾವ್ಯ ಎಂದರೇನು? ಕಾವ್ಯದ ಲಕ್ಷಣಗಳಾವವು ಎಂಬುದನ್ನು ಕುರಿತು ಹಲವಾರು ಕಾವ್ಯಮೀಮಾಂಸಕರು ಲಕ್ಷಣಗಳನ್ನು ಹೇಳಿದ್ದಾರೆ. ಆದರೆ ಕುಕಾವ್ಯ ಎಂದರೇನು? ಕುಕಾವ್ಯದ ಲಕ್ಷಣಗಳಾವುವು ಎಂಬುದರ ಬಗ್ಗೆ ಕವಿಗಳು ತಮ್ಮ ಕಾವ್ಯ ಮುಖೇನ ಕುಕವಿನಿಂದೆಯ

ಪದ್ಯಗಳಲ್ಲಿ ಮಾತ್ರ ಸೂಚಿಸುತ್ತಾರೆ. ಸಾಮಾನ್ಯವಾಗಿ ಒಂದು ಕಾವ್ಯ ರಚನೆಯಾಗಬೇಕಾದರೆ ಧ್ವನಿ, ರಸ, ಅಲಂಕಾರ ವಕ್ರೋಕ್ತಿ ಹಲವು ರೀತಿಯ ವರ್ಣನೆ ಇತ್ಯಾದಿಗಳು ಇರಬೇಕು. ಒಂದು ವೇಳೆ ಇವುಗಳಲ್ಲವಾದರೆ ಅದು ಕುಕಾವ್ಯದ ಸಾಲಿಗೆ ಸೇರುತ್ತಿತ್ತು. ನವರಸಗಳು, ಅಷ್ಟಾದಶ ಪರಿಕಲ್ಪನೆಗಳ ಬಳಕೆ ನಮ್ಮ ಕವಿಗಳಿಗೆ ತಿಳಿದೇ ಇದೆ. ಕಾವ್ಯದಲ್ಲಿ ಸುಂದರವಾದ ಪದಗಳಿರಬೇಕು, ಯಾವುದೇ ರಸಪ್ರಧಾನವಾದ ಕಾವ್ಯವಾಗಿರಬೇಕು. ಇಲ್ಲವಾದರೆ ಅದು ಕುಕಾವ್ಯ ಎನಿಸುವುದು.

ಅಂದಂದಿನ ಸಮಕಾಲೀನ ಸಾಹಿತ್ಯ ಸಂದರ್ಭದಲ್ಲಿ ಕಟ್ಟಿಕೊಡುವ ಈ ಕುಕವಿ ನಿಂದೆಯ ಚರ್ಚೆಯು ಸಂಸ್ಕೃತ ಕಾವ್ಯಪರಂಪರೆಯಲ್ಲಿ ಇಲ್ಲದ ಕನ್ನಡ ಕಾವ್ಯಕ್ಕೆ ವಿಶೇಷವಾದ ಲಕ್ಷಣವಾಗಿದೆ. "ಜಿನಸೇನಾಚಾರ್ಯರ ಪೂರ್ವಪುರಾಣದ ಕಾವ್ಯ ಪ್ರಸ್ತಾವನೆಯಲ್ಲಿ ಕಾವ್ಯ ನಿರ್ಮಾಣ ಸಾಮರ್ಥ್ಯವಿಲ್ಲದ ಅಕವಿಗಳನ್ನು ಕುರಿತು ಅವುತ್ಪನ್ನರಾದ ಕೆಲವರು ಕವಿತೆಯನ್ನು ಬರೆಯಲು ಪ್ರಯತ್ನಿಸಿ ಮಾತನಾಡಲು ಅಪೇಕ್ಷಿಸುವ ಮೂಗರಂತೆ ಹಾಸ್ಯಕ್ಕೆ ಪಾತ್ರರಾಗುತ್ತಾರೆ. ಬೇರೆಯವರ ಅಂಗಡಿಗಳಿಂದ ಬಟ್ಟೆಗಳನ್ನು ತಂದಿಟ್ಟುಕೊಂಡು ತಾವೂ ವರ್ತಕರೆಂದು ಹೇಳಿಕೊಳ್ಳುವಂತೆ ತಾವೂ ಕವಿಗಳೆಂದು ಹೇಳಿಕೊಂಡು ಅವರಿವರ ಕವಿತೆಯಿಂದ ಸ್ವಲ್ಪ ಸ್ವಲ್ಪ ತಂದು, ಬೇರೆ ತಾತ್ಪರ್ಯವನ್ನು ಕಲ್ಪಿಸುತ್ತಾರೆ."[೧] ಕೆಲವರು ಬೇರೊಬ್ಬ ಕವಿ ಬರೆದ ಕಾವ್ಯದ ಶಬ್ಧ ಅರ್ಥಗಳನ್ನು ಬದಲಾಯಿಸಿ ಕಾವ್ಯರಚಿಸಿ ಪ್ರಸಿದ್ಧರಾದರೇ ಇನ್ನೂ ಕೆಲವರು ಕಾವ್ಯಾರಂಭ ಮಾಡಿ ಮುಗಿಸುವ ದಾರಿ ಕಾಣದೇ ವೃತಾ ಚಿಂತಿಸುತ್ತಾರೆ. ಇನ್ನೂ ಕೆಲವರಿಗೆ ಕಾವ್ಯರಚಿಸುವ ಮನಸ್ಸಿರುತ್ತದೆ. ಆದರೆ ಆ ಯತ್ನ ಫಲಿಸುವುದೇ ಇಲ್ಲ. ಹೀಗೆ ಕಾವ್ಯ ರಚನೆಗೆ ಹಲವು ರೀತಿಯ ತೊಡಕುಗಳಿರುತ್ತವೆ. ನಿಜವಾದ ಕವಿ ಇನ್ನೊಬ್ಬರ ದೂಷಣೆಗೆ ಅಂಜದೆ ಕಾವ್ಯರಚಿಸುತ್ತಾನೆ.

ಕನ್ನಡ ಮೊದಲ ಲಾಕ್ಷಣಿಕ ಕೃತಿಯಾದ ಕವಿರಾಜಮಾರ್ಗದಲ್ಲಿಯೇ ಕುಕವಿನಿಂದೆಯ ಪ್ರಸ್ತಾಪವಿದೆ.

ನೆನೆನೆನೆದು ಪೆಱರ
ಮಾತುಗಳನೆ ನೆಗಟ್ದರೆ ಕೃತಿಯೊಳ್ ಇಡುವವಂ
ನಗದ ಗುಹಾಧ್ವನಿವೊಲ್
ಅರ್ಥವಚನಂ ತನಗಾಗಿಸಲ್
ಅಱಿಯನ್ ಉಚಿತ ವಾಕ್ ಚತುರತೆಯಂ

**ಕವಿರಾಜಮಾರ್ಗ(೧-೧೪)**

ತನ್ನ ಸ್ವಂತದ್ದು ಇಲ್ಲದೆ ಬೇರೆ ಕವಿಗಳಾಡಿದ ಶಬ್ದ, ಅರ್ಥಗಳನ್ನು ನೆನೆ ನೆನೆದು, ತನ್ನ ಕಾವ್ಯ ರಚನೆ ಮಾಡುವವನ ಮಾತು ಬೆಟ್ಟದ ಗುಹೆಯ ಪ್ರತಿಧ್ವನಿಯ ಹಾಗೆ ವ್ಯರ್ಥವಾದುದು. ಅವನಿಗೆ ತನ್ನದೇ ಆದ ವಾಕ್ಯರಚನೆ ಸಾಧ್ಯವಿಲ್ಲ. ಅಂಥವನು ಸೃಜನ ಶೀಲನಾಗಲಾರ ಎಂದು ಕುಕವಿಯ ಸ್ವರೂಪವನ್ನು ಕುರಿತು ಹೇಳುವನು. ಕವಿಗೆ ಸ್ವಂತಿಕೆ ಎಂಬುದು ಎಷ್ಟು ಮುಖ್ಯ ಎಂಬುದನ್ನು ಈ ಪದ್ಯದಿಂದ ತಿಳಿದುಕೊಳ್ಳಬಹುದು.

ಕವಿತಾ ರಹಸ್ಯಮಂ ಸ
ತ್ಕವಿಯಱಿಗುಮನೇಡ ಮೂಕನೇಡಂ ಜಡನೆಂ
ಬವನಱಿಗುಮೆ ವಿಟನಱಿಗುಂ
ಕುವಿಟಂ ಸ್ತ್ರೀರತ ರಹಸ್ಯದೊಳಗಱಿದಪನೇ

**ಆದಿಪುರಾಣ(೧.೨೦)**

**ಕವಿತಾ ರಹಸ್ಯ**

ಕಾವ್ಯ ಅಥವಾ ಕವಿತೆ ಎನ್ನುವುದು ಬಹಳ ನಿಗೂಢವಾದುದು. ಅದು ಕವಿಯ ಕೈಗೆ ಸಿಗದೇ ಹೋಗಬಹುದು. ಇದು ಎಲ್ಲರಿಗೂ ಬಹುಬೇಗ ವಶೀಕರಣವಾಗುವ ವಿದ್ಯೆಯಲ್ಲ. ರಹಸ್ಯತಮವಾದುದೆಂದು ಪಂಪ ಕವಿಯ ಅಭಿಪ್ರಾಯ. ಸಾಧಕನ ಕೈಗೆ ಮಾತ್ರ ಈ ರಹಸ್ಯವಾದ ಕವಿತಾ ಸಾಮರ್ಥ್ಯ ಫಲಿಸುವುದು.

**ಸತ್ಕವಿ ಎಂದರೆ ಯಾರು?**

ಕಾವ್ಯ ಸಾಮರ್ಥ್ಯ ಹೊಂದಿದ ಕವಿಯೇ ಸತ್ಕವಿ. ಸತ್ಕವಿಗೆ ವಿರುದ್ಧವಾದ ಪದವೇ ಕುಕವಿ. ಸತ್ಕವಿಗಳು ಉತ್ತಮ ಕಾವ್ಯವನ್ನು ರಚಿಸಿದರೆ ಕುಕವಿಗಳು ಆ ಒಳ್ಳೆಯ ಕಾವ್ಯವನ್ನು ನಿಂದಿಸುತ್ತಾರೆ. ಆದರೆ ನಿಂದಕರೆಷ್ಟು ಜನರಿದ್ದರು ಸತ್ಕವಿಯು ತನ್ನ ಕಾರ್ಯವನ್ನು(ಕಾವ್ಯ ರಚನಾ ಕಾರ್ಯ) ನಿಲ್ಲಿಸುವುದಿಲ್ಲ. ಜಗತ್ತಿನಲ್ಲಿ ಸತ್ಕವಿಗಳಿಗಿಂತ ಕುಕವಿಗಳೇ ಹೆಚ್ಚು. ಇವರ ಕೆಲಸ ಕಾವ್ಯದೋಷಗಳನ್ನೆಣಿಸಿ ಸತ್ಕವಿಗಳನ್ನು ಇನ್ನೂ ಶ್ರೇಷ್ಠರಾಗುವಂತೆ ಮಾಡುವುದಾಗಿದೆ.

ಮೇಲಿನ ಪದ್ಯದಲ್ಲಿ ಕವಿ ಪಂಪನು ಕವಿತಾ ರಹಸ್ಯವನ್ನು ಸತ್ಕವಿಗಳು ಮಾತ್ರ ತಿಳೀಯುತ್ತಾರೆ. ಹುಟ್ಟು ಕಿವುಡನೂ, ಮೂಗನು ಮತ್ತು ಜಡನಾದವನು ತಿಳಿಯಲು ಸಾಧ್ಯವೇ? ಸ್ತ್ರೀಯರೊಡನೆ ನಡೆಸಬೇಕಾದ ಸುರತ ಪ್ರಪಂಚದ ರಹಸ್ಯವನ್ನು ರಸಿಕನಾದವನು ಮಾತ್ರ ತಿಳಿಯುತ್ತಾನೆ. ನೀರಸನಾದವನು ತಿಳಿಯಲು ಸಾಧ್ಯವಿಲ್ಲ ಎನ್ನುವುದರ ಮೂಲಕ ಕುಕವಿಗಳು ಹಾಗೂ ರಸಹೀನರು ಕಾವ್ಯವನ್ನು ಅರಿಯಲು ಸಾಧ್ಯವಿಲ್ಲ. ಸತ್ಕವಿಗಳು ಮಾತ್ರ

ಕಾವ್ಯ ರಹಸ್ಯವನ್ನು ಅರಿಯುತ್ತಾರೆ. ಏಕೆಂದರೆ ಕಾವ್ಯವೂ ಕೂಡ ಸ್ತ್ರೀಯಂತೆ ಬಹುಚಂಚಲೆ ಕೈಗೆ ಸಿಗದೆ ಹೋಗಬಹುದು. ಸತ್ಕವಿಗೆ ಮಾತ್ರ ಕಾವ್ಯ ಕನ್ನಿಕೆ ಒಲಿಯುವಳೆಂದು, ಪಂಪ ತನ್ನ ಆದಿಪುರಾಣದಲ್ಲಿ ಹೇಳಿರುವನು.

"ಕುಕವಿನಿಂದೆ ಹಾಗೂ ಕುಕಾವ್ಯ ಕುರಿತ ಚರ್ಚೆಯಲ್ಲಿ ಸ್ವಕಾವ್ಯ ಹಾಗೂ ಸತ್ಕಾವ್ಯ ಎರಡನ್ನೂ ನಮ್ಮ ಕವಿಗಳು ಸಮಾನಾರ್ಥಕವನ್ನಾಗಿಯೇ ಬಳಸುವಂತೆ ತೋರುತ್ತದೆ."[೨] ತಾನು ರಚಿಸಿದ ಕಾವ್ಯ ಒಳ್ಳೆಯದಲ್ಲವೆಂದು ಯಾವ ಕವಿತಾನೆ ಹೇಳಿಕೊಂಡಾನು. ಆದ ಕಾರಣ ತಮ್ಮ ಕಾವ್ಯ ಅಥವಾ ಸತ್ಕಾವ್ಯಕ್ಕೆ ಸುಮುಖರಲ್ಲದವರೆಲ್ಲರೂ ಕುಕವಿಗಳಾಗಿ ಅಥವಾ ಖಳರಾಗಿ ಕಾಣುವುದು ಅಚ್ಚರಿಯೇನಲ್ಲ. ಆದಿಪುರಾಣದ ಇನ್ನೊಂದು ಪದ್ಯದಲ್ಲಿ ಪಂಡಿತರು ಕಾವ್ಯದೋಷಗಳನ್ನಷ್ಟೇ ಎಣಿಸಬಾರದೆಂದು ಪಂಪ ಕವಿ ಹೇಳುತ್ತಾನೆ.

ಭಾಷಾವಿದರ್ಕವಿತ್ವ ವಿ
ಶೇಷಜ್ಞರ್ನಿಕಷರ ಪ್ಪೊಡಪ್ಪುದು
ರುಮಾಷ ಮುಖದಂತೆ ದೋಷಗ
ವೇಷಣ ಪರರಪ್ಪರೆಂದೊಡದು ತೆಗಟಲ್ತೆ

**ಆದಿಪುರಾಣ(೧.೨೧)**

ಭಾಷೆಯನ್ನು ಬಲ್ಲವರು, ಕವಿತಾ ಶಕ್ತಿಯಲ್ಲಿ ನಿಪುಣರಾದವರು, ಸಭೆಯಲ್ಲಿದ್ದು ಕಾವ್ಯವನ್ನು ಒರೆಗೆ ಹಚ್ಚಿ ನೋಡುವುದಾದರೆ, ಸರಿ ಇಲ್ಲವಾದರೆ, ಬಾಯಲ್ಲಿ ಉದ್ದಿಟ್ಟುಕೊಂಡು ಕೇವಲ ದೋಷಗಳನ್ನೇ ಹುಡುಕುವರು ಇರುವುದರಿಂದ ಆ ಕಾವ್ಯದ ಅಪಮೌಲ್ಯವಾಗುತ್ತದೆ. ಆದ್ದರಿಂದ ಕೇವಲ ದೋಷಗಳನ್ನಷ್ಟೇ ಹುಡುಕಿ ಕಾವ್ಯಗುಣಗಳನ್ನು ಮರೆಯಬಾರದು ಎಂದಿರುವನು. "ಸುಜನರು ದುಂಬಿಯಾದರೆ, ಕುಜನರು ಕೊರೆಯುವ ಹುಳು, ಸುಜನರು ಕವಿಯಾದರೆ, ಕುಜನರು ಗೋರಿಕಲ್ಲು, ಸುಜನರು ಸಿಂಹವಾದರೆ, ಕುಜನರು ಹಂದಿ, ಸುಜನರು ಹಂಸ ಮತ್ತು ಕೋಗಿಲೆಯಾದರೆ, ಕುಜನರು ಕಾಗೆ, ಮರುಕುಟಿಗಹಕ್ಕಿ, ಇಲಿ, ನಾಯಿ, ನೊಣ ಹೀಗೆ ಈ ನಿಯತವಾದ ಕೆಲವು ಉಪಮಾನಗಳ ಮೂಲಕ ಕವಿಗಳು ತಮ್ಮ ಕಾವ್ಯವನ್ನಾಧರಿಸಿದ ಓದುಗರನ್ನು ಕುರಿತು ಅಸಹನೆಯಿಂದ ತೆಗಳುತ್ತಾರೆ. ಈ ಕೆಟ್ಟ ಓದುಗರು ಮುಖ್ಯವಾಗಿ ಅರಸಿಕರು ಭುಂದಾಭಾಸರು ಶುಷ್ಕ ವೈಯಾಕರಣಿಗಳು. ಇವರಿಗೆ ಕಾವ್ಯವನ್ನು ಹೇಗೆ ಗ್ರಹಿಸಬೇಕು ಎಂಬುದೇ ತಿಳಿಯದು."[೩] ಕವಿಗಳು ರಚಿಸಿದ ಕಾವ್ಯವನ್ನು ಆದರಿಸುವ ಹಾಗೂ ಪುರಸ್ಕರಿಸುವ ವಾಚಕರಿರಬೇಕು. ಬದಲಾಗಿ ಕಾವ್ಯಗಳನ್ನು ತೆಗಳುವ

ವಾಚಕರಿಂದೇನೂ ಪ್ರಯೋಜನವಿಲ್ಲ. ಅರಸಿಕರಾದವರು ಕಾವ್ಯ ದೋಷಗಳನ್ನು ಹುಡುಕಿ ತೆಗೆದು ಕವಿಗಳನ್ನು ನಿಂದಿಸುವವರು. ಹಾಗಾಗಿ ಅವರು ಕುಕವಿಗಳ ಸ್ಥಾನದಲ್ಲಿ ಸೇರಿ ಹೋಗುತ್ತಾರೆ.

ಲಲಿತಪದಂ ಪ್ರಸನ್ನ ಕವಿತಾಗುಣಮಿಲ್ಲದೆ ಪೂಣ್ದು ಪೇಳ್ದಬೆ
ಳ್ಗಳ ಕೃತಿಬಂಧಮುಂಬರೆ(ಪ) ಕಾಜಿರ ಕೈಗಳ ಕೇಡು
ನುಣ್ಗನಪ್ಪುಳಕದಕೇಡು ಪೇಟಿಸಿದರ್ಥದ ಕೇಡೆನೆ
ಪೆಟ್ದಿ ಬೀಗಿ ಪೊಟ್ಟಳಿಸಿ ನೆಗಟ್ತೆಗಾಟಿಸುವ
ದುಷ್ಕವಿಯಂ ಕವಿಯಂಬ ಲೆಕ್ಕವೇ?

ವಿಕ್ರಮಾರ್ಜನ ವಿಜಯ(೧-೧೨)

**ಲಲಿತಪದ**

ಕಾವ್ಯದ ಭಾಷೆ ಅನುಪಮವಾದುದು ಅದು ವಾಚಕರಿಗೆ ಹಿಡಿಸಬೇಕಾದರೆ ಕಾವ್ಯಗಳಲ್ಲಿ ಸುಂದರವಾದ ಶಬ್ದ ಅರ್ಥಗಳು ಸೇರಿಕೊಂಡಿರಬೇಕು. ಇಲ್ಲವಾದರೆ ಕಾವ್ಯ ನೀರಸವಾಗಿ, ಓದುಗರಿಗೆ ರುಚಿಸದೆ ಹೋಗಬಹುದು. ಕಾವ್ಯರಚನಕಾರ ಸುಂದರವಾದ ಅತವಾ ಲಲಿತವಾದ ಪದಗಳನ್ನು ಉಪಯೋಗಿಸಿ ಕಾವ್ಯರಚನೆ ಮಾಡಬೇಕು.

**ಪ್ರಸನ್ನ ಕವಿತಾ ಗುಣ**

ಕವಿಯ ಕಾವ್ಯಗಳಲ್ಲಿ ವಿಶೇಷವಾದ ಸಂದೇಶವಿರುತ್ತದೆ. ಸಮಾಜಕ್ಕೆ ಸಂದೇಶವನ್ನು ಕೊಡುವ ಕವಿಗಳ ಕಾವ್ಯವು ಉತ್ತಮವಾಗಿರಬೇಕು. ಹಾಗಾಗಿ ಕವಿಗಳಲ್ಲಿ ಪ್ರಸನ್ನವಾದ ಕವಿತಾ ಗುಣವಿರಬೇಕು. ಕವಿತಾಗುಣ ಕಾವ್ಯ ಲಕ್ಷಣಗಳಲ್ಲಿ ಒಂಧು. ಪ್ರಸನ್ನ ಕವಿತಾ ಗುಣವೆಂದರೆ ಬಹಳ ಉತ್ತಮವಾದ ಕಾವ್ಯ ಸಾಮರ್ಥ್ಯದಿಂದ ಕವಿ ಕಾವ್ಯವನ್ನು ರಚಿಸಬೇಕು. ಇಲ್ಲವಾದರೆ ಕಾವ್ಯ ರಸಹೀನ ಕೃತಿಯಾಗುತ್ತದೆ. ಕಾವ್ಯದಲ್ಲಿ ಲಲಿತವಾದ ಪದಗಳಿಲ್ಲವಾದರೆ, ಕೃತಿಕಾರನ ಕೈಗಳ ಕೇಡು, ಬಳಸಿದ ಶಬ್ದದ ಕೇಡು, ಬರುವ ಅರ್ಥದ ಕೇಡು ಎಂದು ಹೀಗಳೆಯುವ ದುಷ್ಕವಿಯು ಕವಿಯೆಂಬ ಲೆಕ್ಕವೇ? ಎಂದಿರುವನು. ಕಾವ್ಯದ ಭಾಷೆಯಲ್ಲಿ ಸುಂದರವಾದ ಪದಗಳಿರುವುದು ಕಾವ್ಯದ ಒಂದು ಲಕ್ಷಣ ಎಂಬಂತಾಯಿತು. "ಕುಕವಿ ಖಳರನ್ನು ಬಯ್ದರೆ ಎಲ್ಲಿ ಸೌಜನ್ಯಕ್ಕೆ ಧಕ್ಕೆ ಬರುವುದೋ ಎಂದು ಕೆಲವರು ಮೆಲ್ಲಗೆ ಬಯ್ಯುತ್ತಾರಂತೆ ಆದರೆ ಈ ಖಳರಿಂದ ಯಾರಿಗಾದರೂ ಒಳ್ಳೆಯದಾಗಿದೆಯೇ ಆದಕಾರಣ ಯಾವ ಮುಲಾಜೂ ಇಲ್ಲದೆ ಒಲೆಯಲ್ಲಿ ಉಪ್ಪನ್ನು ಹಾಕಿದರೆ ಹೇಗೆ ಚಟಪಟ ಎನ್ನುತ್ತದೆಯೋ ಹಾಗೆ ಬಯ್ಯುವುದೇ ಸರಿ ಎನ್ನುವ ನಿಲುವು ಕೆಲವರದು"(ಸೂ.ಸೂ.೩೨).

ಸರಸತಿಯನಬಲೆಯಂ ಗೋ
ಣ್ಮುರಿಗೊಂಡರ್ಥಕ್ಕೆ ಕುದಿದು ನೋಯಿಸುವವನ
ಕ್ಕರಿಗನೆ ಪಾತಕನಾತನೆ
ಸರಸ್ವತಿ ದ್ರೋಹನವನನಾರ್ ಮುಟ್ಟುವರೋ

**ಅಜಿತಪುರಾಣಂ(೧.೮೯)**

ಕೆಲವರು ಸರಸ್ವತಿಯೆಂಬ ಅಬಲೆಯ ಗೋಣನ್ನು ಮುರಿದು ಅರ್ಥಕ್ಕೆ ಕುದಿದು ನೋಯಿಸುತ್ತಿದ್ದರು. ಅಂಥವರನ್ನು ಕವಿರನ್ನ ಸ್ವಂತ ಶಬ್ದ ಅರ್ಥಗಳನ್ನು ಬಳಸದವರು ಸರಸ್ವತಿ ದ್ರೋಹಿಗಳು ಎನ್ನುತ್ತಾರೆ.

ಕಾವ್ಯಮಾರ್ಗದೊಳೊಳಪೊಕ್ಕಂ
ನವರಸಮಂ ತೆಜೆಯೆ ನುಡಿದನೆನಿಸಿದ ಕವಿಸ।
ತ್ಕವಿಯೆನಿಕುಂ ಗೂಡಾರದ
ಕವಿಯಂತಿರೆ ಮುಚ್ಚಿಪೋದ ಕವಿಯುಂ ಕವಿಯೇ॥

**ಅಜಿತಪುರಾಣ(೧.೮೬)**

ಕವಿಯಾದವನು ಹೇಳಬೇಕಾದುದನ್ನು ಹೇಳಬೇಕು, ಹೇಳಬೇಕಾದುದನ್ನು ಹೇಳದಿರುವ ಅಥವಾ ಕಾವ್ಯ ಸಾಮರ್ಥ್ಯವಿಲ್ಲದಿರುವ ಕವಿಗಳನ್ನು ಕುರಿತು, ರನ್ನಕವಿ ಗೂಡಾರದ ಕವಿಯಂತೆ ಮುಚ್ಚಿಹೋದ ಕವಿಗಳು ಎನ್ನುತ್ತಾನೆ. ಇನ್ನೂ ಕೆಲವು ಕವಿಗಳು ಹೇಳಿದನ್ನೆ ಹೇಳುವ ಅನುಕರಣ ಕವಿಗಳು ಇವರಿಗೆ ಸ್ವಂತಿಕೆ ಎನ್ನುವುದೇ ಇಲ್ಲ. ಕವಿಗೆ ಸ್ವಂತಿಕೆ ಎನ್ನುವುದು ಎಷ್ಟು ಮುಖ್ಯವಾದುದು ಎನ್ನುವುದನ್ನು ತಿಳಿಸಿ, ಸ್ವಂತಿಕೆ ಇಲ್ಲದ ಕವಿ ಕವಿಯಲ್ಲ ಎನ್ನುತ್ತಾನೆ.

ಮಂಡೂಕಂ ಶರನಿಧಿಯಂ
ಕಂಡಜೆಯದೆ ಪಳಿಗುಮಬ್ಬಿಗದು ಭಂಗಮೆ ಪೇಳ್।
ಖಂಡಿಸೆ ಕುಕವಿ ಸಮೂಹಂ
ಪಂಡಿತರಪ್ಪವರ್ಗೆ ಭಂಗಮಕ್ಕುಮೆ ಜಗದೊಳ್॥

**ಧರ್ಮಾಂಮೃತ(೧.೪೪)**

ಕಪ್ಪೆಯು ಮಹಾ ಸಮುದ್ರವನ್ನು ಕಂಡು ಅರಿಯದೆ ಬೈದರೆ ಸಮುದ್ರಕ್ಕದು ಅವಮಾನವೇ, ಕುಕವಿಗಳ ಗುಂಪು ಪಂಡಿತರಿಗೆ ನಿಂದಿಸಿದರೆ ಅವರಿಗೆ ಅವಮಾನವಾಗುವುದೇ ಖಂಡಿತ ಇಲ್ಲ. ಪಂಡಿತರು ಸಮುದ್ರವಿದ್ದ ಹಾಗೆ ಕುಕವಿಗಳು ಕೂಪ ಮಂಡೂಕದಂತೆ ಎನ್ನುವನು.

ನಯಸೇನನು ಇನ್ನೊಂದು ಪದ್ಯದಲ್ಲಿ ಮೂರ್ಖರನ್ನು ಮೆಚ್ಚಿಸುವುದು ಎಷ್ಟು ಕಷ್ಟದ ಕೆಲಸ ಎಂಬುದನ್ನು ಹೇಳುತ್ತಾನೆ.

ಪರಿಣತರೆನಿಸಿದ ನಿರ್ಮ
ತ್ಸರರ ಮೆಚ್ಚಿಪುದು ಗಹನಮಲ್ಲದು ಜಡರಂ
ಕರವಜಿದು ತಿಳಿಪಲೆಂತೆನೆ
ಖರಕರನಂ ಗೂಗೆಗೆಯ್ದೆ ತೋರ್ಪಂತಕ್ಕುಂ

**ಧರ್ಮಾಂಮೃತ(೧.೪೩)**

ಜಾಣರನ್ನು ಮತ್ಸರರಹಿತರನ್ನು ಮೆಚ್ಚಿಸುವುದು ಕಷ್ಟದ ಕೆಲಸವಲ್ಲ. ಆದರೆ ಜಡರನ್ನು ಮೂರ್ಖರನ್ನು ಮೆಚ್ಚಿಸುವುದು ಬಹಳ ಕಷ್ಟದ ಕೆಲಸ ಎನ್ನುತ್ತಾನೆ.

ಪೊಲ್ಲಮೆ ಗಂಡದನಜಿರಿದುಂ
ಮೆಲ್ಲನೆ ಸಯ್ತಾಗೆ ತಿರ್ದುವರ್ಸುಕವೀಶಂ
ಪೊಲ್ಲಮೆಯಿಲ್ಲದೊಡಂ ಲೇ
ಸಲ್ಲದು ಕೃತಿಯೆಂಥು ಕುಕವಿ ನಿಕರಂ ಪಳಿಗುಂ

**ಧರ್ಮಾಂಮೃತ(೧.೪೫)**

ಕಾವ್ಯದಲ್ಲಿ ಏನಾದರೂ ದೋಷವಿದ್ದರೆ ತಿದ್ದುವವನು ಸುಕವಿ ಎನಿಸುತ್ತಾನೆ. ಆದರೆ ಕಾವ್ಯದಲ್ಲಿ ಏನಾದರೂ ಸ್ವಲ್ಪ ದೋಷವಿದ್ದರೆ ಇಡೀ ಕೃತಿಯೇ ಸರಿಯಿಲ್ಲ ಎನ್ನುವುದು ಕುಕವಿಗಳ ಸಮೂಹ ಹಾಗಾಗಿ ಕುಕವಿಗಳ ಒಂದು ಸಮೂಹವೇ ಇದೆ ಎನ್ನುವನು.

ಇಲಿಗಂ ಮರಕುಟವಕ್ಕಿಗ
ಮಲಸದೆ ಕರ್ದುಕುತ್ತೆ ಕಡಿಯುತ್ತಿರ್ಪುದೆ ಸಹಜಂ
ಸಲೆ ಚಪಲಂಗಂ ಕುಕವಿಗ
ಮಲಸದೆ ತೆಗಳ್ಪಿದುವೆ ಸಹಜಮವರಂತೆ ಕರಂ

**ಧರ್ಮಾಂಮೃತ(೧.೪೬)**

ಇಲಿ ಮತ್ತು ಮರಕುಟಿಗ ಹಕ್ಕಿಗೆ ಕಡಿಯುವುದು ಸಹಜ ಕ್ರಿಯೆ. ಅದರಂತೆ ಬಹಳ ಚಪಲನಾದ ಕುಕವಿಗೆ ತೆಗಳುವುದು ಸಹಜ ಎಂದು ಕುಕವಿಗಳನ್ನು ಇಲಿ ಹಾಗೂ ಮರಕುಟಿಗ ಹಕ್ಕಿಗೆ ಹೋಲಿಸಿರುವನು. ನಯಸೆನನು ಚಪಲ ಎಂಬ ಪದವನ್ನು ಬಳಸುತ್ತಾನೆ. ಇಲಿಗೆ ಕಡಿಯುವ ಚಪಲತೆ ಮರ ಕುಟುಕುವ ಹಕ್ಕಿಗಳಿಗೆ ಕುಟುಕುವ ಚಪಲತೆ, ಆದರೆ ಕುಕವಿಗೆ ಸುಕವಿ ಹಾಗೂ ಸತ್ಕಾವ್ಯವನ್ನು ತೆಗಳುವ ಚಪಲತೆ. ತೆಗಳುವುದೂ ಒಂದು ರೀತಿಯಲ್ಲಿ ಕುಟುಕುವುದು. ಕುಟುಕುವುದೇ ಇವರ ಕೆಲಸವಾಗಿರುತ್ತದೆ. ಇಲ್ಲಿ ಕವಿ ನಯಸೇನನು

ಕುಕವಿಗಳನ್ನು ಇಲಿ ಮತ್ತು ಮರಕುಟಿಗ ಹಕ್ಕಿಗೆ ಹೋಲಿಸಿರುವ ಕಾರಣ ಇಲಿ ಮತ್ತು ಮರಕುಟಿಗ ಹಕ್ಕಿಯಂತೆ ಕುಕವಿಯೂ ಕುಟುಕುತ್ತಾನೆ.

ನವಿಲಾಟಂ ಸೊಗಯಿಸುವುದು
ವಿವೇಕಿಯಪ್ಪಂಗೆ ನಾಯ್ಗೆ ಸೊಗಯಿಸುವುದೆ ಸ
ತ್ಕವಿಯ ಬಗೆಗೊಳ್ಪು ಪುಗುವವೊ
ಲವಿವೇಕಿಯ ಮನಮನೊಳ್ಪದೇಂ ಪೊಕ್ಕಪುದೇ

**ಧರ್ಮಾಂಮೃತ(೧.೪೭)**

ನವಿಲಿನ ಆಟ ನರ್ತನ ಸೊಗಸಾಗಿ ಕಾಣುವುದ, ತಿಳುವಳಿಕೆ ಉಳ್ಳವನಿಗೆ, ನಾಯಿಗೆ ಅದು ಸೊಗಸಾಗಿ ಕಾಣುವುದೇ? ಹಾಗೆಯೇ ಸತ್ಕವಿಯ ವಿಚಾರ ರೀತಿ ನೀತಿ ಇತ್ಯಾದಿಗಳು ಅವನಿಗಲ್ಲದೆ ಅವಿವೇಕಿಗೆ ತಿಳಿಯುವುದೇ, ಕುಕವಿಗಳು ದುರ್ಜನ ಸಾಲಿಗೆ ಸೇರುವುದನ್ನು ಕವಿಯು ಪದ್ಯರೂಪದಲ್ಲಿ ವಿವರಿಸಿದ್ದಾನೆ. ಹಾಗೆಯೇ ಕುಕವಿಯು ನಾಯಿಯ ಸಾಲಿಗೆ ಸೇರುತ್ತಾನೆ ಎನ್ನುವುದು ಧರ್ಮಾಂಮೃತಕಾರನ ಅಭಿಪ್ರಾಯ.

ಅಡಕಿಲ ಮಡಕೆಗಳಂ ಸ
ಯ್ತಿಡ ಲಱುವುವೆ ನಾಯ್ಗಳೊಡೆವುವಲ್ಲದೆ ಕೃತಿಯಂ
ಕಿಡೆ ನುಡಿವರಲ್ಲದೇಂ ಜಡ
ರೊಡಂಬಡಲ್ತಿದ್ದಿ ನುಡಿಯಬಲ್ಲರೆ ಕವಿವೋಲೆ

**ಧರ್ಮಾಂಮೃತ(೧.೪೮)**

ಅಡಕಿಲ ಗಡಿಗೆಗಳನ್ನು ಒಂದರ ಮೇಲೊಂದು ಸೇರಿಸಿ ಇಟ್ಟರೆ ನಾಯಿಗಳು ಒಡೆದು ಹಾಕುವುದಿಲ್ಲವೆ? ಅದರಂತೆಯೇ ಜಡರಾದವರು ಕೃತಿಯಂ ಕಂಡು ಕಟುವಾಗಿ ನುಡಿಯುವರಲ್ಲದೆ, ಆ ಕೃತಿಯನ್ನು ಒಪ್ಪಿಕೊಂಡು ತಿದ್ದಿಕೊಂಡು ಕವಿಯ ದಾರಿಯಲ್ಲಿ ಕ್ರಮಿಸಿ ಕವಿಗೆ ಪ್ರೋತ್ಸಾಹ ಕೊಡಬಲ್ಲರೆ? ಹೀಗೆ ಕವಿ ನಯಸೇನನು ತನ್ನ ಕೃತಿಯಾದ ಧರ್ಮಾಂಮೃತದಲ್ಲಿ ೪೭ನೆಯ ಪದ್ಯದಲ್ಲಿ ದುರ್ಜನರನ್ನು ನಾಯಿಗೆ ಹೋಲಿಸಿರುವುದು ಕಂಡುಬರುತ್ತದೆ.

ಮಳೆಯಿಲ್ಲದೆ ಪೊಯ್ನಿರಿಂ
ಬೆಳಗುಮೆ ಧರೆ ಮಱುಗಿ ಕುಡಿದು ಶಾಸ್ತ್ರದ ಬಲದಿಂ
ದಳಪಿಂ ವೇಟ್ಟೊಡೆಮದು ಕೋ
ಮಳ ಮೆಕ್ಕುಮೆ ಸಹಜ ಮಿಲ್ಲದಾತನ ಕಬ್ಬಂ

**ಧರ್ಮಾಂಮೃತ(೧.೪೯)**

ಮಳೆಯಿಲ್ಲದೆ ನೀರನ್ನು ಸುರಿದ ಮಾತ್ರಕ್ಕೆ ಭೂಮಿ ತಂಪಾಗುವುದೇ? ಮತ್ಸರದಿ ಕುದಿದು ಶಾಸ್ತ್ರದ ಬಲದಿಂದ ಹೇಳಿದ ಕಾವ್ಯವು ಕೋಮಲವಾಗುವುದೇ? ಸಹಜತೆಯಿಲ್ಲದಾತನ ಕಾವ್ಯವು ಇತರರಿಗೆ ರುಚಿಸದು ಎಂದಿರುವನು. ಕಾವ್ಯಕ್ಕೆ ಸಹಜತೆ ಇದೆ. ಅದು ಬಹಳ ಮುಖ್ಯ ಎಂದಿದ್ದಾನೆ.

ಉಪ್ಪಿಲ್ಲದೆ ಕೇಳೊಕ್ಕಳ
ತುಪ್ಪವನೆಡೆದುಣ್ಣೆನೆಂಬೊಡುಂಬುಣಿಸೇಂ ಸ್ವಾ
ದುಪ್ಪುದೆ ಸಹಜಂ ತನಗಿನಿ
ಸಪ್ಪೊಡಮಿಲ್ಲದನ ಕವಿತೆ ರುಚಿವಡೆದಪುದೆ

ಧರ್ಮಾಮೃತ(೧.೩೦)

ಉಪ್ಪಿಲ್ಲದೆ ಕೇವಲ ತುಪ್ಪವನ್ನು ಬಡಿಸಿ, ಊಟಕ್ಕೆ ನೀಡಿದರೆ ಆ ಊಟವೇನು ರುಚಿಸುವುದೇ? ತನ್ನ ಸಹಜ ಸ್ವಾದವನ್ನು ಕಳೆದುಕೊಳ್ಳುವುದು. ಹಾಗೆಯೇ ಸಹಜತೆ ಎನ್ನುವುದು ಕಾವ್ಯಕ್ಕೆ ಬಹುಮುಖ್ಯವಾದುದು. ಸಹಜತೆ ಇಲ್ಲದಾತನ ಕಾವ್ಯ ರುಚಿಸಲಾರದು ಎಂದು ಹೇಳುವುದರ ಮೂಲಕ ಕಾವ್ಯಕ್ಕೆ ಸಹಜತೆ, ಸ್ವಾಭಾವಿಕತೆ ಬಹಳ ಮುಖ್ಯ ಎಂದು ಹೇಳುವನು. ಮೇಲಿನ ಎರಡೂ ಪದ್ಯಗಳಲ್ಲಿ ಕಾವ್ಯಕ್ಕೆ ಸಹಜತೆ ಎಂಬುದಿದೆ ಎಂದು ತಿಳಿಸುವನು.

**ಕಾವ್ಯದ ಸಹಜತೆ**

ಸಾಜ ಎನ್ನುವ ಪದ ಸಹಜ ಎಂದಾಗಿದೆ. ಕವಿತ್ವ ಎನ್ನುವುದು ಸಹಜ ಗುಣ. ಅದು ಸ್ವಾಭಾವಿಕವಾಗಿ ಕವಿಯಲ್ಲಿ ಬರಬೇಕು. ಇಲ್ಲವಾದರೆ ಆ ಕಾವ್ಯ ಇತರರಿಗೆ ರುಚಿಸದೆ ಹೋಗಬಹುದು. ಕವಿ ನಯಸೇನ ಎರಡು ಪದ್ಯಗಳಲ್ಲಿ(೪೯,೩೦) ಕಾವ್ಯದ ಸಹಜಗುಣವನ್ನು ಕುರಿತು ಹೇಳಿರುವನು. ಕಾವ್ಯ ಸಹಜ ಗುಣವಿಲ್ಲದಾತನ ಕಾವ್ಯವು ಉಪ್ಪಿಲ್ಲದ ಊಟದಂತೆ ಸಪ್ಪೆಯಾಗಿರುವುದು. ಆದ್ದರಿಂದ ಕವಿಯ ಕಾವ್ಯದಲ್ಲಿ ಸಹಜತೆ ಇರಬೇಕು. ಅದು ಕವಿಯಲ್ಲಿ ಸಹಜ ಅಭಿವ್ಯಕ್ತಿಯ ಕಾವ್ಯ ಕ್ರಯೆಯಾಗಿ ತನ್ನಿಂದ ತಾನೇ ಬರಬೇಕು.

ಮುನಿದಪರೆಂಬುದೊಂದು ಭಯಮುಳ್ಳ ನಿತುಪ್ಪೊಡವೊಂದು ಮಿಲ್ಲಸ
ಜ್ಜನರೊಳದೇಕವರ್ಪುರುಡಿಪರ್ಮುೞ ನಿವರ್ಕಡು ದುಷ್ಟರಪ್ಪವರ
ಮುನಿದೊಡೆ ರಾಗದಿಂದೊಸೆದೊಡಂ ಕಡುಪೊಲ್ಲದಜಲಿಂದಮುಂದೆ
ರ್ಜನ ಪರಮೇಶ್ವರರ್ಗಜಿದು ಕೈ ಮುಗಿವೆ ಬಲಗೊಂಡು ಭಕ್ತಿಯಿಂ

ಧರ್ಮಾಂಮೃತ(೧.೩೧)

ಸಿಟ್ಟಾದವರನ್ನು ಸಮಾಧಾನಪಡಿಸಬಹುದು. ಆದರೆ ಸಿಟ್ಟಾದ ದುರ್ಜನರನ್ನು ಸಮಾಧಾನ ಪಡಿಸಲಾಗದು. ಆದ್ದರಿಂದ ದುರ್ಜನರಿಗೆ ಮೊದಲು ನಮಸ್ಕರಿಸುವೆನೆಂದು ತಿಳಿಸುತ್ತಾ, ಕೋಪಗೊಂಡ ದುರ್ಜನರ ಸಹವಾಸ ಸರಿಯಲ್ಲವೆನ್ನುತ್ತಾನೆ. ಸಜ್ಜನರನ್ನು ಸಮಾಧಾನಪಡಿಸ ಬಹುದು ಕೋಪಗೊಂಡ ದುರ್ಜನರ ಸಹವಾಸ ಬಹಳ ಕಷ್ಟಕರ ಪದೇ ಪದೇ ಕೋಪಗೊಳ್ಳುವುದು ದುರ್ಜನರ ಲಕ್ಷಣವೆಂದು ಕಾಣುತ್ತದೆ.

ಕವಿ ನೇಮಿ ಚಂದ್ರನ ಲೀಲಾವತಿ ಪ್ರಬಂಧದಲ್ಲಿ ಕುಕವಿಗಳಿಗಾಗಿಯೇ ಕೆಲವು ಪದ್ಯಗಳಿವೆ. ಆ ಪದ್ಯಗಳು ಇಂತಿವೆ.

ಆನುಂ ಬುಧರೊಡನೆ ನೃಪಾ
ಸ್ಥಾನದೊಳಿರ್ದಪ್ಪೆನೆಂದು ಕುಕವಿ ಕದಂಬಂ
ಬಾನುದ್ದಮಪ್ಪುದೇಕು
ದ್ಯಾನದೊಳೊಡನಿರವೆ ಕಾಗೆಯುಂ ಕೋಗಿಲೆಯುಂ

ಲೀಲಾವತಿ(೧-೨೬)

ಕೋಗಿಲೆಗಳು ಮಾತ್ರ ವಿದ್ಯಾನವನಗಳಲ್ಲಿರುತ್ತವೆ. ಆದರೆ ಕಾಗೆಗಳಿರಲು ಸಾಧ್ಯವೇ? ನಾನು ರಾಜಾಸ್ಥಾನದಲ್ಲಿ ಕವಿಯಾಗಿರಲು, ಕುಕವಿ ಬಕಗಳು ಅಲ್ಲಿರಲು ಸಾಧ್ಯವೇ? ಎನ್ನುತ್ತ ಕುಕವಿಗಳನ್ನು ಕಾಗೆಗೆ ಹೋಲಿಸಿ ತನ್ನನ್ನು ಕೋಗಿಲೆ ಎಂದು ಹೋಲಿಸುತ್ತಾನೆ.

**ಬುಧರು ಎಂದರೆ ಯಾರು**

ಪಂಡಿತರಾದವರನ್ನು ಅಥವಾ ವಿದ್ವಾಂಸರನ್ನು ಬುಧರೆಂದು ಕರೆಯಲಾಗಿದೆ. ರಾಜಾಸ್ಥಾನಗಳು ಅಂದು ಕಾವ್ಯ ಪರಿಣಿತಿ ಹೊಂದಿದ ವಿದ್ವಾಂಸರಿಂದ ತುಂಬಿರುತ್ತಿದ್ದವು. ಅದಕ್ಕಾಗಿಯೇ ನೇಮಿಚಂದ್ರ ನಾನು ಬುಧರೊಡನೆ ರಾಜಾಸ್ಥಾನದಲ್ಲಿದ್ದೆನೆಂದು ತನ್ನನ್ನು ಪ್ರಶಂಸಿಸಿ ಕೊಳ್ಳುತ್ತಾನೆ.

ಕಾವ್ಯರಚನೆಗೆ ಅಗತ್ಯವಾದ ಪ್ರತಿಭೆ ಹಾಗೂ ವ್ಯುತ್ಪತ್ತಿಗಳಿಲ್ಲದೆ ಓದದೇ, ಕೇಳದೆ, ವಿದ್ವಾಂಸರೊಡನೆ ಚರ್ಚಿಸದೆ ಬರೆದ ಕಾವ್ಯ ನಿಷ್ಪ್ರಯೋಜಕ. ಅವರಿವರಿಂದ ಕಲಿತು ಅಥವಾ ಕದ್ದು ತಾವೂ ಕವಿಗಳೆಂದು ಬೀಗುವ ಕುಕವಿಗಳಿಗೆ ಕಾವ್ಯದ ಪರಿಚಯವಿಲ್ಲ. ಅದಕ್ಕೆ ಚಿದಾನಂದ ಕವಿಯು "ಗಂಟಿಕ್ಕುವವರ್ ಎಂಜಲಾದ ಬರುವಾತುಗಳಂ"[೪] ಎನ್ನುತ್ತಾನೆ. ಇನ್ನೊಬ್ಬರ ಎಂಜಲಾದ ಮಾತುಗಳನ್ನು ಸಂಗ್ರಹಿಸುತ್ತಾರೆ. ವಿನಃ ಅವರಿಗೆ ತಮ್ಮದೇ ಆದ ಕಾವ್ಯಶಕ್ತಿ ಇಲ್ಲ. "ಪರರ ಕಾವ್ಯಾರ್ಥಗಳ ಛಿದ್ರಿಸುವ ಅಕ್ಷರ ದರಿದ್ರರು."[೫] ಕವಿಗಳು ಅಕ್ಷರ

ದರಿದ್ರರಾಗಿರಬಾರದು. ಅಕ್ಷರ ದಾರಿದ್ರ ಇದ್ದರೆ ಅವರು ಕವಿ ಎನಿಸಿಕೊಳ್ಳಲಾರ. ಅಂಥವರು ಕುಕವಿಗಳೆನಿಸಿಕೊಳ್ಳುತ್ತಾರೆ.

ನೀರೊಳಗಣ ಪೆಣನಂತೆವೊ
ಲಾರೆದವೊಡಮುರುಳೆವರಿದು ಪುರುಳಿಲ್ಲದಹಂ
ಕಾರದೊಳೆ ಬಾತು ಬಲ್ಮೆಗೆ
ಹಾರೈಸುವರೇಕೆ ಬಯಕೆಗವಿಗಳ್ ಕೆಲಬರ್

**ಲೀಲಾವತಿ(೧.೨೪)**

ಈ ಪದ್ಯದಲ್ಲಿ ಕವಿ ನೇಮಿಚಂದ್ರನು ಕವಿಯಾಗ ಬಯಸುವ ಬಯಕೆಗವಿಗಳನ್ನು ಕುರಿತು ವಿವರಿಸುತ್ತ ನೀರಿನೊಳಗಿನ ಹೆಣದಂತೆ, ಏಳುವ ಮುಳುಗುವ ತೇಲುವ ಹಾಗೆ ಹುರುಳಿಲ್ಲದ ಕೆಲವರ ಮಾತುಗಳು ನಿರರ್ಥಕವಾದವುಗಳು. ಇವರು ಕೇವಲ ಕವಿಯಾಗಬೇಕೆಂಬ ಆಸೆಯನ್ನು ಹೊಂದಿದವರು ಕವಿಗಳಲ್ಲ ಎನ್ನುವನು.

**ಬಯಕೆ ಗವಿಗಳ್**

ಕವಿಯಾಗಬೇಕೆಂಬ ಬಯಕೆ ಇದ್ದರೆ ಸಾಲದು ಜೊತೆಗೆ ಪ್ರಯತ್ನವೂ ಇರಬೇಕು. ಬಯಕೆ ಅಥವಾ ಆಸೆಯನ್ನು ಹೊಂದಿ ಕೇವಲ ಅಹಂಕಾರದ ಮಾತುಗಳಾಡುತ್ತಿದ್ದರೆ ಅವನು ಕವಿಯಾಗಲಾರ ಅಂಥವರ ಮಾತುಗಳು ನೀರಿನಲ್ಲಿ ತೇಲುವ ಹೆಣದಂತೆ ಎಂದಿರುವನು.

ಎಂದುದನೆನುತಿರ್ಪ ಗಿರಿ
ಯಂದದಿನತಿ ನಿಶಿತಸುಕವಿವಾಕ್ಕುಲಿಶಂ ಬೀ
ಟ್ತಿಂದೊಡಮೆರ್ದೆಯಂ ಸೀದೊಡ
ವೊಂದಕ್ಕರ ಮಿಲ್ಲೆನಿಪ್ಪ ಕಲ್ಲೆರ್ದೆಗವಿಗಳ್

**ಲೀಲಾವತಿ(೧.೨೫)**

ಅವರಿವರು ಬರೆದುದನ್ನೆ ತಾವು ಬದಲಾಯಿಸಿ ತಮ್ಮ ಮಾತಿನ ಮೂಲಕ ಮರುದನಿಗೈಯ್ಯುವ ಇವರು ಸುಕವಿಗಳ ಮಾತನ್ನು ಬಿತ್ತುವವರೇ ವಿನಃ ಅವರ ಎದೆಯನ್ನು ಸೀಳಿದರೂ ಒಂದು ಅಕ್ಷರವೂ ಇಲ್ಲದಿರುವುದು, ಇಂಥವರನ್ನು ಕಲ್ಲೆದೆಯ ಕವಿಗಳು ಎನ್ನುತ್ತಾನೆ. ಕವಿ ಬಡವನಾದರೆ ಯಾವ ಕೊರತೆಯಿಲ್ಲ, ಆದರೆ ಅವನಲ್ಲಿ ಅಕ್ಷರ ದಾರಿದ್ರ್ಯ ಮಾತ್ರ ಇರಬಾರದು.

**ಕಲ್ಲೆರ್ದೆ ಗವಿಗಳು**

ಕಲ್ಲೆದೆಯ ಕವಿಗಳೆಂದು ಇವರನ್ನು ಕರೆಯಲು ಕಾರಣ ಕವಿಗೆ ಸ್ವಂತಿಕೆ ಎನ್ನುವುದೇ ಇಲ್ಲ. ಇನ್ನೊಬ್ಬರು ಹೇಳಿದ್ದನ್ನೆ ಪ್ರತಿಧ್ವನಿಯಂತೆ ಹೇಳುವವರು. ಇವರ ಎದೆ ಸೀಳಿದರೂ ಒಂದಕ್ಷರವಿಲ್ಲವೆನ್ನುವುದು. ಬಹಳ ವ್ಯಂಗ್ಯವಾಗಿ ಕುಕವಿಗಳನ್ನು ಅಪಹಾಸ್ಯ ಮಾಡಿರುವನು. ಅಂದು ಬಯಕೆಗವಿಗಳಂತೆ ಕಲ್ಲೆರ್ದೆ ಗವಿಗಳು(ಕವಿಗಳು) ಇದ್ದರು.

ಕಸಮಂ ಕೀೞ್ತಲ್ಲದೆ ಪೊಸ
ಸಸಿಗಳ್ ಮೈಗೊಳ್ಳವೆತ್ತಿ ಕಳೆಯದೆ ಖಳತಾ
ಮಸಮಂ ಬೇರ್ವೆರಸಿಂ ಪಸ
ರಿಸುಗುಮೆಬುಧವಿಧುಗೆ ವಿಮಳಕೃತಿ ದೀಧಿತಿಗಳ್

**ಲೀಲಾವತಿ**(೧.೨೬)

ಈ ಕುಕವಿಗಳಿಗೆ ತಮ್ಮ ಸುತ್ತ-ಮುತ್ತಲಿರುವ ಕಾವ್ಯಗಳನ್ನು ಟೀಕಿಸುವುದಲ್ಲದೆ ಬೇರೆ ಕೆಲಸವೇ ಇಲ್ಲ. ಕವಿ ಕಾವ್ಯವನ್ನು ಬರೆಯುತ್ತಲೇ ಹೋಗುತ್ತಾನೆ. ಕಾವ್ಯವನ್ನು ಮೆಚ್ಚದವರು ಹಳಿಯುತ್ತಲೇ ಹೋಗುತ್ತಾರೆ. ಬಾಳುವ ಮನೆಗೊಂದು ಬೊಗಳುವ ಮನೆಯೆಂಬಂತೆ ನಿಂದಿಸುವವರು, ಕಸವನ್ನು ಕೀಳಲಾರದೆ ಹೊಸ ಸಸಿಗಳು ಹುಟ್ಟುವಾದರೂ ಹೇಗೆ? ಅಂತೆಯೇ ಕುಕವಿಗಳು ಕಸಕ್ಕೆ ಸಮಾನ. ಕುಕವಿಗಳನ್ನು ಬೇರು ಸಹಿತ ಕೀಳಬೇಕು. ಅಂದಾಗ ಮಾತ್ರ ಸತ್ಕವಿಯಿಂದ ಹೊಸ ಕಾವ್ಯ ಸೃಷ್ಟಿಯಾಗುತ್ತದೆ. ಎನ್ನುವನು.

**ವಿಮಳ ಕೃತಿ**

ಉತ್ತಮವಾದ ಪರಿಶುದ್ಧವಾದ ಹಾಗೂ ಶ್ರೇಷ್ಠವಾದ ಕಾವ್ಯವನ್ನು ವಿಮಳ ಕೃತಿ ಎನ್ನಲಾಗಿದೆ. ಪಾಂಡಿತ್ಯ ಹೊಂದಿದ ಕಬ್ಬಿಗನಿಂದ ಉತ್ತಮವಾದ ಕಾವ್ಯ ಹೊರಹೊಮ್ಮುವುದು. ಅಂತಹ ಕವಿಗಳು ಮಾತ್ರ ವಿಮಳ ಕೃತಿ ದಿಧಿತಿಗಳು ಎನಿಸಿಕೊಳ್ಳುತ್ತಾರೆ.

ಸೊಗಯಿಸುವ ಕಬ್ದಮಂಕ
ಬ್ಬಿಗರಲ್ಲದೆ ಮೆಚ್ಚರುಟಿದರೇನಜಿವರೆತುಂ
ಬಿಗಳಲ್ಲದೆ ಪೂವೊಳ್ ಮಗ
ಮಗಿಸುವ ಕಂಪಂ ಕಡಂದುಜೇನಜಿದಪುದೇ

**ಕಬ್ಬಿಗರ ಕಾವ**(೧.೦೮)

ಹೂವಿನ ಕಂಪನ್ನು ದುಂಬಿಗಳಲ್ಲದೆ ಕಡಜುರಗೆ ಹುಳು ಅರಿಯುವುದೇ, ಹಾಗೆಯೇ ಸೊಗಸಾದ ಕಾವ್ಯದ ಸೊಂಪನ್ನು ಸುಕವಿಗಳಲ್ಲದೆ ಕುಕವಿಗಳು ಅರಿಯುವರೇ? ಸಾಧ್ಯವಿಲ್ಲ. ಸತ್ಕವಿಗಳ ಕಾವ್ಯವನ್ನು ಸತ್ಕವಿಗಳೇ ಬಲ್ಲರು. ಕುಕವಿಗಳು ನಿಂದಿಸಲು ಮಾತ್ರ ಯೋಗ್ಯರು ಎನ್ನುವ ಮೂಲಕ ಕವಿಯನ್ನು ದುಂಬಿಗೆ, ಕಾವ್ಯವನ್ನು ಹೂವಿಗೆ, ಕುಕವಿಯನ್ನು ಕಚ್ಚುವ ಹುಳುಗಳಿಗೆ ಹೋಲಿಸಲಾಗಿದೆ.

ರಸವತ್ಕಾವ್ಯ ಮನರ್ಥಿವಟ್ಟು ಸುಜನಂ ಕೇಳ್ದಪ್ಪುಕೆಯ್ವಂತೆ ಸಂ
ತಸಮಂ ದುರ್ಜನನೇಕೆ ಕೇಳ್ದು ನಲಿವಂ ದುರ್ಬೋಧೆಯಂ
ಬೇಜೆ ಪುಟ್ಟಿಸುಗುಂ ನಿಷ್ಠುರೆ ವಜ್ರತುಂಡ ಹತಿಯಿಂ
ಕೀಟಂ ಭರಗೆಯ್ದು ಖಂಡಿಸುಗುಂ ಹೇಮಾಂಜಾಮೋದಮಂ

**ಮಲ್ಲಿನಾಥಪುರಾಣ(೧.೧೬)**

ರಸವತ್ತಾದ ಕಾವ್ಯದ ಸಾರವನ್ನು ಸುಜನನು ಕೇಳುವಂತೆ, ದುರ್ಜನನೇಕೆ ಕೇಳುತ್ತಾನೆ. ದುರ್ಬೋಧನೆಯಿಂದ ಬೇರೆ ರೀತಿಯ ಕಾವ್ಯ ನಿಂದನೆಯನ್ನು ಮಾಡುತ್ತಾನೆ. ಇಂತಹ ಕಾವ್ಯ ಖಂಡನೆ ಸಲ್ಲದು ಎನ್ನುತ್ತಾನೆ.

ವಚನಪ್ರೌಢಿಯನರ್ಥ
ಪ್ರಚುರತೆಯಂ ದೋಷದೃಷ್ಟಿ ಪರನಲ್ಲದವಂ
ಶುಚಿಮತಿ ಪೊಗಟ್ಗುಂ ಮಾತ್ಸ
ರ್ಯಚಿತ್ತನುನ್ಮತ್ತ ನಜಿದೊಡೆಂ ಪೊಗಳ್ದಪನೇ

**ಮಲ್ಲಿನಾಥ ಪುರಾಣಂ(೧.೧೭)**

ಮಾತಿನ ಜಾಣರು, ದೋಷದೃಷ್ಟಿಯಿಲ್ಲದವರು ಸದ್ಗುಣಿಯು ಮಾತ್ರ ಕಾವ್ಯವನ್ನು ಹೊಗಳುತ್ತಾನೆ. ಮಾತ್ಸರ್ಯ ಚಿತ್ತನೂ ಉನ್ಮತ್ತನಾದವನು ಕಾವ್ಯವನ್ನು ಹೊಗಳುವನೆ? ಕಾವ್ಯರಾಧಕರ ಭಾವನೆಗಳು ಚಿತ್ತವೂ ಶುದ್ಧವಾಗಿರುತ್ತದೆ. ಆದರೆ ಕಾವ್ಯ ನಿಂದಕರ ಭಾವನೆ ಮತ್ತು ಚಿತ್ತ ಚಾಂಚಲ್ಯವಿರುತ್ತದೆಂಬ ನಾಗಚಂದ್ರನ ಮಾತನ್ನು ಒಪ್ಪಲೇಬೇಕು.

ರಸಮಂ ನಾಲಗೆ ಕವಿತಾ
ರಸಮಂ ಕವಿ ಕುಸುಮರಸಮನಳಿಮಾಳೆ ಸುಧಾ
ರಸಮಂ ಸುರರಕ್ಷಯಸುಖ
ರಸಮಂ ಪರಮಾತ್ಮನಜೀವನುಟುದವರಜೆಯರ್

**ಮಲ್ಲಿನಾಥ ಪುರಾಣಂ**

ರಸವನ್ನು ನಾಲಿಗೆ, ಕವಿತಾ ರಸವನ್ನು ಕವಿ, ಹೂವಿನ ರಸವನ್ನು(ಸುವಾಸನೆ) ದುಂಬಿ, ಸುಧಾ(ಅಮೃತ) ರಸವನ್ನು ದೇವತೆಗಳು ಅಕ್ಷಯ ಸುಖ ರಸವನ್ನು ಪರಮಾತ್ಮನು ಅರಿಯುತ್ತಾನೆ. ವಿನಃ ಉಳಿದವರಿಗೇನಾದರೂ ಅದರ ಸ್ವಾದ ಗೊತ್ತೆ? ತಿಳಿಯಲು ಸಾಧ್ಯವಿಲ್ಲ. ಈ ಪದ್ಯದಲ್ಲಿ ಉಳಿದವರು ಎಂಬ ಪದ ಬರುತ್ತದೆ. ಅಂದರೆ ಕಾವ್ಯಜ್ಞಾನವಿಲ್ಲದವರು ಅಥವಾ ಕಾವ್ಯ ನಿಂದಕರೆಂದು ಅರ್ಥ. ಸುಜ್ಞಾನಿಗಳಿಗೆ ಕಾವ್ಯಾರ್ಥ ತಿಳಿಯುವುದೇ ವಿನಃ ಅಜ್ಞಾನಿಗಳು ಅರಿಯಲು ಸಾಧ್ಯವೇ?

**ಕವಿತಾ ರಸ**

ಕಾವ್ಯದಲ್ಲಿ ರಸಗಳು ಬಹಳ ಮುಖ್ಯವಾಗಿವೆ. ಅಲಂಕಾರಿಕರು ಶೃಂಗಾರಾದಿ ನವರಸ ಗಳನ್ನು ಕುರಿತು ಹೇಳುತ್ತಾರೆ. ಯಾವುದೇ ರಸ ಪ್ರಧಾನವಾಗಿ ಬರುತ್ತದೆ. ಅಂತಹ ಕಾವ್ಯ ರಸವತ್ಕಾವ್ಯ ವೆನಿಸುತ್ತದೆ. ಇಲ್ಲವಾದರೆ, ಅದು ರಸಹೀನ ಕೃತಿಯಾಗುತ್ತದೆ. ಶೃಂಗಾರ ರಸ ಪ್ರಧಾನ ಹಾಗೂ ವೀರರಸ ಪ್ರಧಾನವಾದ ಕಾವ್ಯಗಳು ಕನ್ನಡ ಸಾಹಿತ್ಯದಲ್ಲಿ ಮಹತ್ವವನ್ನು ಪಡೆದಿವೆ.

ಚತುರಕವಿ ಪೇೞೆ ರಸವ
ತ್ಕೃತಿಯಂ ರಸಮಗ್ನವಾಗಿ ದುರ್ಜನನುಮದಂ
ಸ್ತುತಿಯಿಸವೇೞ್ಪಿದು ತಣ್ಪಂ
ಹುತಾಶನಂ ಮಂತ್ರಶಕ್ತಿಯಿಂತಾಳ್ದುವವೊಲ್

**ಮಲ್ಲಿನಾಥಪುರಾಣ(೧.೨೯)**

ಚತುರನಾದ ಕವಿಯು ರಸವತ್ತಾದ ಕಾವ್ಯರಚನೆ ಮಾಡಿ ದುರ್ಜನನು ಅದನ್ನು ಸ್ತುತಿಸುವುದು ಯಾವುದೋ ಮಂತ್ರಶಕ್ತಿಯಿಂದ ಎಂದೇ ಭಾವಿಸಬೇಕು. ಅಂದರೆ ಸತ್ಕವಿಯ ಕಾವ್ಯವನ್ನು ಕುಕವಿಯು ಎಂದೂ ಹೊಗಳಲಾರನೆಂದೇ ಇದರರ್ಥ.

**ಚತುರ ಕವಿ**

'ಚತುರಕವಿ' ಎಂದರೆ ಯಾರು ಅವರು ಹೇಗಿರುತ್ತಾರೆ? ಎಂಬ ಪ್ರಶ್ನೆ ಬರುತ್ತದೆ. ಇನ್ನೂ ಕೆಲವು ಕಾವ್ಯಗಳಲ್ಲಿ 'ಅತಿಚತುರ ಕವಿ' ಎಂಬ ಪದ ಪ್ರಯೋಗವಿದೆ. ಪಾಂಡಿತ್ಯವನ್ನು ಹೊಂದಿ ಪ್ರಸಿದ್ಧ ಕಾವ್ಯ ರಚನೆ ಮಾಡಿದ ಕವಿಗಳು ಚತುರ ಹಾಗೂ ಅತಿ ಚತುರ ಕವಿಗಳ ಸಾಲಿನಲ್ಲಿ ಇರುತ್ತಾರೆ. ನಿದರ್ಶನಕ್ಕೆ ಪಂಪ, ರನ್ನ ನಾಗವರ್ಮ ಇತ್ಯಾದಿ ಕವಿಗಳನ್ನು ಹೆಸರಿಸಬಹುದು.

ಆರಯ್ಯದೆ ರಸಭಾವಮಂ
ನಾರಯ್ಯದೆ ಪದ ಪದಾರ್ಥಮಂ ದೆಸೆವಿರ್ದಂ
ಸೀರುಡುವಿನಡವಿಯಂತಿರೆ
ನೀರಸಮೆನೆ ಕೇಳ್ದರಲಸೆ ಪೇಳ್ವಂ ಕವಿಯೇ

**ಮಲ್ಲಿನಾಥ ಪುರಾಣ (೧.೩೦)**

ಕಾವ್ಯದಲ್ಲಿ ಬರುವ ರಸ ಭಾವವನ್ನು ಲಕ್ಷಿಸದೇ ಕಾವ್ಯದ ಪದ, ಪದದರ್ಥವನ್ನು ಗಮನಿಸದೆ, ದಿಕ್ಕುಗೆಟ್ಟು ಸೀರುಂಡೆಯಂತೆ(ಜೀರುಂಡೆ) ಅರಣ್ಯದಲ್ಲಿ ಕೂಗುವ ಹುಳುವಿನಂತೆ ಕೂಗಿದರೇ ಕವಿಯಾಗುವನೆ? ಕೇಳಲು ಕರ್ಕಶವಾಗುವ ಕಾವ್ಯವನ್ನು ರಚಿಸಿ ಕೇಳುಗರಿಷ್ಟ ಪಡದ ಕಾವ್ಯ ರಚಕನು ಕವಿಯಾಗಲಾರ.

ಕಾವ್ಯದಲ್ಲಿ ರಸ, ಭಾವ, ಪದ ಹಾಗೂ ಪದದ ಅರ್ಥ ಬಹಳ ಮುಖ್ಯವಾದವುಗಳು. ಇದನ್ನು ಗಮನಿಸದೆ ಕಾವ್ಯ ರಚಿಸಿದ ಕವಿಯ ಕಾವ್ಯವು ಅರಣ್ಯದ ಜೀರುಂಡೆಯ ಧ್ವನಿಯಾಗುವುದು. ಅಂತಹ ಕಾವ್ಯವನ್ನು ಯಾರು ಇಷ್ಟಪಡಲಾರರು ಎಂದಿರುವನು. ಸತ್ಕವಿಯಾದವನು ಎಲ್ಲರೂ ಮೆಚ್ಚುವಂತೆ ಕಾವ್ಯ ರಚಿಸಬೇಕು. ವಾಚಕರಿಗೆ ಸೇರದಿರುವ ಕಾವ್ಯ ರಚನೆಯಿಂದ ಆಗುವ ಲಾಭವಾದರೂ ಏನಿದೆ? ಇಷ್ಟವಿಲ್ಲದ ಕಾವ್ಯ, ಕಾವ್ಯವಲ್ಲ, ಎಂದಿರುವನು. ಬಹುಶಃ ಅಂದು ರಸ, ಭಾವ ಅರ್ಥವನ್ನರಿಯದೆ ಕಾವ್ಯ ರಚನೆ ಮಾಡಿದ ಕವಿಗಳೂ ಇರಬಹುದು. ಅಂತಹ ಆಕವಿಗಳನ್ನು ಕುರಿತು ಹೇಳಿದ ಕಿವಿ ಮಾತುಗಳಿವು.

ಬಗೆ ಕಿರಿದು ಮಾತು ಪಿರಿದೆನೆ
ಬಗೆಯಂ ನುಡಿಮುಟ್ಟೆ ನುಡಿಯದೆನೆ ಬಗೆ ಪೆಱರಂ
ಬಗೆಗೊಳಿಸಲಾಱದೆನೆ ಪೇ
ೞ್ದಗಾವಿಲರ್ಕವಿತೆಗೇಕೆ ಮುಯ್ಯಂ ಮಾೞ್ಪರ್

**ಮಲ್ಲಿನಾಥ ಪುರಾಣಂ(೧.೩೧)**

ಕವಿಯು ರೀತಿ–ನೀತಿಯನ್ನರಿಯದೆ ಮಾತು ಹಿರಿದಾಗಿಯು ರೀತಿ ಕಿರಿದಾಗಿಯು ಇದ್ದು ತನ್ನ ನಡೆಯಿಂದ ಇನ್ನೊಬ್ಬರ ರೀತಿಯನ್ನು ಸುಧಾರಿಸದ ಕವಿಯ ಕಾವ್ಯ ಏನೂ ಅರಿಯದ ಗಾವಿಲನ ಕವಿತೆಯಿದ್ದಂತೆ ಅಂಥವರ ಕಾವ್ಯಕ್ಕೇಕೆ ಮನ್ನಣೆ ಎಂದಿರುವನು. ಕವಿಯ ನಡೆ–ನುಡಿಯಿಂದ ಜನರು ಪ್ರಾಜ್ಞರಾಗಬೇಕೇ ವಿನಃ ಕವಿಯ ನಡೆ ಸರಿಯಿಲ್ಲದಿದ್ದು, ಅಂತಹ ಕವಿ ರಚಿಸಿದ ಕಾವ್ಯಕ್ಕೆ ಮಾನ್ನತೆ ಕೊಡುವ ಅಗತ್ಯವಿಲ್ಲ ಎನ್ನುತ್ತಾರೆ.

ಪೆಱರ ನುಡಿ ಪೆಱರ ಮಾರ್ಗಂ
ಪೆಱರರ್ಥಂ ಪೆಱರ ದೇಸಿಪಱರೋಜೆಯನಲ್
ಪೆಱರ ಬಟೆಸಂದು ತನ್ನಂ
ಮೆಱೆವ ಕವಿಯಲ್ಲ ಮಾಟಕಾಱರ ಚೋಹಂ

**ಮಲ್ಲಿನಾಥಪುರಾಣಂ** (೧.೩೨)

ಬೇರೆಯವರ ನುಡಿ, ಬೇರೆಯವರ ಮಾರ್ಗ, ಬೇರೆಯವರ ಅರ್ಥ ಬೇರೆಯವರ ದೇಸಿ ಬೇರೆಯವರ ಒಳಿತನ್ನು ಬಳಸಿ ತನ್ನನ್ನು ಮೆರೆಸುವವನು ಕವಿಯಲ್ಲ. ಅವನು ಮಾಟಕಾರ. ಅವನು ಬೇರೆಯವರ ವೇಷವನ್ನು ಧರಿಸುತ್ತಾನೆಯೇ ವಿನಃ ತನ್ನತನವನ್ನು ಮೆರೆಯಲಾರ. ಪ್ರತಿಯೊಬ್ಬ ಕವಿಗೂ ತನ್ನದೇ ಆದ ಅಸ್ತಿತ್ವವಿರುತ್ತದೆ. ಆದರೆ ಅದನ್ನು ಮರೆತು ಬೇರೆಯವರ ನುಡಿಯನ್ನು, ಮಾರ್ಗವನ್ನು, ದೇಸಿಯನ್ನು, ಅರ್ಥವನ್ನು ಬಳಸುವವನು ಕವಿಯಾಗಲಾರ. ಅವನು ಮಾಟಗಾರನಿದ್ದಂತೆ ಎನ್ನುವನು.

**ಮಾರ್ಗ**

ಮಾರ್ಗ ಸಾಹಿತ್ಯ ಕುರಿತು ನಮ್ಮ ಪೂರ್ವದ ಕಾವ್ಯಗಳಲ್ಲಿ ಅಲ್ಲಲ್ಲಿ ನಿರ್ದೇಶ ಬಂದಿದೆ. ಕವಿರಾಜಮಾರ್ಗದಲ್ಲಿಯೇ ಮಾರ್ಗದ ಸುಳಿವು ಸಿಕ್ಕಿದ್ದು, ಬಳಿಕ ಪಂಪನಲ್ಲಿ ಪ್ರಸ್ತಾಪವಾಗಿದೆ. "ದೇಶಿಯೊಳ್ ಪುಗುವುದು ಪೊಕ್ಕಮಾರ್ಗದೊಳ್ ತಳ್ವುದು ತಳ್ತೊಡೆ ಕಾವ್ಯಬಂಧಮೊಪ್ಪುಗುಂ ಎಂದು ತನ್ನ ಭಾರತದಲ್ಲಿ ಮಾರ್ಗದ ಗುರುತನ್ನು ಮಾಡಿಸಿದ್ದಾನೆ. "ರಾಮಕಥೆಯು ಕೆಱೆದಾಗಿದೆ ದೇಶಿ ಮಾರ್ಗಮೆಂಬೆರಡುಱೊಳಂ ಜಸಂಬಡದು ಪಂಡಿತಮಂಡಲಿ ಮೆಟ್ಟಿ ತಾನು ಕೃತಿ ಹೇಳಿರುವುದಾಗಿ ನಾಗಚಂದ್ರನು ತನ್ನ ರಾಮಚಂದ್ರ ಚರಿತ ಪುರಾಣದಲ್ಲಿ ಹೇಳಿದ್ದಾನೆ. ಹೀಗೆ ಇನ್ನೂ ಹಲವಾರು ಕವಿಗಳು ಮಾರ್ಗ ಸಾಹಿತ್ಯವನ್ನು ಕುರಿತು ಹೇಳುತ್ತಾರೆ.

**ದೇಶಿ**

ಕನ್ನಡ ಕಾವ್ಯ ಪ್ರಕಾರದಲ್ಲಿ ದೇಸಿ ಸಾಹಿತ್ಯದ ಕಲ್ಪನೆ ಬಹಳ ಕಾಲದಿಂದಲೇ ಬಂದಿದೆ. 'ದೇಸಿಯನೇ ನಿಱಿಸಿ ಖಂಡಪ್ರಸಮನತಿಶಯಮಿದೆಂದು ಯತಿಯಂ ಮಿಕ್ಕರ್' ಎಂದು ಕವಿರಾಜಮಾರ್ಗಕಾರ ಹೇಳಿದನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ದೇಶಿ ಎಂಬ ಪದ ಮಾತಿನ ಸಹಜತೆಯನ್ನು ಸೂಚಿಸುತ್ತದೆ. ದೇಶಿಯ ನಿಲುವು ನಿರಾಡಂಬರ ಪರವಾದುದು.

ಪೆಜಿರ ನುಡಿವುದೆ ತನಗೊಂ
ದಱುತಮೆನಲ್ ತನ್ನ ಮೊಗದೊಳೊಂದಕ್ಕರಮಂ
ಪೊಱಮಡಿಸಲಱಿಯದಱಿತಮ
ನಱಿಯದರೊಳ್ ಮೆಱೆವಸಾಸಿ ಗಂಗಿದಿರುಂಟೇ

**ಮಲ್ಲಿನಾಥ ಪುರಾಣಂ(೧.೩೩)**

ಬೇರೆಯವರ ನುಡಿಯನ್ನೆ ತನ್ನದೆಂದು ತಿಳಿದು ತನ್ನ ಬಾಯಿಂದ ಒಂದಕ್ಷರವೂ ನುಡಿಯಲು ಅರಿಯದೆ, ಅರಿತಂತೆ ನಟಿಸುವ ಸಾಹಸಿಗೆ ಇದಿರುಂಟೆ?

ಪರಿಣಿತ ಕವಿಂದ್ರವದನಾ
ಜಿರದೊಳ್ ಮೃದುಪದ ವಿನ್ಯಾಸಾಲಂ
ಕರಣಂ ರಂಜಿಸೆ ನರ್ತಿಪ
ಸರಸ್ವತಿಲಾಸ್ಯ ಭೇದಮಂ ಜಡನಱಿಯಂ

**ಮಲ್ಲಿನಾಥ ಪುರಾಣಂ(೧.೩೪)**

ಪರಿಣಿತರಾದ ಕವೀಂದ್ರರ ಮುಖದಿಂದ ಹೊರಹೊಮ್ಮಿದ ಮೃದುಪದ, ವಿಲಾಸ, ವಿನ್ಯಾಸ, ಅಲಂಕಾರಗಳು ರಂಜಿಸೆ ವರ್ತಿಸುವ ಸರಸ್ವತಿಯನ್ನು ಕುಕವಿಯಾದ ಜಡನು ಅರಿಯಲಾರನು.

ಕವಿಯ ದೃಷ್ಟಿಯಲ್ಲಿ ಕುಕವಿಗಳು ಜಡಜೀವಿಗಳು. ಅವರು ಸರಸ್ವತಿಯ ಹಾವ-ಭಾವ ನರ್ತನ ಇತ್ಯಾದಿಗಳನ್ನು ಅರಿಯಲಾರರು, ಪಂಡಿತರು ಮಾತ್ರ ಸರಸ್ವತಿಯ ಹಾವ-ಭಾವ, ಅವಳ ಅಲಂಕಾರ, ವಿನ್ಯಾಸ, ಭಾವ, ವಿಲಾಸ, ವಿಭ್ರಮ ಹಾಗೂ ಮೃದು ಪದಗಳನ್ನು ಬಲ್ಲವರಾಗಿರುತ್ತಾರೆ.

**ಮೃದು ಪದಗಳು**

ಕವಿಯ ವಿಶಿಷ್ಟತೆ ಇರುವುದು ಅವನು ಬಳಸುವ ಪದಗಳಲ್ಲಿ. ಮೃದು ಪದಗಳನ್ನು ಬಳಸುವುದು ಕಾವ್ಯದ ಒಂದು ವಿಶೇಷ ಗುಣಲಕ್ಷಣ. ಸುಂದರವಾದ ಅಥವಾ ಬಹುಸೂಕ್ಷ್ಮವಾದ ಪದಗಳನ್ನು ಬಳಸುವ ಕವಿಗಳು ಸರಸ್ವತಿಯ ಕೃಪೆಗೆ ಪಾತ್ರರಾದವರೆಂಬ ವಿಚಾರವನ್ನು ವ್ಯಕ್ತಪಡಿಸಿದ್ದಾನೆ.

ಅತಿ ಚತುರ ಕವೀಶ್ವರವಿರ
ಚಿತಕೃತಿ ಕಲ್ಲೆರ್ದೆಯನಿಪ್ಪ ಮೂರ್ಖರಿಗೆ ಚಮ ।

ತ್ಕೃತಿಯಂ ಮಾಡುಗುಮೆ ಶಿಲಾ
ಪ್ರತಿಮೆಯನುಚುಗುಮೆ ಮದನಮೋಹನ ಬಾಣಂ॥

**ಮಲ್ಲಿನಾಥ ಪುರಾಣ** (೧.೩೫)

ಅತಿ ಚತುರ ಕವೀಶ್ವರರಿಂದ ವಿರಚಿತವಾದ ಕೃತಿ, ಕಲ್ಲೆದೆಯ ಮೂರ್ಖನಿಗೆ ಚಮತ್ಕೃತಿಯನ್ನು ಬಹಳ ಹಗುರವೆಂದು ತಿಳಿದ ಹಾಗೆ, ಮನ್ಮಥನ ಹೂಬಾಣದಿಂದ ಶಿಲೆಯನ್ನು ಪ್ರತಿಮೆಯನ್ನಾಗಿ ಮಾಡಲಾಗುವುದೇ? ಎನ್ನುವುದರ ಮೂಲಕ ಕುಕವಿಗಳನ್ನು ಕುಕವಿಗಳ ಸ್ವಭಾವವನ್ನು ತಿಳಿಸಿದ್ದಾನೆ.

**ಅತಿಚತುರ ಕವೀಶ್ವರ**

ಕೆಲವು ಪದ್ಯಗಳಲ್ಲಿ ಚತುರ ಕವಿಗಳೆಂದು ಹೇಳಿದ್ದರೆ, ಇನ್ನೂ ಕೆಲವು ಪದ್ಯಗಳಲ್ಲಿ ಅತಿಚತುರ 'ಕವಿಶ್ವರ'ರೆಂದು ಹೇಳುತ್ತಾರೆ. ಬಹುಜನಪ್ರಿಯ ಪಂಡಿತ ಮಾನ್ಯರಾದ ಕವಿಗಳು ಕಾವಿಗಳಲ್ಲೆ ಶ್ರೇಷ್ಠರೆನಿಸಿಕೊಂಡವರು ಮಾತ್ರ ಅತಿಚತುರ ಕವಿಗಳು ಅವರಲ್ಲಿ ಪಂಪ, ಪೊನ್ನ, ರನ್ನ, ಜನ್ನ, ಕುಮಾರವ್ಯಾಸ ಇತ್ಯಾದಿ ಕವಿಗಳನ್ನು ಹೆಸರಿಸಬಹುದು.

**ಚಮತ್ಕೃತಿ**

ಕವಿಗಳು ಅತ್ಯಂತ ಚಮತ್ಕಾರದಿಂದ ಹಾಗೂ ಅತಿ ಜಾಗರೂಕತೆಯಿಂದ ರಚಿಸಿದ ಮಹತ್ವದ ಕೃತಿಯೇ ಚಮತ್ಕೃತಿ ಎನಿಸುತ್ತದೆ. ಪಂಡಿತೋತ್ತಮನಿಂದ ಮಾತ್ರ ಇಂಥಹ ಚಮತ್ಕೃತಿ ರಚಿಸಲು ಸಾಧ್ಯ. ಶಿಲ್ಪಿ ಒಂದು ಪ್ರತಿಮೆಯನ್ನು ತನ್ನ ಉಳಿಯಿಂದ ಕೆತ್ತಿದ ಹಾಗೆ ಕವಿಯು ಜನರು ಅಚ್ಚರಿಪಡುವ ಕಾವ್ಯವನ್ನು ರಚನೆ ಮಾಡುತ್ತಾನೆ. ಅದು ಚಮತ್ಕೃತಿ ಎನಿಸುತ್ತದೆ. ಕಾವ್ಯ ಚಮತ್ಕೃತಿಯಾದರೆ ಕವಿಯದು ಚಮತ್ಕಾರ್ಯವಾಗುತ್ತದೆ. ಮೂರ್ಖರು ಮಾತ್ರ ಚಮತ್ಕೃತಿಯನ್ನು ಹಗುರವಾಗಿ ಪರಿಗಣಿಸಬಾರದು. ಮೂರ್ಖರ ಲೇಖನಿ ಮನ್ಮಥನ ಹೂಬಾಣವಿದ್ದ ಹಾಗೆ ಹೂಬಾಣದಿಂದ ಶಿಲೆಯನ್ನು ಪ್ರತಿಮೆ ಮಾಡಲು ಸಾಧ್ಯವೇ? ಹಾಗೆಯೇ ಮೂರ್ಖ ಕವಿಯಿಂದ ಚಮತ್ಕೃತಿಯನ್ನು ರಚಿಸಲು ಸಾಧ್ಯವೇ ಎಂದಿರುವನು.

ತುಡುಕಿದ ದೋಷಿಯನಲ್ಲದೆ
ಪಿಡಿಯದು ಘಟಸರ್ಪನಂತುಟಲ್ಲದೆ ತನ್ನಂ
ತುಡುಕದ ನಿರ್ದೋಷಿಯು ಮಂ
ಪಿಡಿವುದು ಖಳಮುಖಘಟೋಗ್ರಜಿಹ್ವಾಸರ್ಪಂ

**ಜಗನ್ನಾಥ ವಿಜಯ**(೧.೧೨)

ಜಗನ್ನಾಥ ವಿಜಯದ ಈ ಪದ್ಯದಲ್ಲಿ ಕವಿ ರುದ್ರಭಟ್ಟನು ಕುಕವಿಗಳ, ಸ್ವಭಾವ ಚಿತ್ರಣವನ್ನು ಮಾಡಿರುವನು. ಘಟಸರ್ಪವು ತನ್ನನ್ನು ತೊಂದರೆಪಡಿಸಿದರೆ ಮಾತ್ರ ಕಚ್ಚುತ್ತದೆ. ಆದರೆ ಕುಕವಿಯೆಂಬ ಘಟಸರ್ಪವು ತನ್ನನ್ನು ತಡವದ ನಿರ್ದೋಷಿಯನ್ನೂ ಕಚ್ಚುತ್ತದೆ ಎಂದು ಕುಕವಿಯನ್ನು ಘಟಸರ್ಪಕ್ಕೆ ಹೋಲಿಸುತ್ತಾನೆ. ಕುಕವಿಯ ಬಾಯಿ ನಾಲಿಗೆ ಹಲ್ಲು ವಿಷಯುಕ್ತವಾಗಿದೆಯೆಂದು ವಿಷಜಂತುವಿಗೆ ಹೋಲಿಸಿದ್ದಾನೆ.

ವಾರಾಸಿಯ ಮಣಿಗಣಮಂ ಕ್ರೂರ ಕುಳೀರಕ್ಕೆ
ಸುಗಿದು ಸಾಂಯಾತ್ರಿಕನೇಂ
ತಾರನೆ ಕೃತಿವೇಟಲ್ಪನೆ ದಾರನೆ ಸತ್ಕವಿ
ನಿಸರ್ಗ ದುರ್ಜನ ಭಯದಿಂ

**ರಾಮಚಂದ್ರಚರಿತ ಪುರಾಣ(೧.೨೦)**

ಕ್ರೂರವಾದ ಏಡಿಗೆ ಹೆದರಿ, ಹಡಗಿನ ವ್ಯಾಪಾರಿ ಸಮುದ್ರದೊಳಗಿನ ಮುತ್ತು ಮಣಿಗಳನ್ನು ತಾರದಿರುವನೆ? ಹಾಗೆಯೇ ದುರ್ಜನರ ಭಯದಿಂದ, ಸತ್ಕಾವಿಯು ಕೃತಿಯನ್ನು ರಚಿಸದಿರುವನೆ? ದುರ್ಜನರಿಗೆ ಸತ್ಕವಿಗಳು ಹೆದರಲಾರರು ಎಂಬ ತಾತ್ಪರ್ಯ ಇಲ್ಲಿದೆ.

ವಿಕಸಿತ ಚಂಪಕಕ್ಕೆಱಗಿ ಬಂಡುಣಲೊಲ್ಲದ ಚಂಚರಿಕನಾ
ಸಿಕ ಮನಶಶೇಷಮಂ ಬೆಳಗೆ ತಿಗ್ಮಕರಂ ದೆಸೆಗಾಣದಿರ್ಪ
ಕೌಶಿಕ ನಯನಂಗಳಂ ಸುಕವಿ ಕಾವ್ಯಮನಾಲಿಸಿ ಕಾಯ್ವದುರ್ಜನ
ಪ್ರಕರದ ಕರ್ಣಕೋಟರಮನೇಕೆಯೊ ಮಾಡಿದನಬ್ಜ ನಿಶ್ಚರಂ

**ರಾಮಚಂದ್ರ ಪುರಾಣ(೧.೨೧)**

ಅರಳಿದ ಸಂಪಿಗೆಗೆ ಹಾರಿ ಪರಿಮಳವನ್ನು ಸವಿಯದ ದುಂಬಿಯ ಮೂಗನ್ನು, ಸೂರ್ಯನ ಪ್ರಕರವಾದ ಬೆಳಕಿನಲ್ಲಿಯೂ ದಿಕ್ಕುಗಾಣದಿಹ ಗೂಗೆಯ ಕಣ್ಣುಗಳನ್ನು, ಸುಕವಿಯ ಕಾವ್ಯವನ್ನು ಕೇಳಿ ಕೋಪಗೊಳ್ಳುವ ದುರ್ಜನರ ಕಿವಿಗಳನ್ನು ಏಕೆ ಕೊಟ್ಟನೋ ಬ್ರಹ್ಮದೇವನು ನಾ ಕಾಣೆ ಎನ್ನುವನು. ದುಂಬಿಗೂ, ಗೂಗೆಗೂ ದುರ್ಜನರಿಗೂ ವ್ಯತ್ಯಾಸವೇ ಇಲ್ಲ. ದುಂಬಿಗೆ ಹೂವಿನ ಮಕರಂದ ಇದ್ದೂ ಇಲ್ಲದ ಹಾಗೆ, ಗೂಗೆಗೆ ಹಗಲು ಕಣ್ಣಿದ್ದು, ಕಾಣದ ಹಾಗೆ ಕುರುಡು. ಆದರೆ ಕುಕವಿಗೆ ಎಲ್ಲ ಇಂದ್ರಿಯಗಳಿದ್ದೂ ಸುಕವಿಗಳನ್ನು ಹಾಗೂ ಅವರ ಕಾವ್ಯಗಳನ್ನು ಕಂಡರೆ ಆಗದು.

ಪಡೆದು ರಜೋದಿಕಂ ವಿಧಿ ಪಡೆವಣಿಯಂ ಪಣಿಯದ
ಮೃತರಸಮಂ ವಿಷಮಂ
ಕಡಲಂ ಸುಟಿಯಂ ಮಟೆಯಂ ಸಿಡಿಲಂ ಪಡೆವಂತೆ
ಸುಜನರಂ ದುರ್ಜನರಂ

**ರಾಮಚಂದ್ರಚರಿತ ಪುರಾಣ** (೧.೩೨)

ರಜೋದಿಕವಾದ ಕಮಲದಲ್ಲಿ ಹುಟ್ಟಿದ ಬ್ರಹ್ಮದೇವನು, ಹಾವಿನ ಹೆಡೆಯ ರತ್ನವನ್ನು, ಹಾವನ್ನು, ಅಮೃತವನ್ನು ವಿಷವನ್ನು, ಸಮುದ್ರವನ್ನು, ಸುಳಿಯನ್ನು, ಮಳೆಯನ್ನು ಸಿಡಿಲನ್ನು ಪಡೆದಂತೆ (ಸೃಷ್ಟಿಸಿದಂತೆ) ಸುಜನರನ್ನು ಕುಜನರನ್ನು ಸೃಷ್ಟಿಸಿದನು.

ಪೆಟಿವನ ಕಣ್ಗಳಂಧಕನ ಕಾಲ್ಗಳಿವಿಂತೊಡಗೂಡಿಗಾವುದಂ
ದಳದೊಡೆ ಬಲ್ಲದಂ ನಡೆದ ಮಾಟ್ಕೆಯನಿಪ್ಪುಡೆ ಬೇಡಮಾಣಿಲೊ
ಅಳಿಗವಿ ನಿನ್ನ ತನ್ನೆರವಿನೋದಿದ ಕಬ್ಬವನೋದಿದರ್ ಸುದಾ
ನಿಳಯದ ಮುಂದೆ ಸತ್ಕೃತಿಯ ಮುಂದೆ ಸುಖಾಬ್ಧಿಯ ಮಂದದೊರ್ಮೆಯುಂ

**ಗಿರಿಜಾಕಲ್ಯಾಣಂ(೧.೨೪)**

ಹೆಳವನಿಗೆ ಕಾಲಿಲ್ಲ ಕಣ್ಣಳಿವೆ, ಕುರುಡನಿಗೆ ಕಣ್ಣಿಲ್ಲ ಕಾಲ್ಗಳಿವೆ. ಇಬ್ಬರೂ ಪ್ರಯಾಣ ಹೊರಟಿದ್ದಾರೆ. ಕುರುಡನ ಹೆಗಲ ಮೇಲೆ ಹೆಳವ ಕುಳಿತು ಗಾವುದ ದೂರ ನಡೆದ ಮಾತ್ರಕ್ಕೆ, ಅದು ಒಬ್ಬ ಬಲಿಷ್ಠನಾದ ವ್ಯಕ್ತಿ ನಡೆದ ದಾರಿಯಾಗುವುದೇ? ಹಾಗೆಯೇ ಎಲ್ಲೊ ಅಳಿಗವಿಯಾದ ಮಾತ್ರಕೆ, ನಿನ್ನ ಕಲಾಕೃತಿ ಶ್ರೇಷ್ಠ ಕಾವ್ಯದಂತೆ ಒಮ್ಮೆಯಾದರೂ ಓದಲು ಸಾಧ್ಯವೇ? ಎನ್ನುವನು.

ಈ ಪದ್ಯದಲ್ಲಿ ಕವಿ ಹರಿಹರನು ಸಣ್ಣ(ಅಳಿಗವಿ) ಕವಿಗಳನ್ನು ಕುರಿತು ಹೇಳುವನು. ಅಳಿಗವಿಗಳ ಕಾವ್ಯ ಪಂಪಾದಿಗಳ ಕಾವ್ಯದಂತೆ ಒಮ್ಮೆಯಾದರೂ ಓದಲು ಸಾಧ್ಯವೇ ಎನ್ನುವನು.

ಅದು ಘೂಕಂ ದಿವದೊಳ್ ಕಾ
ಣದು ನಿಶ್ಚಯಮಂತೆ ದುರ್ಜನಂ ಕಾ।
ವ್ಯದೊಳತಿ ರಸಮನಸೂ
ಸದನಂ ಸುಖದೂರನವನ ಮಾತೇಕಿದರೊಳ್॥

**ಗಿರಿಜಾಕಲ್ಯಾಣ(೧.೨೫)**

ಅದು ಗೂಗೆ ಹಗಲಿನಲ್ಲಿ ಕಾಣಿಸಿಕೊಳ್ಳುವುದಿಲ್ಲ. ನಿಜ ಅದರಂತೆ ಅಸೂಯೆಗೆ ತವರ್ಮನೆಯಾದವನು, ಸುಖಕ್ಕೆ ದೂರನೂ, ಆದ ಅರಸಿಕನು ಕಾವ್ಯದಲ್ಲಿ ರಸೋತ್ಕರ್ಷ ಕಾಣಲಾರ ಎಂದ ಮೇಲೆ ಸಹೃದಯಿಗಳು ಕಾವ್ಯವನ್ನೋದಿ, ಮೆಚ್ಚಿ, ಆನಂದಿಸುವ, ಈ ಕಾವ್ಯದಲ್ಲಿ ರಸಹೀನನ ಮಾತೇಕೆ? ಎನ್ನುವನು. ಅಂದು ಕಾವ್ಯವನ್ನಾಲಿಸಿ, ಸಂಭ್ರಮಿಸುವ ರಸಿಕರಿರುವಂತೆ, ಕಾವ್ಯವನ್ನು ಇಷ್ಟಪಡದ ರಸಹೀನರೂ ಇದ್ದರೆಂದೂ ಕಾಣುತ್ತದೆ. ಅದಕ್ಕಾಗಿಯೇ ಈ ಮಾತುಗಳು.

ಕ್ಷುದ್ರಂಗ ಸಕಲ ಸುಜನೋ
ಪದ್ರವರೂಪಂಗೆ ಪರರ ಕಾವ್ಯರ್ಥಮಂ।
ಛಿದ್ರಿಸುವಂಗತಿ ಶಬ್ದದ
ರಿದ್ರಂಗಕ್ಕುಮೆ ನವೀನ ಕಾವ್ಯಾರಂಭ॥

ಗಿರಿಜಾ ಕಲ್ಯಾಣ(೧.೨೬)

ಒಳ್ಳೆಯ ಜನರಿಗೆ ತೊಂದರೆ ಕೊಡುವ ಅಲ್ಪನಿಗೆ, ಇತರರ ಕಾವ್ಯದ ಅರ್ಥವನ್ನು ಕದಿಯುವ ಶಬ್ದ ದರಿದ್ರನಿಗೆ ನವ್ಯಾರ್ಥ ಶೋಭಿತವಾದ ಈ ಕಾವ್ಯವು ರುಚಿಸುವುದೇ ಎನ್ನುವ ಮೂಲಕ ಹರಿಹರನು ತನ್ನ ಕಾವ್ಯ ನವೀನವಾದುದೆಂದು ಹೇಳಿಕೊಂಡಿರುವನು.

ಬರೆದಾಹ ಬರೆದೆ ಬಾಪುರೆ
ಬಾರದಕ್ಕಟ ಬರೆದೆ ಲೇಸು ಬರೆದೆಯೆನುತ್ತುಂ
ಬಱೆದೆ ತಲೆದೂಘುವದಱಿಂ
ಬಱೆದಮುದು ಕಾವ್ಯಮಱಿಯದರ ಚಾಣಿಂದಂ

ಗಿರಿಜಾಕಲ್ಯಾಣ(೧.೨೮)

ಪ್ರತಿಭೆಯಿಲ್ಲದೆ ತಾವೂ ಕವಿಯಾಗಬೇಕೆಂಬ ಆಸೆಯ ಅಳಿಗವಿಗಳು, ಓಹೋ ಬರೆದೆವು, ಬರೆದೆವು ಬೇಷ್ ಆಹಾ, ಬರೆದೆವು, ಬೇಷ್, ಬೇಷ್ ಬರೆದೆಬಿಟ್ಟೆ ಎಂಧು ಸುಮ್ಮನೆ ತಮಗೆ ತಾವೇ ತಲೆದೂಗುವುದರಿಂದ ಕಾವ್ಯ ಹೃದಯವನ್ನು ಅರಿತಂತಾಗುವುದಿಲ್ಲ. ಅಂಥವರ ಕಾವ್ಯವು ಅಳಿಕಬ್ಬವಾಗುತ್ತದೆ. ಕವಿಯಾಗಲು ನಿಜವಾದ ಪ್ರತಿಭೆಬೇಕು. ಅದಿಲ್ಲ ವಾದರೆ ಕಾವ್ಯಶಕ್ತಿ ಸಿದ್ದಿಸಲಾರದು. ತನಗೆ ಕವಿತ್ವವಿಲ್ಲದಿದ್ದರೂ, ಸುಮ್ಮನೆ ಕಾವ್ಯರಚನೆ ಮಾಡುವೆನೆಂದು ಕೊಚ್ಚಿಕೊಳ್ಳುವ ಅಕವಿಗಳನ್ನು ಕುರಿತು ಹೇಳುವನು.

ತನಗೆ ಕವಿತ್ವಮಿಲ್ಲ ಪೆಜಿರಪಟುದಲ್ಲದೆ ನಿಲ್ಲದಾತನೊಳ್
ಮುನಿವುದನೀತಿ ಪಂದಿಡುಜುಕೆಂದೊಡೆ ತಾಂಡುಜುಕೆಂಬುದೆ ಮಹಾ

ವನ ಕರಿಯಂ ವಿದಾರಿಸುವ ಸಿಂಹಮದಂತತಿದೋಷಿಯಪ್ಪ ದು
ರ್ಜನರ ಕಟೂಕ್ತಿಗಂಜದೆಲ ಸತ್ಕೃತಿಯಂ ಸಲೆಮಾಳ್ಕೆ ಸಜ್ಜನರ

**ಗಿರಿಜಾಕಲ್ಯಾಣ** (೧.೨೯)

ತನಗೆ ಕವಿತಾ ಶಕ್ತಿಯಿಲ್ಲ, ಪರರನ್ನು ನಿಂದಿಸಿದಲ್ಲದೆ ತನಗೆ ಉಳಿಗಾಲವಿಲ್ಲವೆಂದು, ಭಾವಿಸುವವನನ್ನು ನಾವೇಕೆ ನಿಂದಿಸಬೇಕು. ಹಂದಿಯು ಗುರು ಗುಟ್ಟಿದ ಮಾತ್ರಕ್ಕೆ ಮಹಾ ಗಜವನ್ನು ಸೀಳುವ ಬಲಿಷ್ಠವಾದ ಸಿಂಹವು ಪ್ರತಿಯಾಗಿ ಗುರುಗುಟ್ಟುವುದೇ? ಅದರಂತೆ ದುರ್ಜನರು ನಿಂದಿಸಿದ ಮಾತ್ರಕೆ, ಸಜ್ಜನರು ಹೆದರಿ ತಮ್ಮ ಕಾವ್ಯ ರಚನಾ ಕಾರ್ಯವನ್ನು ಕೈಬಿಡುವರೇ ಎಂದಿಗೂ ಇಲ್ಲವೆಂದಿರುವನು.

ಕಾವ್ಯಶಕ್ತಿ ಇಲ್ಲದವರು ವೃತಾ ಸುಕವಿಗಳನ್ನು ನಿಂದಿಸುತ್ತಲೇ ಇರುತ್ತಾರೆ. ಅದಕ್ಕಾಗಿ ಸಜ್ಜನ ಸತ್ಕವಿಯ ಕಾವ್ಯರಚನೆ ಯಾರು ನಿಂದಿಸಿದರೂ ನಿಲ್ಲಲಾರದು.

ಮುಂತೆ ಸರಿಯಿಲ್ಲೆಂದು ಪೊಗಳ್ದವರು ಪೊರಮಟ್ಟು
ಪಿಂತವನ ಕವಿತೆಯೇನೆಂದು ನಿಂದಿಸಿ ತಮ್ಮ
ತೊಂತಗವಿತೆಯ ತುಂಬನುರ್ಚಿನೆರೆದೂರುಗಳ ನಡುವೆ ನಿಜನಿಳಯದೊಳಗೆ
ಮಂತಣಗೊಂಡು ಕಾಳ್ಗೆಡದೂಳ್ವ ಕವಿಯೆದೆಯ
ಕೊಂತ ಮೂಗಿನ ಕತ್ತಿಯದಟ ಕವಿನಿಕರ ಚೌ
ದಂತ ಹಂಪೆಯ ರಾಘವಾಂಕ ಪಂಡಿತನುಭಯಕವಿ ಶರಭಬೇರುಂಡನು

**ಸೋಮನಾಥ ಚಾರಿತ್ರ್ಯ(ರಾಘವಾಂಕ)**(೧.೧೭)

ಕಾವ್ಯಗೋಷ್ಠಿಯಲ್ಲಿ ಕವಿಯ ಕಾವ್ಯವನ್ನು ಕೇಳಿ ಈ ಹಿಂದೆ ಇಂಥಹ ಕಾವ್ಯವನ್ನೇ ಕೇಳಿಲ್ಲವೆಂದು ಹೊಗಳಿದವರು, ಕವಿಯು ಹೋದ ಬಳಿಕ ಅವನ ಕವಿತೆ ಕವಿತೆಯೇ? ಎಂದು ನಿಂದಿಸಿ ತಮ್ಮ ಕೊಂತಗವಿತೆ(ಭರ್ಜಿಯಂತ ಕವಿತೆ)ಯನ್ನು ಜನರ ಮುಂದೆ ವಾಚಿಸುವವರು, ಕುಕವಿಗಳು ಎನ್ನುತ್ತಾನೆ. ಇಂಥವರು ಮುಂದೆ ಹೊಗಳುವ ಹಿಂದೆ ತೆಗಳುವ ಪಂಗಡಕ್ಕೆ ಸೇರಿದವರೆಂದು ಹೇಳುತ್ತಾನೆ.

ಚೋರ ನಿಂದಿಸಿ ಶಶಿಯ ಬೈದಡೆ
ಕ್ಷೀರವನು ಕ್ಷಯರೋಗಿ ಹಳಿದರೆ
ವಾರಣಾಸಿಯ ಹೆಳವ ನಿಂದಿಸಿ ನಕ್ಕರೇನಹುದು
ಭಾರತದ ಕಥನ ಪ್ರಸಂಗವ

ಕ್ರೂರ ಕರ್ಮಿಗಳೆತ್ತ ಬಲ್ಲರು
ಘೋರರೌರವವನು ಕೆಡಿಸುಗುಕೇಳ್ದ ಸಜ್ಜನರ

**ಕರ್ಣಾಟ ಭಾರತ ಕಥಾಮಂಜರಿ**(೧.೨೨)

ಕಳ್ಳನು ಚಂದಿರನನ್ನು ಬೈದಂತೆ, ಕ್ಷಯರೋಗಿಯು ಹಾಲನ್ನು ಹಳಿದಂತೆ, ಕುಂಟನು ನಡೆಯಲು ಆಗದೆ ವಾರಣಾಸಿಯನ್ನು ನಿಂದಿಸಿದಂತೆ, ಭಾರತದ ಕಥನ ಪ್ರಸಂಗವನ್ನು ಕೆಟ್ಟ ಕವಿಗಳೇನು ಬಲ್ಲರು ಭಾರತವನ್ನು ಕೇಳಿದ ಸಜ್ಜನರ ಘೋರ ಪಾಪವು ನಾಶವಾಗುವುದು ಎಂದಿರುವನು.

ಈ ಪದ್ಯವು ಕಾವ್ಯದ ಫಲಶೃತಿಯಂತೆ ಕಂಡುಬಂದರೂ ಕುಕವಿಗಳ ವಿಚಾರವೂ ಈ ಪದ್ಯದಲ್ಲಿದೆ. ಭಾರತ ಕಥೆಯನ್ನು ಕ್ರೂರ ಕರ್ಮಿಗಳು ಅರಿಯಲಾರದು. ಧರ್ಮವಂತನು ಮಾತ್ರ ಭಾರತದ ಪವಿತ್ರ ಕಥೆಯನ್ನು ಕೇಳುತ್ತಾನೆಂದು ಹೇಳಿರುವರು.

ಕನ್ನಡದ ಮಾರ್ಗಕಾವ್ಯ ದೇಸಿಕಾವ್ಯದತ್ತ ಹೊರಳಿದಾಗ ಇಡೀ ಕನ್ನಡ ಕಾವ್ಯ ಸಂಪ್ರದಾಯವೇ ಅಧೋಗತಿಗೆ ಬಿದ್ದು ಹೋಯಿತೆಂದು ಭಾವಿಸಿದ ಒಂದು ಮನಸ್ಥಿತಿಯು ಹಾಗೂ ಉತ್ಪ್ರೇಕ್ಷಿತ ಚಿತ್ರ ಇಲ್ಲಿದೆ. ಮಲ್ಲಿಕಾರ್ಜುನನ ಸೂಕ್ತಿ ಸುಧಾರ್ಣವದಲ್ಲಿ ದೊರೆಯುವ ಈ ಪದ್ಯ ಅಂದಿನ ಮಾರ್ಗ ಕವಿಗಳಿಗೂ ಹಾಗೂ ದೇಶಿಕವಿಗಳಿಗೂ ನಡೆದಿರಬಹುದಾದ ಸಂಘರ್ಷವನ್ನು ಮಾರ್ಗ ಕವಿಯೊಬ್ಬನ ಆಪಾದನೆಯ ಧ್ವನಿಯಲ್ಲಿ ಹೀಗೆ ಚಿತ್ರಿತವಾಗಿದೆ.

ಛಂದಮಿದಾವುವು ಎಂದೊಡೆ ಇರಿವರ್
ಪದಬಂಧದೊಳ್ ಈ ಪ್ರಯೋಗಂ ಎಂತು ಎಂದೊಡೆ ಬಯ್ವರ್
ಆವಕವಿಮಾರ್ಗವಿದು ಎಂದೊಡೆ ಪೊಯ್ವರ್
ಅರ್ಥಮೇನ್ ಎಂದೊಡೆ ಬಂಡುಗಡೆದು ಉಟ್ಟುದನ್ ಇಕ್ಕುವರ್
ಆವ ನೀತಿಪೇಳ್ ಎಂದೊಡ ಕೊಲ್ವರ್
ಈಗಡಿನ ದೇಸಿಗೆ ಬಿಳ್ದ ಮಹಾಕವೀಶ್ವರರ್

**ಸೂ.ಸು**(೧.೭೫)

ಈ ಕಾವ್ಯದ ಛಂದಸ್ಸು ಯಾವುದು, ಎಂದು ಕೇಳಿದರೆ ಕೊಂದುಬಿಡುತ್ತಾರೆ. ಈ ಪದಬಂಧದಲ್ಲಿ ಈ ಪ್ರಯೋಗ ಸರಿಯೇ ಎಂದು ಕೇಳಿದರೆ ಸಾಕು ನಮ್ಮನು ಬಯ್ಯುತ್ತಾರೆ. ಯಾವ ಕವಿ ಮಾರ್ಗಕ್ಕೆ ಸೇರಿದ್ದು ಎಂದರೆ ನಾವುಟ್ಟ ಬಟ್ಟೆಯನ್ನೆ ಕಸಿದುಕೊಳ್ಳುತ್ತಾರೆ.

ಇದು ಯಾವ ನೀತಿ ಎಂದರೆ ಕೊಂದು ಬಿಡುತ್ತಾರೆ. ಇವರು ಯಾರು ಗೊತ್ತೆ ಇಂದಿನ ದೇಸಿ ಸಾಹಿತ್ಯಕ್ಕೆ ಬಿದ್ದಿರುವ ಕವಿಗಳು ಎಂದಿರುವನು.

ಮೇಲಿನ ಪದ್ಯದಲ್ಲಿ ಕೊನೆಗೆ ಮಹಾಕವೀಶ್ವರರ್ ಎಂದು ಮಾರ್ಗ ಕವಿಯು ದೇಸಿ ಕವಿಯನ್ನು ವ್ಯಂಗ್ಯವಾಗಿ ಕರೆದಿರುವುದನ್ನು ಗಮನಿಸಬಹುದು. "ಈ ವ್ಯವಹಾರಕ್ಕೆ ಹೋಲಿಸಿದರೆ ನಮ್ಮ ಇಂದಿನ ಸಮಕಾಲೀನ ಸಾಹಿತ್ಯ ಈ ಮಟ್ಟಕ್ಕೆ ಇಳಿದಿಲ್ಲ ಎನ್ನುವುದು ಸಮಾಧಾನದ ಸಂಗತಿಯಾಗಿದೆ."[೬]

ಹೊಸ ಕಾವ್ಯವೊಂದು ಬಿಡುಗಡೆಯಾದ ಸಂದರ್ಭದಲ್ಲಿ ಹಲವಾರು ರೀತಿಯ ಸಂಘರ್ಷಗಳು ಇದ್ದೇ ಇರುತ್ತವೆ. ಹಿಂದಿನ ಕಾವ್ಯ ಅಥವಾ ಪ್ರಾಚೀನ ಕಾವ್ಯ ಸಂದರ್ಭದಲ್ಲಿ ಹೊಸಕಾವ್ಯ ಪದ್ಧತಿಯೊಂದನ್ನು ಅನಾದರದಿಂದ ಕಾಣುತ್ತಿದ್ದರೆಂದು ಕಂಡುಬರುತ್ತದೆ. ಬಹುಶಃ ಇಂಥವರನ್ನು ದುರ್ಜನರೆಂದು ಭಾವಿಸುವಲ್ಲಿ ಸಂದೇಹವಿಲ್ಲ. ಹೀಗೆ ಹೊಸಕಾವ್ಯವನ್ನು ರಚಿಸಿ ಅಸಡ್ಡೆಗೆ ಗುರಿಯಾದ ಕವಿಯೊಬ್ಬನನ್ನು ಕುರಿತು ಹಿರಿಯ ಕವಿಯು ಸಮಾಧಾನಪಡಿಸುವ ಪದ್ಯ ಸೂಕ್ತಿ ಸುಧಾರ್ಣವದಲ್ಲಿಯೇ ಕಂಡುಬರುತ್ತದೆ.

ಆದರಿಸರ್ ಖಳರ್ ಕೆಲಬರ್ ಈ ಪೊಸ
ಕಬ್ಬಮನ್ ಎಂದು ಮನಃಖೇದಮ
ನಾಳದಿರ್ ಜನರ ಕಣ್ಣಿಗೆ ವಿಲಾಸಮನೀವ ಸಾಂದರ್ಭಂ
ದ್ರೋದಯದೇಟ್ಗೆಯಂ ವಿರಹಿ ಸೈರಿಸದಿರ್ದೊಡದರ್ಕೆ ಬನ್ನಮೇ
ನಾದುದೊ ನೋಡೆ ಸಜ್ಜನರ್ಗೆ ಸೇವ್ಯಮದಾದೊಡೆ
ತಾನೆ ಸಾಲದೇ

**ಸೂ.ಸು.(೧.೬೨)**

ನಾಲ್ಕೈದು ಜನ ದುಷ್ಟರು, ನಿನ್ನ ಈ ಹೊಸ ಕಾವ್ಯವನ್ನು ಇಷ್ಟಪಡಲಿಲ್ಲವೆಂದು ಮನಸ್ಸಿಗೆ ಬೇಸರ ಮಾಡಿಕೊಳ್ಳದಿರು. ಏಕೆಂದರೆ ಜನರು ಮನಸ್ಸಿಗೆ ವಿಲಾಸವನ್ನು ತರುವ ಚಂದಿರ, ವಿರಹಿಗಳಿಗೆ ಶಾಪವಾಗುತ್ತಾನೆ. ಸಹನೀಯವಾಗುವುದಿಲ್ಲ. ಆದ್ದರಿಂದ ಸಜ್ಜನರಿಗೆ ನಿನ್ನ ಕಾವ್ಯ ಇಷ್ಟವಾದರೆ ಸಾಲದೆ? ಎನ್ನುತ್ತಾನೆ.

ಕೆಟ್ಟ ಕಾವ್ಯವನ್ನು ಹಾಗೂ ಕೆಟ್ಟ ಕವಿಗಳನ್ನು ಕುರಿತು ಪ್ರಾಚೀನ ಕನ್ನಡ ಕವಿಗಳು ತೋರುವ ಕೆಲವು ಪ್ರತಿಕ್ರಿಯೆಗಳು ಪರೋಕ್ಷವಾಗಿ ಒಳ್ಳೆಯ ಕಾವ್ಯ ಹೇಗಿರಬೇಕೆಂಬುದನ್ನು

ಸೂಚಿಸುತ್ತದೆ. ಇಂತಹ ಒಳ್ಳೆಯ ಕವಿಗಳಿಗೂ ನಿರೀಕ್ಷಕರಿಗೂ ನಿರಸೂಯಿಗಳಿಗೂ ಸಹೃದಯಗಳಿಗೂ ಮೆಚ್ಚುಗೆಯಾದರೆ ಸಾಕಲ್ಲವೇ ಕವಿಯ ಶ್ರಮ ಸಾರ್ಥಕವಾಗುವುದು. ಅಂದು ಕಾವ್ಯವು ರಾಜಾಸ್ಥಾನದಲ್ಲೊ ಅಥವಾ ಬಹುಜನ ಸಮುದಾಯದಲ್ಲೊ, ವಾಚನವಾಗುತ್ತಿದ್ದುದರಿಂದ ಬಹುದಿನಗಳ ಕಾಲ ನೆನಪಿನಲ್ಲಿ ಉಳಿಯುವಂತಹ ಕಥಾವಸ್ತುವನ್ನು ಎತ್ತಿಕೊಂಡು ಹಲವು ರೀತಿಯ ವರ್ಣನೆಗಳನ್ನು ಬಳಸಿ ಕಾವ್ಯ ರಚಿಸುತ್ತಿದ್ದರು.

ಲಲಿತಪದಂ ಪ್ರಸನ್ನ ಕವಿತಾಗುಣವಿಲ್ಲದವನ ಕಾವ್ಯ ಕಾವ್ಯವೇ ಅಲ್ಲವೆನ್ನುತ್ತಾನೆ ಪಂಪ, ಕಾವ್ಯವು ಲಲಿತವಾದ ಪದಗಳಿಂದ ಸುಂದರವಾಗಿ ಕಾಣಬೇಕು. ಓದಲು ಹಾಗೂ ಕೇಳಲು ಹಿತವಾಗಿರಬೇಕು. ಆದ್ದರಿಂದ ಕಾವ್ಯವೆನ್ನುವುದು ಸಮಸ್ತ ಇಂದ್ರಿಯಗಳ ಅನುಭವವನ್ನು ಶಬ್ಧಗಳ ಮೂಲಕವೇ ಉದ್ಬೋದಿಸುವ ಕಲೆಯಾಗಿರುವುದರಿಂದ, ಕವಿ ಬಳಸುವ ಶಬ್ದ ಸಮುದಾಯ ಕಾವ್ಯವನ್ನು ಕೇಳುವವರ ಮನದಲ್ಲಿ ಥಟ್ಟನೆ ಅರ್ಥವನ್ನು ತೆರೆದು ತೋರುವಂತಿರಬೇಕು. ಹಾಗಿಲ್ಲದ ಕಾವ್ಯ ಕುಕಾವ್ಯವೇ ಸರಿ. ಹಾಗೆ ಅರ್ಥವಿಲ್ಲದೆ ಬರೆದ ಕವಿ ಕುಕವಿಯೇ ಸರಿ.

"ನೋಡಲು ಹಸ್ತವಿಲ್ಲದ ಗೀಜಗ ಸಲೆ
ಗೂಡ ಕಟ್ಟಿದಡಚ್ಚಳಿಕೆಯ
ಕೋಡಗ ಕಂಡು ಸೈರಿಸದೆ ವಿನಾಶವ
ಮಾಡಲದೇನು ಕೇಡುಗರು

**ಮೋಹನ ತರಂಗಿಣಿ–ಕನಕದಾಸ(೧.೨೩)**

ಕೈಯಿಲ್ಲದ ಗೀಜಗನ ಹಕ್ಕಿಯು ಕಟ್ಟಿದ ಗೂಡನ್ನು ನೋಡಿ ಸಹಿಸದ ಕಿಡಗೇಡಿ ಕಪಿಯು, ಹಾಳು ಮಾಡಿದರೇನು ಬಂದಂತಾಯಿತು. ಕುಹಕಿಗಳಾದರೂ ಅಷ್ಟೇ ಎಂದು ಕಾವ್ಯ ನಿಂದಕರನ್ನು ಕುರಿತು ಹೇಳುತ್ತಾರೆ.

ಕವಿಯಾದವನು ಬಹಳ ಶ್ರಮಪಟ್ಟು ಕಾವ್ಯ ರಚನೆ ಮಾಡಿರುತ್ತಾನೆ. ಆದರೆ ಅದನ್ನು ಕಂಡು ಸೈರಿಸದ ಕುಕವಿಗಳು ತೆಗಳುವುದು, ಕಾವ್ಯಕ್ಕೆ ಕುಂದುಂಟಾದಂತೆ ಹಾಗೂ ಸತ್ಕವಿಯ ಶ್ರಮ ವ್ಯರ್ಥವಾದಂತೆ.

ಕಳ್ಳ(ಸರಾಯಿ) ಮಡಿಕೆಯ ಪೂಜಿಸುವಂತೆ ಚಿಲುಪಾ
ಲುಳ್ಳ ಮಡಕೆಗೆ ಪೂಜಿಪರೆ

ಒಳ್ಳಿ ದರವರಂತಿರಲಿ ನುಣ್ನುಡಿಗಳ
ಕಳ್ಳರಿಗಾನೆಱಗುವೆನು

ರಾಮನಾಥಚರಿತಂ(೧–೫೨)

ಸರಾಯಿಯ ಗಡಿಗೆಯನ್ನು ಪೂಜಿಸುವರೇ ವಿನಃ ಹಾಲಿನ ಗಡಿಗೆಯನ್ನು ಯಾರಾದರೂ ಪೂಜಿಸುವರೆ? ಒಳ್ಳೆಯವರಂತಿರಲಿ ಮೃದುನುಡಿಯನು ಆಡುವ ಕಳ್ಳರಿಗೆ ನಾನು ನಮಸ್ಕರಿಸುವೆನೆಂದು ಕವಿ ನಂಜುಂಡನು ಹೇಳಿರುವುದನ್ನು ಗಮನಿಸಿದರೆ, ಅಂದು, ಬಿರುನುಡಿಗಳನ್ನಾಡುವ ಕುಕವಿಗಳ ಜೊತೆಗೆ, ಮೃದು ನುಡಿಗಳನ್ನಾಡಿ ವಂಚಿಸುವ ಕಳ್ಳ ಕುಹಕಿಗಳು ಇರಬಹುದು. ಅದಕ್ಕಾಗಿಯೇ ಕವಿಯು ಕುಕವಿಗಳಂತಿರಲಿ, ಮೃದುನುಡಿಗಳ್ಳರಿಗೆ ನನ್ನ ನಮಸ್ಕಾರ ಎಂದಿರುವನು.

ಕಡಿವ ಕೊಡಲಿಯ ವದನಕಾಮೋದವ
ಕೊಡುವ ಚಂದನ ವೃಕ್ಷದಂತೆ
ಬಿಡದೆ ನೋಯಿಪ ಖಲಜನಕುಪಕಾರವ
ನೊಡನೆ ಮಾಡುವರು ಸಜ್ಜನರು

ರಾಮನಾಥಚರಿತಂ(೧–೪೯)

ಕಡಿವ ಕೊಡಲಿಯ ಮುಖಕ್ಕೆ ಸುವಾಸನೆಯನ್ನು ಸವರುವ, ಶ್ರೀಗಂಧದ ಮರದಂತೆ, ಬಿಡಲಾರದ ನೋಯಿಸುವ ಕುಕವಿಗಳಿಗೆ ಸಜ್ಜನ–ಸತ್ಕವಿಗಳು ತಕ್ಷಣವೇ ಉಪಕಾರವನ್ನು ಮಾಡುವರು.

ಕವಿ ನಂಜುಂಡನ ಪ್ರಕಾರ ಸತ್ಕವಿಗಳು ಚಂದನದ ಮರವಾದರೆ ಆ ಚಂದನದ ಮರವನ್ನು ಕಡಿಯುವವರು ಕುಕವಿಗಳು. ಆ ಚಂದನದ ಮರ ಕಡಿದರು ಕಡಿದವರ ಮುಖಕ್ಕೆ ಸುವಾಸನೆಯನ್ನು ಕೊಡುವಂತೆ, ಸತ್ಕವಿಗಳನ್ನು ತೆಗಳಿದರೂ ಅವರು ಕುಕವಿಗಳಿಗೆ ಒಳ್ಳೆಯದನ್ನೆ ಮಾಡುತ್ತಾರೆ.

ಒಳಗಂಪನೊಲ್ಲದೆ ತಳುವುದೆ ದುರ್ಗಂಧ
ಕೆಳಸುವ ನೊಣದಂತೆ ಗುಣವ
ಇಳಿಕೆಯ್ದು ದೋಷಕೆರಗುವ ದುರ್ಜನರಡಿ
ದಳಿರ್ಗಳಿಗಾನೆಱಗುವೆನು

ರಾಮನಾಥಚರಿತಂ(೧.೫೩)

ಸುವಾಸನೆಯನ್ನು ಒಲ್ಲದೆ ದುರ್ಗಂಧಕ್ಕೆ ಇಷ್ಟಪಡುವ ನೊಣದಂತೆ, ಕಾವ್ಯಗುಣವನ್ನು ಮರೆತು ದೋಷವನ್ನು ಬಯಸಿ ಹೊಲಸಿನ ಮೇಲೆ ಕುಳಿತ ನೊಣದಂತಿರುವ ದುರ್ಜನರ ಪಾದಗಳಿಗೆ ನಮಸ್ಕರಿಸುವೆ ಎಂದಿರುವನು.

ನೊಣವು ಸುವಾಸನೆಯನ್ನೊಲ್ಲದೆ ದುರ್ಗಂಧವನ್ನೆ ಇಷ್ಟಪಡುವುದು. ಹಾಗೆಯೇ ಕುಕವಿಗಳು ಕಾವ್ಯದಲ್ಲಿ ಬರುವ ಒಳ್ಳೆಯ ಅಂಶಗಳನ್ನು ಒಲ್ಲದೆ(ಮರೆತು) ಅಲ್ಲೊಂದು-ಇಲ್ಲೊಂದು ಇರುವ ದೋಷಗಳನ್ನೆ ಎತ್ತಿ ಆಡುವರು. ಇವರಿಗೆ ಕಾವ್ಯಗುಣ ಗೋಚರವಾಗುವುದೇ ಇಲ್ಲ. ಇಂಥ ಕುಕವಿಗಳಿಗೆ ದೊಡ್ಡ ನಮಸ್ಕಾರವನ್ನು ಮಾಡಿರುವನು. ಸುಕವಿಗಳು ಕಾವ್ಯಗುಣಗಳನ್ನು ಮಾಡಿರುವನು. ಸುಕವಿಗಳು ಕಾವ್ಯಗುಣಗಳನ್ನು ಹೇಳಿದರೆ ಕುಕವಿಗಳು ಕಾವ್ಯದಲ್ಲಿರುವ ದೋಷಗಳನ್ನು ಹುಡುಕುತ್ತಿರುತ್ತಾರೆ.

'ನಿಂದಕರಿರಬೇಕು ಹಂದಿಯ ಹಾಗೆ' ಎಂದು ಬಸವಣ್ಣನವರು ಹೇಳುವಂತೆ ಹಂದಿ ಹೊಲಸನ್ನು ತಿಂದು ಊರನ್ನು ಸ್ವಚ್ಛ ಮಾಡಿದಂತೆ ಕಾವ್ಯ ದೋಷವನ್ನು ಕಾವ್ಯದ ಅವಗುಣವನ್ನು ತೋರಿಸಿ, ದೋಷಮುಕ್ತವನ್ನಾಗಿ ಮಾಡುವವರೇ ಕುಕವಿಗಳು ಅಥವಾ ಕಾವ್ಯ ಕಾವ್ಯ ನಿಂದಕರು. ಅಂಥವರಿಗೆ ಮೊದಲು ನಮಸ್ಕರಿಸಬೇಕೆಂದು ಹೇಳಿರುವನು.

ಸಾಮಾನ್ಯವಾಗಿ ಕವಿಗಳು ಕಾವ್ಯನಿಂದಕರು ಇರುತ್ತಾರೆಂದು ಶಪಿಸುತ್ತಾರೆ. ಆದರೆ ನಂಜುಂಡ ಕವಿಯು ವಿಶಿಷ್ಟ ರೀತಿಯಿಂದ 'ಕಾವ್ಯ ನಿಂದಕರಿಗೆ ಎರಗುವೆ' ಎಂದು ಹೇಳುವುದರ ಮೂಲಕ ದುರ್ಜನ ಸಮೂಹಕ್ಕೆ ನಾನು ಒಲಿದು ಬಲಕೊಡುವೆನು ಎಂದಿರುವನು.

ನಿಂದಿಸುವರ್ ದುರ್ಜನರೆಂ
ಬೊಂದು ಭಯಂಬೆತ್ತು ಸುಕವಿ ರಚಿಸನೆ ಕೃತಿಯಂ
ಮಂದೇಹರ ಭಯದಿಂದರ
ವಿಂದಸಖಂ ನಿಜಮಯೂಖಮಂ ಪಸರಿಸನೇ

**ರಾಜಶೇಖರ ವಿಳಾಸ(೧.೧೫)**

ಕತ್ತಲೆಯ ಭಯದಿಂದ ಸೂರ್ಯ ಮೂಡದೇ ಇರುವನೇ? ಹಾಗೆಯೇ ದುರ್ಜನರು ನಿಂದಿಸುವರೆಂಬ ಭಯದಿಂದ ಸುಕವಿಯು ಕಾವ್ಯವನ್ನು ರಚಿಸದೇ ಇರುವನೇ? ಎಂಬುದು ಈ ಪದ್ಯದ ತಾತ್ಪರ್ಯವಾಗಿದ್ದರೂ ಇಲ್ಲಿ ವಿಶೇಷವಾಗಿ ಕವಿ ಕುಕವಿಯನ್ನು ಕತ್ತಲೆಗೂ,

ಸುಕವಿಯನ್ನು ಅರವಿಂದ ಸಖನಾದ ಸೂರ್ಯನಿಗೂ ದೃಷ್ಟಾಂತ ರೂಪದಿಂದ ಹೋಲಿಸಲಾಗಿದೆ. ಬೆಳಕಿನ ಕಿರಣಗಳಲ್ಲಿ ಕತ್ತಲೆ ನಾಶವಾದಂತೆ, ಸುಖವಿಗಳು ಒಳ್ಳೆಯ ಕಾವ್ಯರಚನೆ ಮಾಡಿದಾಗ ಕುಕವಿಗಳ ನಿಂದನೆ ಬಹಳ ಕಾಲ ನಿಲ್ಲುವುದಿಲ್ಲ ಎನ್ನುವುದು ಕವಿಯ ಭಾವನೆ.

ಹಾಲೊಳಪ್ಪಿನ ವಿವರವಜಿವ ಮ
ರಾಳವಂ ಕಡುಬ್ಬಿಲೋಕಂ
ಲಾಲಿಸುವಲೊಲು ಶುನಕ ಮೊಗೆವಾಲಂ ಕುಡಿದುಪೋಗೆ
ಆಳಿಗೊಳುತ ಬಡಿವರಲ್ಲದೆ
ಲಾಲಿಸುವರೇ ಸುಕವಿಯೆಂದಡೆ
ಮೇಲಹುದು ಕೃತಿ ಕುಕವಿಯಿಂದಡದೇನಹುದು ಕಡೆಗೆ

**ಬಸವಪುರಾಣ(ಭೀಮಕವಿ)(೧.೨೦)**

ಹಂಸವು ಹಾಲನ್ನು ಕುಡಿದ ಹಾಗೆ ನಾಯಿ ಕುಡಿಯಬಲ್ಲುದೆ(ಹಂಸಕ್ಷೀರ ನ್ಯಾಯ, ಹಂಸ ನೀರು ಮತ್ತು ಹಾಲನ್ನು ಸೇರಿಸಿದರೆ ಹಾಲನ್ನು ಮಾತ್ರ ಸ್ವೀಕರಿಸುತ್ತದೆ.) ಆದರೆ ನಾಯಿಗೆ ಆ ರೀತಿ ಕುಡಿಯಲು ಆಗುವುದಿಲ್ಲ. ಸುಕವಿಗಳಿಗೆ ಕುಕವಿಗಳು ಬಯ್ಯುತ್ತಾರೆ. ವಿನಃ ಕುಕವಿಗೆ ಸುಕವಿ ಬಯ್ಯುತ್ತಾನೆಯೆ? ಹಾಗೆಯೇ ಹಂಸವು ಹಾಲು ಕುಡಿದಾಗ ಲಾಲಿಸುವ ಜನರು ನಾಯಿ ಒಂದು ಮಡಕೆ ಹಾಲು ಕುಡಿದು ಹೋದರೆ ಆಳಿಗೊಂದು ಕಲ್ಲು ತೆಗೆದುಕೊಂಡು ಹೊಡೆಯುತ್ತಾರೆ. ಸುಕವಿಯ ಕಾವ್ಯವನ್ನು ಎಲ್ಲರೂ ಲಾಲಿಸುವರೆ ವಿನಃ ಕುಕವಿ ರಚಿಸಿದರೇ ಯಾರಾದರೂ ಲಾಲಿಸುವರೇ?

ರೋಗಿ ಹಳಿದೊಡೆ ಹಾಲು ಹುಳಿಯಪ್ಪುದೇ ಹಗಲ
ಗೂಗೆ ಕಾಣದೊಡೆ ರವಿ ಕಂದುವನೆ ಕಂ ಗರುಡ
ನೇಗೈದುವುಂ ಕಾಣದೊಡೆ ಮಕುರ ಕೆಡುವುದೆ ದುರ್ಜನರು ಮೆಚ್ಚದಿರಲು
ನಾಗಭೂಷಣನ ಕಾವ್ಯ ಕೆಡುವುದೆ ಮರುಳೆ
ಹೋಗಲಾ ಮಾತದೇಕಂತಿರಲಿ ಕಡೆತನಕ
ಮೇಗುತ್ತರೋತ್ತರನೀವ ಭಾಷೆಗಳನವಧರಿಸುವುದು ಸಾಹಿತ್ಯರು

**ಹರಿಶ್ಚಂದ್ರ ಕಾವ್ಯ(೧-೨೬)**

ರೋಗಿ ಹಳಿದರೇನು ಹಾಲು ಕಹಿಯಾಗುವುದೇ? ಹಗಲನ್ನು ಗೂಗೆ ಕಾಣದಿದ್ದರೇನು? ಸೂರ್ಯನು ಕುಂದುವನೇ? ಕುರುಡ ಕನ್ನಡಿ ನೋಡದಿದ್ದರೇನು? ಕನ್ನಡಿ ಕೆಟ್ಟೀತೆ?

ದುರ್ಜನರು ಮೆಚ್ಚುವುದಿಲ್ಲವೆಂದ ಮಾತ್ರಕ್ಕೆ ಈ ಶಿವನ ಕಾವ್ಯ ಕೆಡುವುದೇ? ಎಲೆ, ಮರುಳೆ ಹೋಗುವಾದವೇಕೆ? ಸಾಹಿತ್ಯಾಸಕ್ತರು ನನ್ನ ಮಾತನ್ನು ಕೇಳಬೇಕು ಎನ್ನುವನು.

ಕುಕವಿಗಳು ತಮ್ಮ ಕೈಯಿಂದ ಶ್ರೇಷ್ಠ ಕಾವ್ಯರಚನೆ ಸಾಧ್ಯವಿಲ್ಲವೆಂದೇ ಸುಕವಿಗಳನ್ನು ತೆಗಳುತ್ತಾರೆ. ಅದನ್ನು ಸುಕವಿಗಳು ಗಣನೆಗೆ ತೆಗೆದುಕೊಳ್ಳಬಾರದು. ಕುಕವಿಗಳು ಮೇಲಿನ ಪದ್ಯದಲ್ಲಿ ಬರುವ ರೋಗಿ, ಗೂಗೆ ಹಾಗೂ ಕುರುಡರ ಸಾಲಿಗೆ ಸೇರುತ್ತಾರೆ. ಸುಕವಿಗಳು ಹಾಲು, ಸೂರ್ಯ ಹಾಗೂ ಕನ್ನಡಿಯಿದ್ದಂತೆ ಎಂದಿರುವನು.

ಇಳೆಯೊಳೊಂದೊರೊಳೆಂತಕ್ಕೆ ಪುಣ್ಯಾದೀನ
ದೊಳು ಸಮಂತೊಬ್ಬಿಬ್ಬರಂ ಮೆಚ್ಚಿಸುವವನಲ್ಲ
ತಿಳಿದು ಕೇಳದೊಡಜಿಯೆ ಕೇಳ್ದೆನ್ನ ಕಾವ್ಯಾರ್ಥಮಂ ಕಿವಿಯ ಸೆಜಗುಗಳಂ
ತಳೆದ ಕವಿಗಳ ಗಮಕಿಗಳ ವಾದಿಗಳ ವಾಗ್ಮಿ
ಗಳ ರಸಾವೇಶಿಗಳ ತಲೆದೂಗಿಸುವೆನೆಂದ
ಡುಳಿಯ ದುರ್ಜನರು ಮೆಚ್ಚದೊಡೆಂತೆನಲ್ಕದಕೆ ಕೇಳು ಮೇಲುತ್ತರವನು

**ಹ.ಚ.ಕಾವ್ಯ(೧.೨೬)**

ನನ್ನ ಕಾವ್ಯವನ್ನು ರಚಿಸಿ ಇದೊಂದೆ ಊರಲ್ಲಿ ಒಬ್ಬಿಬ್ಬರನ್ನು ಮೆಚ್ಚಿಸುವವನಲ್ಲ ನಾನು ನನ್ನ ಕಾವ್ಯರ್ಥವನ್ನು ಕೇಳಿ, ನೋಡಿ, ತಮ್ಮ ಕಿವಿಯ ಸರಗನ್ನು ಒಡ್ಡಿ ಕವಿಗಳು ಗಮಕಿಗಳು, ವಾದಿಗಳು, ವಾಗ್ಮಿಗಳು, ರಸಾವೇಶಿಗಳು ಅದೆಷ್ಟೋ ಜನರನ್ನು ಮೆಚ್ಚಿಸಿರುವೆ ಅಂದ ಮೇಲೆ ಇನ್ನುಳಿದ ಕುಕವಿಗಳು ಮೆಚ್ಚದಿದ್ದರೇನು?

ಈ ಪದ್ಯದಲ್ಲಿ ರಾಘವಾಂಕ ಕವಿಯು ತನ್ನ ಕಾವ್ಯಪ್ರಶಂಸೆಯ ಜೊತೆಗೆ ಕುಕವಿಗಳನ್ನು ನಿಂದಿಸಿರುವನು. ಕುಕವಿಗಳು ನನ್ನ ಕಾವ್ಯವನ್ನು ಮೆಚ್ಚಿದರೆಷ್ಟು? ಬಿಟ್ಟರೆಷ್ಟು? ಉಳಿದವರು ಮೆಚ್ಚಿದರೆ ಸಾಕು ಎಂದು ಕುಕವಿ ತಾತ್ಸಾರವನ್ನು ಮಾಡಿರುವನು.

ದುಷ್ಟಾಹಿ ಘೋರತರ ವಿಷವದನದಿಂದೆಸಂ
ದಷ್ಟಮಾಗಿರುತಿರ್ದೊಡಂ ದೋಷಮಿರ್ದೊಡಂ
ನಷ್ಟ ಕಲೆಯಾದೊಡಂ ಚಂದ್ರನಂತೆನ್ನ ಕಾವ್ಯದ ರಸಂಸುಮನಸರ್ಗೆ
ಇಷ್ಟಮಾಗದೆ ಮಾಣದಿನ್ನಾವನಾದೊಡಂ
ಕಷ್ಟಮಂ ಬಗೆವವಂ ಚೋರಂಗೆ ವಿರಹಿಗಂ
ದೃಷ್ಟಾಂತಮಾಗಿ ಸಲ್ವಂ ಧರಾವಲಯದೊಳ್ ಸಂದೇಹ ಮೇನಿದರೊಳ್

**ಜೈಮಿನಿಭಾರತ(೧.೯)**

ಚಂದ್ರನಲ್ಲು ಕಲೆ(ಕಪ್ಪುಚುಕ್ಕೆ) ಇದೆ ಎಂದು ತಿಳಿದಿರುವ ಸಹೃದಯರಿಗೆ ಕಾವ್ಯದಲ್ಲಿ ದೋಷವಿರುವುದು ಕಂಡುಬಂದರೂ, ಗುಣಗಳನ್ನು ಬಿಟ್ಟು ಬರಿ ದೋಷಗಳನ್ನು ಮಾತ್ರ ಗಣಿಸುವುದಿಲ್ಲ. ಕಾವ್ಯದಲ್ಲಿರುವ ಬರಿ ದೋಷಗಳನ್ನೆ ಎಣಿಸುವ ಕುಕವಿಗಳು, ಕಳ್ಳನಂತೆ, ಕಳ್ಳನು ಚಂದ್ರನ ಬೆಳದಿಂಗಳನ್ನು ಹಾಗೂ ವಿರಹಿಯು ತಂಪಾದ ಚಂದ್ರನನ್ನು ತೆಗಳುವುದರಲ್ಲಿ ಸಂದೇಹವಿಲ್ಲ.

ಕಾವ್ಯದಲ್ಲಿ ಕವಿಯ ಆಲಸ್ಯದಿಂದಲೋ ಅಚಾತುರ್ಯದಿಂದಲೋ ಅಲ್ಲೊಂದು, ಇಲ್ಲೊಂದು ಕಾವ್ಯ ದೋಷಗಳು ಗೋಚರವಾಗುತ್ತಿದ್ದವು. ಅವುಗಳನ್ನೆ ಎಣಿಸಿ ಕಾವ್ಯದ ಗುಣಗಳನ್ನು ಮರೆಯುವ ಕುಕವಿಯು ಕಳ್ಳನ ಹಾಗೆ ಎಂದಿರುವನು.

ಬಂದುವರ್ಮನು ತನ್ನ ಹರಿವಂಶಾಭ್ಯುದಯದಲ್ಲಿ "ಕಾವ್ಯ ಲಕ್ಷಣದೊಳೊಳ್ಪಳವಟ್ಟರೆ ಪೇಟ್ವಿದಲ್ಲದೇ ಕಾರಣವಯ್ಯ ಕಬ್ಬುವ ಬಿಟ್ಟುವೇಟ್ವಿದೇ ವಿರಸಮಪ್ಪ ಕಬ್ಬಂ ಬೇಮ್ದಿಲೋಲತೆಯಿಂದಂ ಬರೆಬರೆದೋಲೆಗಳಂ ಕಿಡಿಸುವಂತು ತಾನೊಳುಪಗೆಯೆ ಸೊಪ್ಪವಟ್ಟ ಬಗೆಯಿಂದಟುಗಳನ್ನಡ ದೊಳ್ ತಗಳ್ಪುವ ಬೆಸನೇಕೆ ಮಟ್ಟಮೀರಲಾಗಿದೆ.

ಈ ಮೊದಲಾದ ಮಾತುಗಳಿಂದ ಕುಕವಿಗಳನ್ನು ತೆಗಳುತ್ತಾನೆ. ಬರೆದ ಓಲೆಗಳನ್ನು ಕೆಡಿಸಿ ಹಾಳುಮಾಡುವ ಕುಕವಿಯು ಕವಿಯ ಹಗೆಯಾಗಿರುವನೇ ಎಂದು ಟೀಕಿಸುತ್ತಾನೆ.

ಮಂಗರಸನು ತನ್ನ 'ನೇಮಿಜಿನೇಶ ಸಂಗತಿ'ಯಲ್ಲಿ ಬರುವ ಹಲವು ಪದ್ಯಗಳಲ್ಲಿ ಕುಕವಿಗಳನ್ನು ನಿಂದಿಸುತ್ತಾನೆ.

ಕೋಡಗಗುತ್ತಮ ಮಾಣಿಕವನು ಕೂಡಲೀಡಾಡುವೊಲು ದುರ್ಜನರು
ರೂಢಿವಡೆದ ಪುಣ್ಯಕಥೆಯನ ಕೇಳುವರೋಡಾಡದೆ ಸುಮ್ಮನಿಹರೆ

**ನೇಮಿ ಜಿನೇಶ ಸಂಗತಿ**(೧.೩೨)

'ಮಂಗನಿಗೇನು ಗೊತ್ತು ಮಾಣಿಕ್ಯದ ಬೆಲೆ' ಮಂಗನ ಕೈಗೆ ಮಾಣಿಕ್ಯ ಕೊಟ್ಟಾಗ ಬೀಸಿ ಒಗೆದ ರೀತಿಯಲ್ಲಿ ದುರ್ಜನರ ಕೈಗೆ ಒಳ್ಳೆಯ ಕಾವ್ಯಕೊಟ್ಟರೆ ಓದಿ ಸುಮ್ಮನಿರದೆ ಕಾವ್ಯ ನಿಂದನೆ ಮಾಡುವರು.

ಹಾವಿಗೆ ಹಾಲನೆರೆಯಲೊಳಗಾವಿಷ ಪೂರಿಸುವಂತೆ
ಲಾವಕರಿಗೆ ಲೇಸಮಾಡಲು ಕಷ್ಟವನೇವೈಸಿಕೊಂಡು ಕೊನೆವರು

**ನೇಮಿಜಿನೇಶ ಸಂಗತಿ**(೧.೩೩)

ಹಾವಿಗೆ ಹಾಲೆರೆದರೆ, ಹಾವಿನ ವಿಷ ಹೋಗಲಾರದು. ದುರ್ಜನರಿಗೆ ಲೇಸನ್ನು ಮಾಡಲು ಅವರು ತಮ್ಮ ಕಷ್ಟಗಳನ್ನು, ನಿವಾರಿಸಿಕೊಂಡು ಮೆರೆಯುವರು.

ತಾನಳಿದುಂಡವರಿಗೆ ಓಕರ ಮಾಳ್ಪನೊಣದಂತೆ ದುರ್ಜನರು
ಹಾನಿ ತಮಗೆಯಾದೊಡಾಗಲಿ ಮಾನ್ಯರ ಮಾನಾಪಹಾರ ಮಾಡುವರು

**ನೇಮಿಜಿನೇಶ ಸಂಗತಿ(೧.೩೪)**

ನೊಣವು ತಾನು ತಟ್ಟೆಯಲ್ಲಿ ಬಿದ್ದು ಸಾಯುವುದಿರಲಿ, ಉಂಡವರಿಗೆ ಓಕರ ಬರುವಂತೆ ಮಾಡುವುದು. ಹಾಗೆಯೇ ದುರ್ಜನರು ತಮ್ಮನ್ನು ನಾಶಮಾಡಿಕೊಳ್ಳುವುದರ ಜೊತೆಗೆ ಒಳ್ಳೆಯವರ ಮಾನವನ್ನೂ ಕಳೆಯುವರು.

ಕಾಸಲು ಕಾಂಚನ ಕಡುರಂಗುವಡೆದಂತೆ ಮಾಸಕರು ಸಜ್ಜನರಿಗೆ
ಏನೇನು ಪರಿಯೊಳು ಕಪಟವನೆಸಗಲು ಲೇಸನವರಿಗೆಸಗುವರು

**ನೇಮಿಜಿನೇಶ ಸಂಗತಿ(೧.೩೫)**

ಕಾಸಿದಂತೆ ಚಿನ್ನವು ಹೊಳಪೇರುತ್ತದೆ. ದ್ವೇಷಿಗಳಾದ ಕುಜನರು ಸುಜನರಿಗೆ ಎಷ್ಟು ಪರಿಪರಿಯಾಗಿ ಕಷ್ಟಗಳನ್ನು ಕೊಟ್ಟರೂ ಅವರಿಗೆ ಒಳ್ಳೆಯದೇ ಆಗುತ್ತದೆ.

ಪಿಸುಣರ ಸಂಸರ್ಗವನುರೆ ಮಾಡಿದ ರಸಿಕರ್ಗೆ ಕೇಡಾಗದಿಹುದೆ
ಮಿಸುಗುವ ಪೊಸಪೊನ್ನ ಗಟ್ಟಿಯಾಳವಲೋಹ ಮುಸುಕಲಂತದು ಕೆಡುವಂತೆ

**ನೇಮಿಜಿನೇಶ ಸಂಗತಿ(೧–೩೬)**

ಸುಳ್ಳಗಾರರ ಸಹವಾಸವನ್ನು ಮಾಡಿದ ರಸಿಕರಿಗೆ ಕೇಡಾಗದಿರುವುದೇ? ಚೊಕ್ಕ ಚಿನ್ನದ ಮುಂದೆ ಅವಲೋಹವಾದ ಕೃತಕ ಬಂಗಾರ ಅಥವಾ ಕಾಗೆ ಬಂಗಾರ ಕುಂದುವ ಹಾಗೆ ಸಜ್ಜನರ ಮುಂದೆ ದುರ್ಜನರು.

ಇಂತು ದುರ್ಜನರದು ದೂಷಿಸಿ ಸಜ್ಜನ ಸಂತಾನವ ತುತಿಗೆಯ್ದು
ಕಂತುಮರ್ಧನ ನೇಮಿನಾಥನ ಚರಿತೆಯ ಸಂತಸ ಎಂದುಸುರುವೆನು

**ನೇಮಿಜಿನೇಶ(೧.೩೭)**

ಹೀಗೆ ದುರ್ಜನರನ್ನು ನಿಂದಿಸಿ ಸಜ್ಜನರನ್ನು ಸ್ಮರಿಸಿದ ಕಂತುಮರ್ಧನ ನೇಮಿನಾಥನ ಚರಿತೆಯನ್ನು ಸಂತಸದಿಂದುಸುರುವೆನು ಎಂದಿರುವನು.

ನೋಡಿ ಲಕ್ಷಣಾರ್ಥ ರಸಬಾವಜ್ಞರೆನಿಸುವು
ಗ್ಗಡದ ಕವಿಗಳ ಕಾವ್ಯದಿದಿರಲೇಕೋ ತನ್ನ

ಜಡಮತಿಯೊಳೀಶನಂ ಬಣ್ಣಿಸುವೆನೆಂದೆನ್ನನಗಲಾಗದೇಕೆಂದೊಡೆ
ಬಡವರ ಮನೆಯ ಸೊಡರಂ ಕಂದುವುದೆ ಗುಡ್ಡಿಹಸು
ಬಿಡೆಕಜೆದ ಹಾಲು ಕಹಿಯಪ್ಪುದೆ ಎನ್ನ ಕೃತಿ
ಪೊಡವಿಯೊಳು ಸಲುವುದಿದಕೇಕೆ ಸಂಶಯವೆಲವೊ ನಂಬು ನೀಡಿದೆ ಕೈಯನು

**ಹ.ಚ.ಕಾವ್ಯ ಪದ್ಯ(೧.೨೧)**

ನುಡಿ, ಲಕ್ಷಣ, ಅರ್ಥ, ರಸ, ಭಾವಗಳ ಪಂಡಿತರೆನಿಸುವ ಶ್ರೇಷ್ಠ ಕವಿಗಳ ಕಾವ್ಯಗಳ ಎದುರು ಬೇಡ ತೆಗೆ. ಇವನು ಜಡವಾದ ಬುದ್ಧಿಯಿಂದ ಶಿವನನ್ನು ಸ್ತುತಿಸುವವನು ಎಂದು ಜರೆಯದಿರಿ. ಏಕೆಂದರೆ ಬಡವರ ಮನೆಯ ದೀಪ ಬೆಳಕನ್ನು ನೀಡದೇ? ಕುಳ್ಳಾದ, ಕಪ್ಪಾದ ಹಾಗೂ ಕುರುಡಾದ ಆಕಳು ನೀಡಿದ ಹಾಲು ಕಹಿಯಾಗಿರುವುದೇ? ನನ್ನ ಕೃತಿ ಭೂಮಿಯಲ್ಲಿ ಸಲ್ಲುವುದು ಸಂಶಯಬೇಡ ಎಂದಿರುವನು.

ನೆರೆದು ನೆರದೀ ಕೃತಿಯೊಳುಳ್ಳ ಲೇಸುಗಳನಾ
ದರಿಸಬೇಡುಳ್ಳ ತಪ್ಪು ಹಿಡಿವುದೆಂದು ನಿ
ಷ್ಠುರ ದುರ್ಜನರ್ಗೆ ವಂದಿಸುವೆನೆನ್ನಜನಂ ನಗಲಾರದೇಕೆಂದೊಡೆ
ವರಮುಕುರಮಂ ತೊಡೆವರಾರಂಗಳವನು ಬೋ
ಹರಿ ಪರಾರ್ಮಳಿನಾಂಬರವನೊಗೆವರಾರಿದಂ
ಪರಕಿಪೊಡೆ ಸುಜನರಂತಿರ್ದಡೀ ಕೃತಿಗವರು ಕುಂದುಗಾಣಿಸಲಜೆಯರು

**ಹ.ಚ.ಕಾವ್ಯ(೧.೨೨)**

ಈ ಕೃತಿಯಲ್ಲಿರುವ ಗುಣಗಳನ್ನು ಮೆಚ್ಚುವುದು ಅಂತಿರಲಿ ಇರುವ ದೋಷಗಳನ್ನೆ ಹುಡುಕಬೇಕೆಂದು ಒಂದಾದ ದುರ್ಜನರಿಗೆ ನಾನು ವಂದಿಸುವೆ. ಏಕೆಂದರೆ, ಯಾರು ಕನ್ನಡಿಯನ್ನು ಉಜ್ಜಿ ಒರಿಸಿಕೊಟ್ಟಿರುವರೊ, ಯಾರು ಅಂಗಳವನ್ನು ಗುಡಿಸಿ ಸ್ವಚ್ಛ ಮಾಡಿಕೊಡುವರೋ, ಅವರು ಒಳ್ಳೆಯವರು. ನನ್ನ ಕಾವ್ಯ ದೋಷಗಳನ್ನು ಕಂಡುಹಿಡಿಯುವ ದುರ್ಜನರೂ ಸಜ್ಜನರೇ.

ನಡೆವರೆಡಹದೆ ಬಱುಬರೆಡಹುವರೆ ಕಾವ್ಯಮಂ
ನಡೆಸುವಾತಂ ರಸಾವೇಶ ಮಱಹಾಲಸ್ಯ
ವೆಡೆಗೊಳಲು ಲಪ್ಪುಗಲ್ಲದೆ ಕಾವ್ಯ ಕರ್ತೃ ತಪ್ಪುವನೆ ವೊಂದೆರಡಡೆಯೊಳು
ಎಡೆವಾಯ್ದು ಬಂದ ತಪ್ಪಂ ಹಿಡಿದು ಸಾಧಿಸದೆ

ಕಡೆತನಕ ಬಂದ ಲೇಸಿಂಗೆ ತಲೆದೂಗಿ ತಲೆ
ಯೊಡೆವುದೆ ಬೇನೆಯನಱಿಯದ ನೀರಸರನೇಕೆ ಪುಟ್ಟಿಸಿದನಬುಜಭವನಂ

**ಹ.ಚ.ಕಾವ್ಯ ಪದ್ಯ(೧.೨೩)**

ನಡೆಯುವವರು ಎಡವುವರು ವಿನಃ ಕುಳಿತವರು ಎಡವಲು ಸಾಧ್ಯವೇ? ಕಾವ್ಯವನ್ನು ಬರೆಯುವಾಗ ರಸಾವೇಶ, ಮರೆವು, ಆಲಸ್ಯದಿಂದಾಗಿ ಕೆಲವೆಡೆಗಳಲ್ಲಿ ಕವಿ, ತಪ್ಪುವನು. ಕಾವ್ಯಪರಿಣಿತ ತಪ್ಪು ಮಾಡುವನೇ? ಎಲ್ಲೊ ಕೆಲವೆಡೆ ನುಸುಳಿ ಬಂದ ತಪ್ಪನ್ನೇ ಹಿಡಿದು ಬಯ್ಯುತ್ತಿರದೆ ಮುಂದೆ ಕಾಣುವ ಗುಣವನ್ನು(ಕಾವ್ಯಗುಣ) ಕಂಡು ತಲೆದೂಗಿದರೆ ಅಥವಾ ಮೆಚ್ಚಿಕೊಂಡರೇ ಅವನ ತಲೆ ಒಡೆಯುವುದೇನು? ಕಷ್ಟ ಸುಖವನ್ನರಿಯದ ನೀರಸರನ್ನು ಬ್ರಹ್ಮದೇವನು ಏಕೆ ಹುಟ್ಟಿಸಿದನೋ ಎಂದು ಕುಕವಿಗಳನ್ನು ನಿಂದಿಸಿರುವನು.

ಕಾವ್ಯರಚನೆ ಮಾಡುವವನು ತಪ್ಪು ಮಾಡುತ್ತಾನೆ. ವಿನಃ ರಚಿಸದವನು ತಪ್ಪು ಮಾಡುತ್ತಾನೆಯೇ ಒಂದು ತಪ್ಪನ್ನು ಎಣಿಸುವ ಕುಕವಿಗಳ ಕಾವ್ಯದಲ್ಲಿರುವ ಗುಣವನ್ನು ಮೆಚ್ಚದಿರಲು ಕಾರಣವೇನು? ಮೆಚ್ಚಿದರೇನು? ಅವರ ಗಂಟು ಕಳೆಯುವುದೇ? ಕಾವ್ಯವನ್ನು ಮೆಚ್ಚುವ ಸಹೃದಯಗಳ ಅಗತ್ಯತೆಯಿದೆ ಎನ್ನುತ್ತಾನೆ.

ಪೞಿದೊಡೆ ಬಾಳ್ವನಲ್ಲದೊಡೆ ಸಾಯನೆ ಸತ್ಕೃತಿಗಳ್ದು ದುರ್ಜನಂ
ಪೞಿದ ವೃಥೋಕ್ತಿ ಸಲ್ಲದೊಡೆ ಸಾಯದೆ ಕಾವ್ಯಬಂಧನಕ್ಕಮೊ
ಸವಿಯೆ ಪೊಗೞ್ತೆಯಲ್ತೆ ರಸವತ್ಕೃತಿಯಂ ಕವಿ ಪೇೞ್ಗೆದುರ್ಜನಂ
ಪೞಿಯುತುಮಿರ್ಕೆ ಬಾೞ್ವಮನೆಗೊಂದು ಬಗುೞ್ವುದು ಬೇೞ್ಕಿಮನ್ನಿರೇ

**ಅನಂತನಾಥ ಪುರಾಣಂ(೧.೪೦)**

ದುರ್ಜನರು ಕೃತಿಯನ್ನು ತೆಗಳಿದರೆ ಕೃತಿಯನ್ನು ಕೇಳಿದವನು ಸಾಯುವನೇ, ದುರ್ಜನರಾಡಿದ ವ್ಯರ್ಥವಾದ ಮಾತು ಕೇಳಿ ಕವಿಯು ಕಾವ್ಯ ರಚಿಸದಿರುವನೇ? ಬಾಳುವ ಮನೆಗೊಂದು ಬೊಗಳುವ ಮನೆ ಇದ್ದೇ ಇರುತ್ತದೆ. ಹಾಗೇ ಸಜ್ಜನರಿರುವಲ್ಲಿ ದುರ್ಜನರು ಇದ್ದೇ ಇರುತ್ತಾರೆ.

ಅಱಿಯದೆ ಪದವಿನ್ಯಾಸಮಂ
ನಱಿಯದೆ ಸಾರಸ್ಯಮಂ ಪರಪ್ರತಿಭೆಯ ಗು
ಣ್ಪಱಿಯದೆ ತಾಮುಂ ಕೆಮ್ಮಗೆ
ಡುೞಿಕೆಂಬುವು ಕುಕವಿಕೂಪ ಮಂಡೂಕಂಗಳ್

**ಅನಂತನಾಥ ಪುರಾಣ(೧.೪೨)**

ಪದವಿನ್ಯಾಸವನ್ನರಿಯದೆ, ಕೃತಿಯ ಸ್ವಾರಸ್ಯವನ್ನು ಅರಿಯದೆ, ಪರರ ಪ್ರತಿಭಾ ಶಕ್ತಿಯನ್ನರಿಯದೆ, ಹಾಗೂ ಕಾವ್ಯ ಗುಣವನ್ನರಿಯದೆ, ಸುಮ್ಮನೆ ಡುರುಕೆಂದು ಕೂಗುವುದು ಬಾವಿಯೊಳಗಿನ ಕಪ್ಪೆಗಳೆಂದು ನಿಂದಿಸಿ, ಕುಕವಿಗಳನ್ನು ಬಾವಿಯ ಕಪ್ಪೆಗೆ ಹೋಲಿಸಿದ್ದಾನೆ.

ಎನಿತನೊಜಿಲ್ದು ಪೇಟ್ವ ಕವಿಯೇನನದಂ ಪೆಸರಿಟ್ಟು ಮೆಚ್ಚಬ
ಲ್ಲನನಱನಲ್ಕೆ ವೇಟ್ಟುದವನಂ ಜಗದೊಳ್ಪಡೆಯಲ್ಕೆಬಾರದಾ
ತನ್ನ ಮುಖದಿಂದ ಮಲ್ಲದುದು ಸಲ್ಲದು ಕಟ್ಟಿಯುಮೇನೊಮಾಲೆಗಾ
ಱನ ಪೊಸ ಬಾಸಿಗಂ ಮುಡಿವ ಬೋಗಿಗಳಿಲ್ಲದೆ ಬಾಡಿಪೋಗುದೇ

**ಅನಂತನಾಥ ಪುರಾಣ(೧.೪೫)**

ಮಾಲೆಗಾರನು ಮಾಲೆಯನ್ನು ಕಟ್ಟುತ್ತಾನೆ. ಅದನ್ನು ಧರಿಸಿ ಆನಂದಿಸುವವರು ಇರದಿದ್ದರೆ ಮಾಲೆ ಬಾಡಿ ಹೋಗುವುದು. ಹಾಗೆಯೇ ಕವಿಯು ಒಳ್ಳೆಯ ಕಾವ್ಯವನ್ನು ರಚಿಸುತ್ತಾನೆ. ಅದನ್ನು ಓದಿ ಆನಂದಪಡುವ ರಸಿಕರಿಲ್ಲದೆ ಕಾವ್ಯ ವ್ಯರ್ಥವಾಗುವುದೆಂದು ಹೇಳುತ್ತಾ ಸಹೃದಯಗಳ ಕೊರತೆಯನ್ನು ತಿಳಿಸುತ್ತಾನೆ.

ಪ್ರಿಯರಿಗಪ್ರಿಯರಿಗೆ ವಿವೇಕಾ
ಶ್ರಯರಿಗತಿ ಮೂರ್ಖರಿಗವಜ್ಞಾ
ನಿಯಮರಿಗೆ ಜಾಣರಿಗೆ ಜಡರಿಗಸೂಯಭಾವರಿಗೆ
ನಯವಿದರಿಗಜ್ಞರಿಗೆ ಹರುಪೋ
ದಯದ ಹೆಂಪು ಕುಮಾರವಾಲ್ಮೀ
ಕಿಯ ವಿವಾಹ ಪ್ರೌಢತರ ಕವಿತಾ ಚಮತ್ಕಾರ

**ತೊರವೆ ರಾಮಾಯಣ(ಕುಮಾರವಾಲ್ಮೀಕಿ)(೧-೧೨)**

ಕಾವ್ಯ ಪ್ರಿಯರನ್ನು ಅಪ್ರಿಯರನ್ನು, ವಿವೇಕಿಗಳಿಗೆ ಮೂರ್ಖರಿಗೆ ಜಾಣಂಗೆ, ಜಡರಿಗೆ ಅಸೂಯಾಭಾವವನ್ನು ಹೊಂದಿದವರಿಗೆ ನಯವಂತರಿಗೆ ತಿಳಿದವರಿಗೆ ನನ್ನ ಕಾವ್ಯ ಪ್ರೌಢಕಾವ್ಯವಾಗಿದೆ ಎಂದು ಚಮತ್ಕಾರದಿಂದ ಕಾವ್ಯ ಪ್ರಶಂಸೆ ಮಾಡಿಕೊಳ್ಳುವುದರ ಜೊತೆಗೆ ಕಾವ್ಯನಿಂದಕರಾದ ಮೂರ್ಖರನ್ನು ಅಪ್ರಿಯರನ್ನು ಕುರಿತು ಹೇಳಿದ್ದಾನೆ.

ತೆಗಳಲ್ಬಲ್ಲಂ ಖಳತಾಂ
ನೆಗಳಲ್ಬಲ್ಲನೇ ನವೀನಕೃತಿಯಂ ಶಾಖಾ

ಮೃಗಮಲಂ ಮಾಲೆಗೀಳ
ಲ್ಕೆಗೆ ಬಲ್ಲುದದಲ್ಲದಂತಿರೇಂ ರಚಿಯಿಕುಮೇ

**ಶಬರಶಂಕರ ವಿಳಾಸ(೧.೧೫)**

ಕಾವ್ಯನಿಂದಕರೇ ದುರ್ಜನರು, ಇನ್ನೊಬ್ಬರ ಕಾವ್ಯವನ್ನು ಮೆಚ್ಚಿಕೊಳ್ಳದ ಖಳನು ತಾನು ಕಾವ್ಯ ರಚಿಸಬಲ್ಲನೇ? ಹೊಸ ಕಾವ್ಯ-ಸೃಷ್ಟಿ ಅವನಿಂದ ಸಾಧ್ಯವಿಲ್ಲ. ಬಲ್ಲಿದ್ದನ್ನು ಅಲ್ಲನೆನ್ನುವನು ಕವಿಯಾಗುವನೇ? ಅವನು ಕುಕವಿಯಾಗುವನೇ ವಿನಃ ಕಾವ್ಯ ರಚಿಸಲಾರ.

ಪಿರಿದಾಯಾಸದೆ ಗುಣಮಂ
ದೊರೆಕೊಳಿಸಿದೊಡಂ ಖಲಂಗೆ ಗುಣಮಂ ಪಶ್ಚಾ
ತ್ಕರಿಸಿ ಗುಣಿಯಂ ವಿಭೇದಿಪ
ಪರಿತೀಕ್ಷಮುಖಂಗೆ ಸೂಚಿಯಂತಿರೆ ಸಹಜಂ

**ಶಬರಶಂಕರ ವಿಳಾಸ(೧.೧೬)**

ಕಾವ್ಯಗುಣಂವನ್ನು ತಿರಸ್ಕರಿಸಿ ನೋಡುವ ಖಳನಿಗೆ(ಕುಕವಿಗೆ) ಗುಣವುಳ್ಳ ಕಾವ್ಯ ರುಚಿಸದು. ಒಡಕನ್ನು ಉಂಟುಮಾಡುವುದು ಕುಕವಿಗೆ ಸಹಜ ಕ್ರಿಯೆಯಾಗಿದೆ.

ಆಜನ ಜಡನೆಂದು ನುಡಿವುದು
ಕುಜನತೆ ಜಡಜಾತಜಾತನೆಂತಜಡನವಂ
ಸುಜನ ವಿರೋಧಿಯನಜಡಂ
ಸೃಜಯಿಪನೆ ಪರೋಪತಾಪ ಫಲನಂ ಖಲನಂ

**ಶಬರಶಂಕರ ವಿಳಾಸ(೧.೧೭)**

ಜನರು ಜಡನೆಂದು ನುಡಿವುದು ಸುಜನ ವಿರೋಧಿಯಾದವನೇ ಜಡನು. ಜಡನಾದವನು ಕಾವ್ಯ ರಚಿಸುವನೇ? ಎಂದಿಗೂ ಇಲ್ಲ. ಅವನು ಸುಜನ ವಿರೋಧಿಯಾಗಿರುವನು.

ಇನಿವಣ್ಣನಿಗೆ ಬಿಸುಟ್ಟೊ
ಯ್ಯನೆ ವನಮಂ ಪೊಕ್ಕ ಕಾಕನೊಲ್ದು ದುಗುಡಬೇ
ವಿನ ಪಣ್ಣಂ ಲೇಸಂ ಬಿ
ಟ್ಟನಿಸುಂ ಕೃತಿಯಲ್ಲಿ ದೋಷಮಂ ಖಲನೊಲ್ವಂ

**ಅನಂತನಾಥ ಪುರಾಣಂ(೧.೧೮)**

ರುಚಿಯಾದ ಹಣ್ಣುಗಳನ್ನು ಬಿಸುಟು ಬೇವಿನ ಹಣ್ಣಿಗೆ ಒಲಿದ ಕಾಗೆಯ ಹಾಗೆ, ಕಾವ್ಯದಲ್ಲಿರುವ ರಸಭರಿತ ಅಂಶಗಳನ್ನು ಬಿಟ್ಟು ದೋಷವನ್ನು ಹುಡುಕುವ ಕುಕವಿಗಳು ಕಾಗೆಯಂತೆ ಎಂದಿರುವನು.

ಖಲಬುದ್ಧಿಗೆ ಸತ್ಕಾವ್ಯದೊ
ಳಲರ್ದು ಗುಣಂ ದೋಷಮಾಗಿ ತೋರ್ಕು ರವಿಯು
ಜ್ವಲರುಚಿ ಕೌಶಿಕ ದೃಷ್ಟಿಗೆ
ಸಲೆ ಮರ್ಚಿನಿಪಂತಿರಾತ್ಮದೋಷೋನ್ನತಿಯಂ

**ಅನಂತನಾಥ ಪುರಾಣಂ(೧-೨೦)**

ಸೂರ್ಯನ ಉಜ್ವಲವಾದ ಬೆಳಕು ದೃಷ್ಟಿ ದೋಷವಿದ್ದವರಿಗೆ ಮಬ್ಬಾಗಿ ತೋರುವ ಹಾಗೆ, ಖಳನ ಬುದ್ದಿಗೆ ಸತ್ಕಾವ್ಯ ದೋಷಯುಕ್ತವಾಗಿ ಕಾಣುವುದು ಕುಕವಿಯ ಆತ್ಮದೋಷದಂತೆ ಎಂದು ಕಾಣುವುದು.

ಅಳಿಯಲರಂ ಗಿಳಿ ಪಣ್ಣಂ
ತಳಿರಂ ಪಿಕನೊಲ್ವ ತೆರದಿ ಕುಜದೊಳ್ ಕೃತಿಯೊಳ್
ವಿಳಸಿತ ಪದಮನುಮರ್ಥಮ
ನಳಂಕೃತಪ್ರಹಿತ ಭಾವಮಂ ಕೆಲರೊಲ್ವರ್

**ಶಬರಶಂಕರ ವಿಳಾಸ(೧.೨೩)**

ಹೂವನ್ನು ಒಲ್ಲದ ದುಂಬಿಯಂತೆ, ಹಣ್ಣನ್ನು ಒಲ್ಲದ ಗಿಳಿಯಂತೆ, ಚಿಗುರನ್ನು ಒಲ್ಲದ ಕೋಗಿಲೆಯಂತೆ, ಕೃತಿಯಲ್ಲಿ ವಿಲಾಸದಿಂದ ಹೊಂದಿಕೊಂಡಿರುವ ಪದಗಳನ್ನು ಅರ್ಥವನ್ನು, ಅಲಂಕಾರವನ್ನು, ಭಾವವನ್ನು ಕೆಲವರು ಇಷ್ಟಪಡಲಾರರು. ಅವರೇ ಕುಜನರು ಹಾಗೂ ಕುಕವಿಗಳು.

ರಸವತ್ಕಾವ್ಯದ ರಸಮಂ
ರಸಿಕರ್ಕಳ್ಬಲ್ಲ ತೆರದಿನರಿವರೆ ಗಾಂಪರ್
ಸಸಿಜೊನ್ನದಿನಿದನರಿವವೆ
ಮಿಸುಪ ಚಕೋರಂಗಳಂತಿರುಳಿದ ಖಗಂಗಳ್

**ಶಬರಶಂಕರ ವಿಳಾಸ(೧.೨೪)**

ಹುಣ್ಣಿಮೆಯ ಬೆಳದಿಂಗಳನ್ನು ಚಕೋರ ಪಕ್ಷಿಯು ತಿಳಿಯುವುದೇ ವಿನಃ ಚಕೋರಗಳಂತಿರುವ ಪಕ್ಷಿಗಳು ತಿಳಿಯಲಾರವು. ಹಾಗೆಯೇ ರಸಭರಿತವಾದ ಕಾವ್ಯದ ರಸವನ್ನು ರಸಿಕರು ಬಲ್ಲರೇ ವಿನಃ ಗಾಂಪರು(ಏನು ಅರಿಯದ ಹಳ್ಳಿಗರು) ಅರಿಯಬಲ್ಲರೇ? ಆಧ್ದರಿಂದ ರಸಿಕರು ಚಕೋರಗಳಂತೆ, (ರಸವತ್ಕಾವ್ಯ ಹುಣ್ಣಿಮೆಯ ಚಂಧ್ರನ ಬೆಳಕಿನಂತೆ) ಎಂದಿರುವನು.

ಸೂಕ್ತಿಸುಧಾರ್ಣವವು ಕನ್ನಡ ಸಾಹಿತ್ಯದಲ್ಲಿ ಅತಿ ಮುಖ್ಯವಾದ ಸಂಕಲಿತ ಕೃತಿ ಇದು ಪ್ರಮುಖ ಕೃತಿಗಳಿಂದ ಪ್ರಸಿದ್ಧ ಪದ್ಯಗಳನ್ನು ಸ್ವೀಕರಿಸಿದೆ. ಕೆಳಗೆ ಕೆಲವು ಪದ್ಯಗಳನ್ನು ಉದಾಹರಿಸಿದೆ.

ಪಡೆದಂ ರಜೋದಿಕಂ ವಿಧಿ
ಪಡೆವಣಿಯಂ ಪಣಿಯಂ ಫಣಿಯನಮೃತ ರಸಮಂ ವಿಷಮಂ
ಕಡಲ ಸುೞಯಂ ಮೞೆಯಂ
ಸಿಡಿಲ ಪಡೆದಂತೆ ಸುಜನರಂ ದುರ್ಜನರಂ

ಮೂಲ: **ಪಂಪರಾಮಾಯಣ ಮತ್ತು ರಾಮಚಂದ್ರಪುರಾಣ**(೧.೩೨)

ಸ್ವೀಕರಣ: **ಸೂಕ್ತಿಸುದಾರ್ಣವ**(೧.೨೮)

ವಿದಾರ್ದ್ಯನಾದ ವಿಧಿಯು ಹಾವನ್ನು, ಅಮೃತವನ್ನು ರಸವನ್ನು, ವಿಷವನ್ನು, ಕಡಲನ್ನು ಸುಳಿಯನ್ನು, ಮಳೆಯನ್ನು, ಸಿಡಲನ್ನು ಪಡೆದಂತೆ ಸುಜನರನ್ನು ದುರ್ಜನರನ್ನು ಪಡೆದನು.

ಪೞೆದೊಡೆ ಬಾೞ್ವನಲ್ಲದೊಡೆ ಬಾೞ್ವನೆ ಸತ್ಕೃತಿಗೇಳ್ದು ದುರ್ಜನಂ
ಪೞೆದು ವೃಥೋಕ್ತಿ ಸಲ್ಲದೊಡೆ ಸಲ್ಲದೆ ಕಾವ್ಯ ನಿಬಂಧನಕ್ಕಮಾ
ಪೞೆಯೆ ಪೊಗೞ್ತೆಯಲ್ತೆ ರಸವತ್ಕೃತಿಯಂ ಕವಿ ಪೇೞ್ಗೆ ದುರ್ಜನಂ
ಪೞೆಯುತುಮಿರ್ಕು ಬಾೞ್ವ ಮನೆಗೊಂದು ಬಗುೞ್ವುದು ಮೇೞ್ಕುಮೆನ್ನರೇ

**ಅನಂತನಾಥ ಪುರಾಣ** (೧.೪೦)

ಇರುಮರುಳೇ ಶುಷ್ಕ ವಯಾ
ಕರಣಂಗಂ ಶುಷ್ಕ ತಾರ್ಕಿಕಂಗಂ ಬೆಳ್ಳ
ಕ್ಕರಿಗಂಗ ವಿಷಯಮೇಕಾ
ವ್ಯರತ್ನ ಮತಿಚತುರ ಕವಿಕದಂಬಕ ವಿಷಯ

**ಆದಿಪುರಾಣಂ**(೧,೨೪) **ಸೂ.ಸು.**(೧.೫೪)

ಹಜೆಗವಿಗಳ ಕಬ್ಬಂಗಳ
ಪೊಱಗಟೆಯಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ
ಬಜೆತಾಜೆಗಬಾಜೆಗ ವೆ
ತ್ತಱ ತತ್ತರ ವೆಕ್ಕಸಕ್ಕವಸ್ತ್ರ ವ್ಯಸ್ತಂ

**ಗಿರಿಜಾಕಲ್ಯಾಣ(೧.೩೨), ಸೂ.ಸು.(೧.೪೬)**

ಒಟ್ಟಾರೆ ಕನ್ನಡ ಕಾವ್ಯದ ಆರಂಬದಲ್ಲಿ ಬಹುಶಃ ಕವಿರಾಜ ಮಾರ್ಗದಿಂದಲೇ ಈ ಕುಕವಿನಿಂದೇ ಬೆಳೆದು ಬಂದಿದೆ. ಕುಕವಿಗಳನ್ನು ನಿಂದನೆ ಮಾಡುವುದು ಒಂದು ಕಾವ್ಯಭಾಗವೆಂಬಂತೆ ಬೆಳೆದುಬಂದಿದೆ. ಕನ್ನಡ ಕಾವ್ಯದಲ್ಲಿ ಕೆಲವರು ಕುಕವಿಗಳನ್ನು ಬಹಳ ಹಗುರವಾಗಿ ನಿಂದಿಸಿದರೆ, ಇನ್ನೂ ಕೆಲವರು ನಿರ್ದಾಕ್ಷಿಣ್ಯವಾಗಿ, ನಿಂದಿಸಿದ್ದಾರೆ. ಹಳಗನ್ನಡ ಸಾಹಿತ್ಯದಲ್ಲಿ ಇದು ಹೆಚ್ಚು ಬೆಳೆದುಬಂದಿದೆ. ಉದಾಹರಣೆಗೆ ನಯಾಸೆನನ 'ಧರ್ಮಾಂಮೃತ'ದಲ್ಲಿ ಸು.ಒಂಭತ್ತು ಪದ್ಯಗಳ ವ್ಯಾಪ್ತಿಯಲ್ಲಿ ಕವಿ ಕುಜನರಾದ ಕಾವ್ಯ ನಿಂದಕರನ್ನು ತೆಗಳುತ್ತಾನೆ. ಅದರಂತೆ ಲೀಲಾವತಿ ಪ್ರಬಂಧದಲ್ಲೂ ಗಿರಿಜಾ ಕಲ್ಯಾಣದಲ್ಲೂ ಕುಕವಿ ನಿಂದೆಯ ಪದ್ಯಗಳು ಹೆಚ್ಚಿವೆ.

ಕವಿರಾಜಮಾರ್ಗದಲ್ಲಿ ಕುಕವಿ ನಿಂದೆಯ ಒಂದೇ ಪದ್ಯವಿದ್ದರೂ ಕವಿಗೆ ಸ್ವಂತಿಕೆ ಎಂಬುದು ಎಷ್ಟು ಅವಶ್ಯವಾಗಿದೆ. ಅವರಿವರ ಮಾತನ್ನೆ ಕಾವ್ಯವನ್ನಾಗಿ ಬರೆಯುವವರ ಪರಿಸ್ಥಿತಿ ಏನಾಗುತ್ತದೆ ಎಂಬ ಕವಿ ವಿವರವಾಗಿ ತಿಳಿಸಿದ್ದಾನೆ. ಕಾವ್ಯ ಸಾಮರ್ಥ್ಯವಿರದೇ ಅನುಕರಣೆಯಿಂದ ಯಾವ ಪ್ರಯೋಜನವೂ ಇಲ್ಲವೆಂಬುದನ್ನು ವ್ಯಕ್ತಪಡಿಸುತ್ತಾನೆ. ಹೀಗೆ ಕುಕವಿ ನಿಂದೆಯು ಕಾವ್ಯದ ಒಂದು ಭಾಗವೆಂಬಂತೆ ಕಂಡುಬರುತ್ತವೆ.

**ಅಡಿಟಿಪ್ಪಣಿಗಳು**

೧. ಶಿವರುದ್ರಪ್ಪ ಜಿ.ಎಸ್., **ಕನ್ನಡ ಕಾವ್ಯತತ್ವ ಚಿಂತನೆ,** ಪು.೧೨೨

೨. ಅದೇ, ಪು.೧೨೩

೩. ಅದೇ, ಪು.೧೨೪

೪. ಚಿದಾನಂದ ಕವಿ, **ಸೂಕ್ತಿ ಸುಧಾರ್ಣವಂ,** ಪು.೧೩೬

೫. ಹರಿಹರ, **ಗಿರಿಜಾ ಕಲ್ಯಾಣ,** ಪು.೧೨೬

೬. ಶಿವರುದ್ರಪ್ಪ ಜಿ.ಎಸ್., **ಕನ್ನಡ ಕವಿಗಳ ಕಾವ್ಯಕಲ್ಪನೆ,** ಪು.೧೨೮

## ಅಧ್ಯಾಯ ಎಂಟು

# ನಾಂದಿ ಪದ್ಯಗಳ ವೈಶಿಷ್ಟ್ಯಗಳು

ಕಾವ್ಯಭಾಗಕ್ಕಿಂತ ಭಿನ್ನವಾಗಿರುವ ನಾಂದಿ ಪದ್ಯಗಳ ವೈಶಿಷ್ಟ್ಯವನ್ನು ವಿವರಿಸುವುದೇ ಈ ಅಧ್ಯಾಯದ ಉದ್ದೇಶವಾಗಿದೆ.

ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಕಾವ್ಯಭಾಗಕ್ಕಿಂತ ಪ್ರತ್ಯೇಕವಾಗಿರುವಂತೆ ಕಂಡುಬರುವ ಈ ನಾಂದಿ ಪದ್ಯಗಳು ತಮ್ಮದೇ ಆದ ವಿಶಿಷ್ಟತೆಯನ್ನು ಪಡೆದುಕೊಂಡು ಬಂದಿವೆ. ಕಾವ್ಯದ ಕಥಾಸಾರಕ್ಕಿಂತ ಮೊದಲು ಗಮನ ಸೆಳೆಯುವ ಪದ್ಯಗಳು, ಕಾವ್ಯದ ಪೀಠಿಕಾ ಪ್ರಕರಣದಲ್ಲಿ ದೊರೆಯುತ್ತವೆ. ಕಥೆ ಪ್ರಾರಂಭದ ಮುನ್ನ ಈ ಪದ್ಯಗಳು ಇರಲೇಬೇಕು. ಇವುಗಳನ್ನು ನಾಂದಿ ಪದ್ಯಗಳೆಂದು ಕರೆಯುತ್ತಾರೆ. ಇವುಗಳಲ್ಲಿ ಪೂರ್ವಕವಿ ಸ್ಮರಣೆ, ಗುರುಸ್ತುತಿ, ಆಶ್ರಯದಾತನ ಸ್ತುತಿ, ದೇವತಾಸ್ತುತಿ, ಕುಕವಿ ನಿಂದೆಯ ಪದ್ಯಗಳು, ಸ್ವಕಾವ್ಯ ಪ್ರಶಂಸಾ ಪದ್ಯಗಳು ಕಾವ್ಯಾರಂಭದಲ್ಲಿ ಕಂಡುಬರುತ್ತವೆ.

ಕನ್ನಡದ ಮೊಟ್ಟ ಮೊದಲ ಲಾಕ್ಷಣಿಕ ಕೃತಿಯಾದ ಕವಿರಾಜ ಮಾರ್ಗದ ಮೊದಲ ಪದ್ಯದಲ್ಲಿ ಪ್ರಭು ಪ್ರಶಂಸೆಯನ್ನು ಮಾಡಲಾಗಿದೆ. ಎರಡನೇ ಪದ್ಯವೂ ಅಮೋಘವರ್ಷನ ಸ್ತುತಿಪರ ಪದ್ಯವಾಗಿದೆ. ಪಂಪನೂ ಕೂಡ ಮಾರ್ಗಕಾರನನ್ನು ಅನುಸರಿಸಿ ಹಾಗೂ ಅನುಕರಿಸಿ ಹಲವು ಪದ್ಯಗಳಲ್ಲಿ ಆಶ್ರಯದಾತನ ಸ್ತುತಿಯನ್ನು ಮಾಡಿದ್ದಾನೆ. ಅದರಂತೆ ರನ್ನನೂ ಕೂಡ ಅದೇ ದಾರಿಯಲ್ಲಿ ತನ್ನ ಆಶ್ರಯದಾತನಾದ ಸತ್ಯಾಶ್ರಯನನ್ನು ಸ್ತುತಿಸಿದ್ದಾನೆ. ಪಂಪನ ಮಾರ್ಗದಲ್ಲಿಯೇ ಮುಂದಿನ ಎಲ್ಲಾ ಕವಿಗಳು ಕಾವ್ಯಾರಂಭದ ಪದ್ಯಗಳಲ್ಲಿ ರಾಜನ ಸ್ತುತಿ ಪರ ಪದ್ಯ ರಚಿಸಿರುವುದು ಕಾಣಿಸುತ್ತದೆ.

ಈ ನಾಂದಿ ಪದ್ಯಗಳ ವಿಶಿಷ್ಟತೆಯನ್ನು ಜೈನ, ವೀರಶೈವ, ವೈಷ್ಣವ ಮತ್ತು ಇತರೆ ಎಂದು ಹಲವು ಪ್ರಕಾರಗಳಲ್ಲಿ ವಿಂಗಡಿಸಲಾಗಿದೆ. ಜೈನ ಕವಿಗಳು ಜಿನಸ್ತುತಿಯನ್ನು ಮತ್ತು

ಆಶ್ರಯದಾತರನ್ನು ವೀರಶೈವ ಕವಿಗಳು ಶಿವಸ್ತುತಿಯನ್ನು ವೈಷ್ಣವ ಕವಿಗಳು ವಿಷ್ಣುವಿನ ಸ್ತುತಿಯನ್ನು ಮಾಡಿರುವರು. ಕಾವ್ಯಮುಖೇನ ದೇವರನ್ನು ಸ್ತುತಿಸುವ ಪದ್ಧತಿ ಪ್ರಾಚೀನ ಕನ್ನಡ ಕಾವ್ಯದ ವೈಶಿಷ್ಟ್ಯವಾಗಿದೆ.

೧. **ಜೈನಕವಿಗಳ ಪ್ರಾರ್ಥನೆಗಳು**

ಜೈನ ಕವಿಗಳ ಕಾವ್ಯಗಳ ಪ್ರಾರಂಬದ ಪದ್ಯದ ಮೊದಲಕ್ಷರ ಶ್ರೀಕಾರವಿರುತ್ತದೆ. ಉದಾಹರಣೆಗೆ.

ಶ್ರೀದೇವೇಂದ್ರ ಮುನೀಂದ್ರ ವಂದಿತ ಗುಣವ್ರಾತಂ ಜಗತ್ಸಾಮಿಸಂ
ದಾದಿ ಬ್ರಹ್ಮನಗಾದ ಬೋಧ ನಿಳಯಂ ದುರ್ವ್ವಾರ ಸಂಸಾರವಿ
ಚ್ಛೇದೋಪಾಯ ನಿಯುಕ್ತ ಸೂಕ್ತಿ ವೃಷಮಾರ್ಗಾಗ್ರೇಸರಂಪಾಪಹೃ
ತ್ಪಾದಜ್ಙಂ ದಯಗೆಯ್ವೆನಕ್ಕೆಮಗೆ ಮುಕ್ತಿಶ್ರೀಸುಖಾ ವ್ಯಾಪ್ತಿಯಂ

**ಆದಿಪುರಾಣ** (೧.೧)

ಶ್ರೀಯನರಾತಿ ಪಯೋನಿಧಿಯೊಳ್ ಪಡೆದುಂ ದರಿತ್ರಿಯಂ
ಬೇಯನೆ ಬೇಡಿಕೊಳ್ಳದೆ ವಿರೋಧಿ ನರೇಂದ್ರರ ನೊತ್ತಿಕೊಂಡುಮಾ
ತ್ಮೀಯ ಸುಪುಷ್ಪ ವೃಷ್ಟಿಯನೊಡಂಬಡೆ ತಾಳ್ದಿಯುಮಿಂತುದಾತ್ತನಾ
ರಾಯಣನಾದ ದೇವನೆಮಗೀಗರಿಕೇಸರಿ ಸೌಖ್ಯಕೋಟಿಯಂ

**ಪಂಪಭಾರತ** (೧.೧)

ಈ ಪದ್ಯಗಳನ್ನು ಗಮನಿಸಿದಗೇ ಜೈನಕವಿಗಳ ಕಾವ್ಯಗಳ ಮೊದಲ ವರ್ಣವು ಶ್ರೀಕಾರವಿರುತ್ತದೆ. ಈ ಶ್ರೀಕಾರ ಕನ್ನಡ ಕಾವ್ಯಕ್ಕೆ ಬಹಳ ವಿಶೇಷ ಇದು ಸಂಸ್ಕೃತ ಜಿನಸೇನಾಚಾರ್ಯರ ಪೂರ್ವ ಪುರಾಣದಲ್ಲಿ ಕಂಡುಬರುತ್ತದೆ. ಕನ್ನಡದಲ್ಲಿ ಇದನ್ನು ಪಂಪ ಕವಿ ಆದಿಪುರಾಣದಲ್ಲಿ ಮತ್ತು ವಿಕ್ರಮಾರ್ಜುನ ವಿಜಯದಲ್ಲಿ ಬಳಕೆಗೆ ತಂದನು ನಂತರ ಬಂದ ಕವಿಗಳು ಈ ಶ್ರೀಕಾರದ ಪ್ರಯೋಗವನ್ನು ತಮ್ಮ ಕೃತಿಯಲ್ಲಿ ಅವಶ್ಯವಾಗಿ ಬಳಸುತ್ತಾ ಬಂದರು. ಆದರೆ ಜೈನರ ಕಾವ್ಯಗಳಲ್ಲಿ ಮಾತ್ರ ಈ ಶ್ರೀಕಾರ ಪದಪ್ರಯೋಗಗೊಂಡಿದೆ. ಹಾಗಾಗಿ ಶ್ರೀಕಾರದ ಪ್ರಯೋಗ ಜೈನರ ವಿಶೇಷವಾಗಿದೆ.

ಜೈನಕವಿಗಳ ಮತ್ತೊಂದು ವಿಶೇಷವೆಂದರೆ ರತ್ನತ್ರಯಗಳ ಕೋರಿಕೆ ಸಮ್ಯಗ್ ಜ್ಞಾನ, ಸಮ್ಯಗ್ ದರ್ಶನ, ಸಮ್ಯಗ್ ಚಾರಿತ್ರ್ಯಗಳನ್ನು ಪಡೆಯುವುದೇ ಈ ಪ್ರಾರ್ಥನಾ ಪದ್ಯಗಳ

ವಿಶೇಷತೆಯಾಗಿದೆ. "ಚಾವುಂಡರಾಯ ಪುರಾಣದಲ್ಲಿ(೬) ವೃಷಭ ಜಿನನಿಂದ ಆರಂಭಿಸಿ ಮಹಾವೀರನವರೆಗಿನ ೧೪ ಮಂದಿ ಜಿನಪತಿಗಳು ವಿಮಳ ರತ್ನತ್ರಯವನ್ನು ದಯಪಾಲಿಸಲಿ ಎಂಬ ಬೇಡಿಕೆಯಿದೆ. ಶ್ರೀಪಾಲಚರಿತೆ(೨೬೫) ಮೊದಲಾದ ಕೃತಿಗಳಲ್ಲೂ ಕೂಡ ಇಂಥ ಕೋರಿಕೆಗಳಿವೆ. ಸುರ ನರ ಉಗರರಿಂದ ವಂದಿತ ಪಾದನು ಕೋಟಿ ಸೂರ್ಯ ಪ್ರಕಾಶನೂ, ತ್ರಿಜ ಸ್ವಾಮಿಯೂ ಆದ ಜಿನನ ಸ್ತುತಿ ಅನೇಕ ಕೃತಿಗಳಲ್ಲಿ ವ್ಯಾಪಕವಾಗಿ ಬಂದಿದೆ."[೧]

ಸಾಧುಗಳನ್ನು, ಸಿದ್ದರನ್ನು, ಆಚಾರ್ಯರನ್ನು ಯಕ್ಷ, ಯಕ್ಷಿಯರನ್ನು ಸ್ತುತಿಸುವುದು ನಾಂದಿ ಪದ್ಯಗಳ ಇನ್ನೊಂದು ವಿಶೇಷತೆಯಾಗಿದೆ. ಹೆಚ್ಚಾಗಿ ಆಗಮಿಕ ಕಾವ್ಯಗಳಲ್ಲಿ ಮಾತ್ರ ಈ ರೀತಿಯ ಪ್ರಾರ್ಥನೆಗಳು ಕಂಡುಬರುತ್ತವೆ. ಧಾರ್ಮಿಕ ಕಾವ್ಯದ ಜಿನಸ್ತುತಿಯ ನಂತರ ಸಿದ್ದರನ್ನು, ಆಚಾರ್ಯರನ್ನು, ಸಾಧಕರನ್ನು ಹಾಗೂ ಪಂಚ ಪರಮೇಷ್ಠಿಗಳನ್ನು ಸ್ತುತಿಸುವುದು ಜೈನರ ವಿಶೇಷತೆಯಾಗಿದೆ. ಹಾಗೂ ಎಲ್ಲಾ ಜೈನ ಕಾವ್ಯಗಳಲ್ಲಿ ಜಿನಸ್ತುತಿಯನ್ನು ಮಾಡುವುದರ ಮೂಲಕ ಜೈನಕವಿಗಳು ಜೈನಧರ್ಮದ ಉತ್ಕರ್ಷವನ್ನು ಕಾವ್ಯದ ಮೂಲಕ ವ್ಯಕ್ತಪಡಿಸಿದ್ದಾರೆ.

**ಶೈವ ಸ್ತುತಿಗಳು**

ಜೈನ ಕವಿಗಳು ಜಿನಸ್ತುತಿ ಮಾಡಿದರೆ ಶೈವ ಕವಿಗಳು ಶಿವನನ್ನು ಸ್ತುತಿ ಮಾಡುತ್ತಾರೆ. ಶಿವಸ್ತುತಿ ಮಾಡುವ ನಾಂದಿ ಪದ್ಯಗಳು ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ದೊರೆಯುತ್ತವೆ. ಇವೆಲ್ಲ ಶಿವನ ಮಹಿಮೆಯನ್ನು ಸಾರುವ ಪದ್ಯಗಳೇ ಶ್ರೀ ಗುರುಲಿಂಗಾಯನಮಃ ಎಂಬ ಸ್ತುತಿಯು ಶೈವ ಪರಂಪರೆಯ ಸ್ತುತಿಯಾಗಿದೆ.

ಶ್ರೀ ಹೇಮಾದ್ರಿಂದ್ರ ಚೂಡಸ್ಥಿರಕರಣ ಸಮಾರೂಢ ಪದ್ಮಾಸನಸ್ಥಂ
ಕೋಹಂ ಸೋಹಂಗಳೆಂಬಾ ಗಜೆ ಬಜೆ ಪುಗದಾನಂದ ಸಂವಿತ್ತು ಕಂದ
ರ್ಪಾಹಂಕಾರ ಪ್ರವಿಧ್ವಂಸನಕ ನಿಟಿಲಾಕ್ಷ ಶಿವಂ ಪಾರ್ವತೀಶಂ
ನೇಹಂ ಕೈಮುಕ್ಕು ಪಂಪಾಪುರಪತಿ ದಯೆಯಿಂ ನೋಡಿ ರಕ್ಷಿಕ್ಕೆ ನಮ್ಮಂ

**ಗಿರಿಜಾಕಲ್ಯಾಣ(೧.೩)**

ಹರಿಹರನು ತನ್ನ 'ಗಿರಿಜಾ ಕಲ್ಯಾಣ'ದಲ್ಲಿ ಕೈಲಾಸವಾಸಿಯಾದ, ಪದ್ಮಾಸನಾ ಸೀನನಾದ, ಪಾರ್ವತಿ ಪತಿಯಾದ, ಮನ್ಮಥ, ಸಂಹಾರಿಯಾದ, ಹಣೆಗಣ್ಣನಾದ, ಶಿವನು ನಮ್ಮನ್ನು ರಕ್ಷಿಸಲೆಂದು ವಿನಂತಿಸಿಕೊಳ್ಳುವ ಪದ್ಯವಿದು. ಆಕಾಶ, ಸೂರ್ಯ ಚಂದ್ರ ಭೂಮಿ,

ಅಗ್ನಿ, ಜಲ, ವಾಯು ಇತ್ಯಾದಿ. ಅಷ್ಟದೇಹಿ ಶಿವನ ಪ್ರಾರ್ಥನೆಗಳು ಗಿರಿಜಾ ಕಲ್ಯಾಣದಲ್ಲಿ ಮೂಡಿಬಂದಿದೆ.

ಶಿವನ ಸ್ತುತಿ ಬಂದಾಗ ಹಂಪೆಯು ವಿರೂಪಾಕ್ಷನೆಂದು ಸ್ತುತಿಸಲಾಗಿದೆ. ಹಾಗೂ ಸಾಕ್ಷಾತ್ ಶಿವನೇ ಪಂಪಾಪುರದ ವಿರೂಪಾಕ್ಷನೆಂದು ಸ್ತುತಿಸಲಾಗಿದೆ. ರಾಘವಾಂಕ ಮತ್ತು ಹರಿಹರದೇವನಲ್ಲಿ ಪಂಪಾಪತಿ ವಿರೂಪಾಕ್ಷನ ಸ್ತುತಿಗಳಿವೆ

ಕವಿ ರಾಘವಾಂಕ ತನ್ನ ಹರಿಶ್ಚಂದ್ರ ಕಾವ್ಯದಲ್ಲಿ ಶಿವಸ್ತುತಿಗಾಗಿಯೇ ಕಾವ್ಯರಂಭದಲ್ಲಿ ಒಂದು ಸುಂದರವಾದ ಸ್ತುತಿ ಪದ್ಯವನ್ನು ರಚಿಸಿದ್ದಾನೆ.

ಶ್ರೀಪತಿಗೆ ಸೊಬಗನುಡುಪತಿಗೆ ಶಾಂತಿಯನು ವಾ
ಣೀ ಪತಿಗೆ ಚಾತುರ್ಯಮಂ ದಿವಸ್ಪತಿಗೆ ಪ್ರ
ತಾಪಮಂ ಸುರಪತಿಗೆ ಭೋಗಮಂ ರತಿಪತಿಗೆ ಮೂಲೋಕ ವಾವರಿಸುವ
ರೂಪಂ ಸರಿತ್ಪತಿಗೆ ಗಂಭೀರತೆಯನು ಸ್ವಾ
ಹಾ ಪತಿಗೆ ತೇಜಮಂ ಕೊಟ್ಟ ಗುರುಮೂರ್ತಿ ಪಂ
ಪಾಪತಿ ವಿರೂಪಾಕ್ಷನೆಮಗಿಷ್ಟಸಿದ್ದಿಯಂ ಮಾಳ್ಕೆ ಸಂತೋಷದಿಂದ

**ಹರಿಶ್ಚಂದ್ರ ಕಾವ್ಯ**(೧.೧)

ಈ ಪದ್ಯದಲ್ಲಿ ಶಿವನ ಮಹಾತ್ಮೆಯನ್ನು ಸೋದಾರಣವಾಗಿ ವರ್ಣಿಸಲಾಗಿದೆ. ವಿಷ್ಣುವಿಗೆ ಸೊಬಗನ್ನು, ಚಂದ್ರನಿಗೆ ಶಾಂತಿಯನ್ನು, ಬ್ರಹ್ಮದೇವನಿಗೆ ಚಾತುರ್ಯವನ್ನು, ಸೂರ್ಯನಿಗೆ ಪ್ರತಾಪವನ್ನು, ಇಂದ್ರನಿಗೆ ಭೋಗವನ್ನು, ಮನ್ಮಥನಿಗೆ ಮೂರು ಲೋಕವನ್ನು ಸೆಳೆಯುವ ರೂಪವನ್ನು, ಸಮುದ್ರನಾಥನಿಗೆ ಗಾಂಭೀರ್ಯವನ್ನು, ಅಗ್ನಿ ದೇವನಿಗೆ ತೇಜಸ್ಸನ್ನು, ನೀಡಿದ ಗುರು ಸ್ವರೂಪನಾದ ವಿರೂಪಾಕ್ಷನು ಸಂತೋಷದಿಂದ ನಮ್ಮ ಇಷ್ಟಾರ್ಥವನ್ನು ನೆರವೇರಿಸಲಿ ಎಂದಿರುವ ಈ ಪದ್ಯದಲ್ಲಿ ಶೈವ ಪರಂಪರೆಯಂತೆ ಶಿವನನ್ನು ಶಿವಸ್ವರೂಪಿಯಾದ ಹಂಪೆಯ ವಿರೂಪಾಕ್ಷನನ್ನು ಸ್ತುತಿಸಿ ಶೈವ ಪರಂಪರೆಯಂತೆ ಸ್ತುತಿಸುವ ಈ ಪದ್ಧತಿ ಶೈವಧರ್ಮ ಪ್ರಚಾರವೆಂಬಂತೆ ಕಂಡುಬಂದಿದೆ. ಹರಿಹರ ದೇವನಂತೂ ಶಿವನಲ್ಲದೆ, ಅನ್ಯದೈವದ ಭವಿಗಳನ್ನು ಸ್ತುತಿಸಿದರೆ ಮನಸಿಚಾರಿಯ ಆಣೆ" ಎಂದು ಆಣೆ ಇಡುವಷ್ಟರ ಮಟ್ಟಿಗೆ ಶಿವಭಕ್ತಿಯನ್ನು ಮೆರೆದ ಕವಿ, ಹರಿಶ್ಚಂದ್ರ ಕಾವ್ಯವನ್ನು ಬರೆದ ಶಿಷ್ಯ ಹಾಗೂ ಅಳಿಯನಾದ ರಾಘವಾಂಕನ ದಂತ ಮುರಿಯುವಂತೆ ಹೊಡೆದ ದಂತಕತೆ ಎಲ್ಲರಿಗೂ ತಿಳಿದಿರುವ ವಿಷಯವೇ ಆಗಿದೆ. ಒಟ್ಟಾರೆ ಶಿವನನ್ನು ಆರಾಧಿಸುವುದೇ ಶೈವಾರಾಧನೆ. ಶೈವ ಕವಿಗಳು

ವಿಷ್ಣುವನ್ನು ಸ್ತುತಿಸಿದ ಉದಾಹರಣೆಗಳಿಲ್ಲ. ಆದರೆ ವೈಷ್ಣವರು ತಮ್ಮ ಕಾವ್ಯಗಳಲ್ಲಿ ಶಿವನನ್ನು ಸ್ತುತಿಸುತ್ತಾರೆ. ನಿದರ್ಶನಕ್ಕೆ ಕುಮಾರವ್ಯಾಸ ವಿಷ್ಣುವಿನ ಸ್ತುತಿಯ ನಂತರ ಶಿವನನ್ನು ಸ್ತುತಿಸಿದ್ದಾನೆ.

**೩. ವೈಷ್ಣವ ಪ್ರಾರ್ಥನೆಗಳು**

ವೈಷ್ಣವ ಧರ್ಮದ ಪ್ರಾರ್ಥನೆಗಳು ವಿಷ್ಣುವಿನ ವಿರಾಟ್ ಸ್ವರೂಪದ ದರ್ಶನವನ್ನು ಮಾಡಿಸುತ್ತವೆ. ವೈಷ್ಣವ ಪಂಥದವರಿಗೆ ವಿಷ್ಣು ಅಥವಾ ಹರಿಯೇ ಆರಾಧ್ಯ ದೈವವಾಗಿರುವುದರಿಂದ ಹರಿನಾಮಸ್ಮರಣೆಗೆ ಆದ್ಯತೆ ನೀಡಲಾಗಿದೆ. ಶ್ರೀಕೃಷ್ಣನ ಮಹತ್ವವನ್ನು ನಿರೂಪಿಸುವಲ್ಲಿ ಈ ನಾಂದಿ ಪದ್ಯಗಳು ಸಫಲವಾಗಿವೆ. ಜಗನ್ನಾಥ ವಿಜಯದಲ್ಲಿ ಕೃಷ್ಣನನ್ನು ಕೊಂಡಾಡಲಾಗಿದೆ. ಲಕ್ಷ್ಮೀಶನು ಲಕ್ಷ್ಮಿನಾರಾಯಣ ಸ್ತುತಿಯನ್ನು ಕಾವ್ಯಾರಂಭ ಮಾಡಿರುವನು.

ಶ್ರೀವಧು ವಿನಂಬಕ ಚಕೋರಕಂ ಪೊರೆಯೆ ಭ
ಕ್ತಾವಳಿಯ ಹೃತ್ಕುಮುದ ಕೋರಕಂ ಬಿರಿಯೆ ಜ
ಗತೀ ವಲಯದಮಲ ಸೌಭಾಗ್ಯ ರತ್ನಾಕರಂ ಪೆರ್ಚಿನಿಂಮೇರೆವರಿಯೇ
ಆವಗಂ ಸರಸ ಕರುಣಾಮೃತದ ಕಲೆಗಳಿಂ
ತೀವಿದೆಳನಗೆಯ ಬೆಳುದಿಂಗಳಂ ಪಸರಿಸುವ
ದೇವಪುರ ಲಕ್ಷ್ಮಿರಮಣನಾಸ್ಯ ಚಂದ್ರನಾನಂದಮಂ ನಮಗೀಯಲಿ

**ಕನ್ನಡ ಜೈಮಿನಿಭಾರತ(೧.೧)**

ಈ ಪದ್ಯದಲ್ಲಿ ಲಕ್ಷ್ಮೀಶನ ಕಾವ್ಯಶಕ್ತಿ ವಾಚಕರ ಮನಸ್ಸನ್ನು ಸೆಳೆಯುತ್ತದೆ. ಲಕ್ಷ್ಮೀಯ ಕಣ್ಣೆಂಬ ಚಕೋರ ಉಬ್ಬಲು, ಭಕ್ತರ ಹೃದಯ ಕನ್ನೈದಿಲೆಯೆಂಬ ಮೊಗ್ಗು ಅರಳಲು, ಜಗತ್ತಿನ ಸಂಪತ್ಸಾಗರವು ಉಕ್ಕಿ ಮೇರೆ ಮೀರಲು ಸದಾ ರಸಪೂರ್ಣವಾದ ಕರುಣಾಮೃತವನ್ನು ಸುರಿಸುವ ಮುಗುಳ್ನಗೆಯ ಬೆಳದಿಂಗಳನ್ನು ಹರಡುವ ಲಕ್ಷ್ಮಿಪತಿಯ ಮುಖಚಂದ್ರ ನಮಗೆ ಆನಂದವನ್ನುಂಟು ಮಾಡಲಿ. ಗದುಗಿನ ಕವಿ ಕುಮಾರವ್ಯಾಸನು ತನ್ನ ಕಾವ್ಯದ ಮೊದಲಿಗೆ ಶ್ರೀ ವೀರನಾರಾಯಣನನ್ನು ಸ್ತುತಿಸಿ ಕಾವ್ಯಾರಂಭ ಮಾಡುತ್ತಾನೆ. ಕನಕರು ತಮ್ಮ ಆರಾಧ್ಯ ದೈವವಾದ ಕಾಗಿನೆಲೆಯ ಆದಿಕೇಶವನನ್ನು ತಮ್ಮ ಕಾವ್ಯಾರಂಭದಲ್ಲಿ ಸ್ಮರಿಸುತ್ತಾರೆ. ಶ್ರೀ ನಿಧಿಯು, ನಿತ್ಯನೂ ನಿಸ್ಸೀಮ ಕೃಪಾಸಾಗರನೂ ರಾಮಣೀಯಕನೂ ಆದ ಪಶ್ಚಿಮರಂಗಧಾಮನಿಗೆ ಎರಗುವೆ ಎಂಬ ಸಾಲುಗಳು ಹದಿಬದೆಯ ಧರ್ಮದಲ್ಲಿದೆ. ಹೀಗೆ ಕನ್ನಡ ಕಾವ್ಯಗಳಲ್ಲಿ

ವೈಷ್ಣವ ಸ್ತುತಿಗಳಲ್ಲಿ ವಿಷ್ಣುವನ್ನು ಹೊಗಳಿ ಆತನ ಮಹಾತ್ಮೆಯನ್ನು ತಿಳಿಸುವ ಪ್ರಾರ್ಥನೆಗಳು ತುಂಬಾ ಇವೆ. ಹರಿಭಕ್ತಾರಾಧಕರ ಸಂಖ್ಯೆಗೇನು ಕೊರತೆಯಿಲ್ಲ.

**ಇತರ ದೇವತಾ ಸ್ತುತಿ ಪದ್ಯಗಳು**

ಇತರ ದೇವತಾ ಸ್ತುತಿ ಪದ್ಯಗಳೆಂದರೆ ಇಷ್ಟದೇವತೆಗಳನ್ನು ಹೊರತುಪಡಿಸಿ ಸ್ತುತಿಸಿರುವ ಪದ್ಯಗಳು. ಇತರ ದೇವತಾ ಪದ್ಯಗಳಲ್ಲಿ ಸರಸ್ವತಿ, ಗಣಪತಿ, ಲಕ್ಷ್ಮಿ, ಮನ್ಮಥ, ಸೂರ್ಯ, ಷಣ್ಮುಖ, ಶಕ್ತಿ, ಕಾಳಿ, ಚಾಮುಂಡಿ ಹೀಗೆ ಹಲವಾರು ದೇವತೆಗಳು ದೊರೆಯುತ್ತಾರೆ. ಸಾಮಾನ್ಯವಾಗಿ ಸರಸ್ವತಿಯನ್ನು ಎಲ್ಲಾ ಕವಿಗಳು ಸ್ತುತಿಸುತ್ತಾರೆ.

ಶಬ್ಧರೂಪವನ್ನು ಧರಿಸಿ ನಿಂತಿರುವ ವಿದ್ಯಾದೇವತೆಯಾದ ಸರಸ್ವತಿಯನ್ನು ಹಲವಾರು ಕವಿಗಳು ತಮ್ಮ ಕಾವ್ಯದ ಪೀಠಿಕಾ ಪ್ರಕರಣಗಳಲ್ಲಿ ಸ್ತುತಿಸಿದ್ದಾರೆ. ದರ್ಪಣ ಕಾರನಾದ ಕೇಶಿರಾಜನು ಸರಸ್ವತಿಯನ್ನು 'ವಾಗ್ದೇವಿ'ಯೆಂದು ಕರೆದು ಅವಳು ಇಳಾವಂದ್ಯಳು ಅದಕ್ಕಾಗಿ ಅವಳ ಪಾದಕ್ಕೆ ನಮಸ್ಕರಿಸುತ್ತೇನೆ ಎನ್ನುತ್ತಾನೆ. ಮಾರ್ಗಕಾರನು ಸರಸ್ವತಿಯು ಚತುರ ಪದರಚನೆ ಮಾಡುವ ವಿಶದವರ್ಣೆಯಾಗಿರುವಳು. ಅವಳು ಹಂಸೀಯ ಭಾವದಿಂದ ನನ್ನ ಮನವೆಂಬ ಸರೋವರದಲ್ಲಿ ನೆಲಸಲಿ ಎಂದಿರುವನು. ಉದಯಾದೀತ್ಯಾಲಂಕಾರದಲ್ಲಿ 'ಸರಸ್ವತಿಯು ಶಬ್ಧ ಸ್ವರೂಪವನ್ನು ಧರಿಸಿರುವ ಸಕಲ ಮಂಗಳ ನಿಳಯೆ' ಎಂದು ವರ್ಣಿಸಲಾಗಿದೆ.

ಗಣಪತಿಯನ್ನು ಹಲವು ಕವಿಗಳು ಸ್ತುತಿಸುತ್ತಾರೆ. ವಿಘ್ನನಿವಾರಕನನ್ನು ಸ್ತುತಿಸುವ ಪದ್ಯಗಳು ವಿನೂತನವಾಗಿವೆ.

ಗಜಮುಖನೆ ಮೆರೆವೇಕದಂತನೆ
ನಿಜ ಗುಣಾನ್ವಿತ ಪರಶುಧಾರನೆ
ರಜತಗಿರಿಯೊಡೆಯನ ಕುಮಾರನೆ ವಿದ್ಯಾವಾರಿದಿಯೇ
ಅಜನು ಹರಿ ರುದ್ರಾದಿಗಳು ನೆರೆ
ಭಜಿಸುತಿಹರನವರತ ನಿನ್ನನು
ತ್ರಿಜಗವಂದಿತ ಗಣಪ ಮಾಳ್ಪುದು ಮತಿಗೆ ಮಂಗಳವ

**ಕರ್ಣಾಟ ಭಾರತ ಕಥಾಮಂಜರಿ**(೧.೪)

ಆನೆಯ ಮುಖವನ್ನು ಹೊಂದಿದವನೆ, ಏಕದಂತನೇ, ಕೈಯಲ್ಲಿ ಕೊಡಲಿಯನ್ನು ಹಿಡಿದವನೆ, ಕೈಲಾಸದ ಒಡೆಯನಾದ ಪರಶಿವನ ಮಗನಾದವನೆ, ವಿದ್ಯಾದಿಪತಿಯೆ, ಬ್ರಹ್ಮ,

ವಿಷ್ಣು, ಮಹೇಶ್ವರರಿಂದ ವಂದಿಸಿಕೊಳ್ಳುವವನೆ, ಮೂರೂ ಲೋಕದ ಜನರಿಂದ ವಂದಿಸಿಕೊಳ್ಳುವ ಗಣಪತಿಯು ನನ್ನ ಮತಿಗೆ ಮಂಗಳವನ್ನುಂಟು ಮಾಡಲಿ ಎನ್ನುವುದರ ಮೂಲಕ ಗಣೇಶ ಸ್ತುತಿಯನ್ನು ಮಾಡುತ್ತಾನೆ. ಹೀಗೆ ಹಲವಾರು ಕಾವ್ಯಗಳ ಪೀಠಿಕೆಯಲ್ಲಿ ಗಣೇಶ ಸ್ತುತಿಗಳು ದೊರೆಯುತ್ತವೆ.

ಮದನನಿಗೆ ಸಂಬಂಧಿಸಿದ ವಿಷಯವನ್ನು ವಸ್ತುವಾಗಿರುವ ಕಾವ್ಯಗಳಲ್ಲಿ ಸ್ವಾಭಾವಿಕವಾಗಿಯೇ ಮನ್ಮಥನ ಸ್ತೋತ್ರವಿದೆ. ಕಾಮನ ಸುಗ್ಗಿಯಾದ ಕಬ್ಬಿಗರ ಕಾವದಲ್ಲಿ ಮನ್ಮಥ ಸ್ತುತಿ ಕಲಾತ್ಮಕ ವಾಗಿ ಮೂಡಿಬಂದಿದೆ.

ಅವನ ಗಾಡಿ ನೋಡಿದವರಂ ಸಲೆ ಸೋಲಿಸುತಿರ್ಪುದುರ್ಕಿನಿಂ
ದಾವನ ಪೂವಿನಂ ಬದಟರಂ ತಲೆವಾಗಿಸುತಿರ್ಪುದೇಟ್ಗೆಂ
ದಾವನ ಪಜ್ಜಳಿಪ್ಪ ಜನಮೆಣ್ದೆಸೆಯೊಳ್ ನೆಲಸಿರ್ಪುದಾತನೀ
ಗಾವಗಮೆನ್ನ ಜಾಣ್ನುಡಿಗೆ ಮೆಯ್ಸಿರಿಯಂ ನನೆವಿಲ್ಲ ಬಲ್ಲಹ

**ಕಬ್ಬಿಗರ ಕಾವ್ಯ(೧.೧)**

ಯಾವನ ಚಲುವು ನೋಡಿದವರನ್ನು ಸೋಲಿಸುವುದೋ ಯಾವನ ಹೂಬಾಣಗಳು ಬಲ್ಲಿದರನ್ನು ತಲೆಬಾಗುವಂತೆ ಮಾಡುತ್ತವೋ, ಯಾರ ಪ್ರಜ್ವಲಿಸುವ ಕೀರ್ತಿಯು ಎಂಟು ದಿಕ್ಕುಗಳಲ್ಲೂ ಹಬ್ಬಿದೆಯೋ, ಆ ನನೆವಿಲ್ಲ ಬಲ್ಲಹ(ಹೂಬಾಣ ಬಿಡುವ ಜಾಣ) ಮನ್ಮಥನು ಜಾಣ್ನುಡಿಗೆ ಮೆಯ್ದಿರಿಯನ್ನು ನೀಡಲಿ.

ಲಕ್ಷ್ಮಿ, ಗಿರಿಜೆ, ಸರಸ್ವತಿಯ ಕೊಂಡಾಟದ ಜೊತೆ ಇವರನ್ನು ಕ್ರಮವಾಗಿ ವಿಷ್ಣು, ಶಿವ, ಬ್ರಹ್ಮರಲ್ಲಿ ಸೇರಿಸಿ ತನ್ನ ಕುಸುಮಾಸ್ತ್ರಗಳಿಂದ ಸೇವೆ ಮಾಡುವ ಭಾವೋದ್ಭವನಾದ ಮನ್ಮಥನು ನಮಗೆ ಸುಖ ಸಂಪದನ್ನು ನೀಡಲಿ ಎಂಬ ಕೋರಿಕೆ ಮದನ ತಿಲಕ (ಚಂದ್ರರಾಜನ)ದಲ್ಲಿದೆ.

ನಾಂದಿ ಪದ್ಯಗಳಲ್ಲಿ ಇಷ್ಟ ದೇವತೆ ಮತ್ತು ಇತರ ದೇವತೆಗಳನ್ನು ಸ್ಮರಣೆ ಮಾಡುವುದರೊಂದಿಗೆ ಜೈನರು ಜಿನಸ್ತುತಿಯನ್ನು ಶೈವರು ಶಿವಸ್ತುತಿಯನ್ನು ವೈಷ್ಣವರು ವಿಷ್ಣು ಸ್ತುತಿಯನ್ನು ಮಾಡುವುದಷ್ಟೆ ಅಲ್ಲ, ಅದರೊಂದಿಗೆ ಧರ್ಮ ಪ್ರಚಾರವೂ ನಾಂದಿ ಪದ್ಯಗಳಿಂದಾಗಿದೆ. ಅಂದು 'ರಾಜಾ ಪ್ರತ್ಯಕ್ಷ ದೇವತಾ' ಎಂಬ ತತ್ವಕ್ಕೆ ಕವಿಗಳು ಕಟ್ಟುಬಿದ್ದವರು, ರಾಜನ ಧರ್ಮವನ್ನು ಕವಿಗಳು ಅತ್ಯಂತ ಗೌರವದಿಂದ ಪಾಲಿಸುತ್ತಿದ್ದರು. ಅಷ್ಟೇ ಅಲ್ಲದೆ

ತಮ್ಮ ಆಶ್ರಯದಾತರಿಗಾಗಿಯೇ ಒಂದೊಂದು ಕಾವ್ಯ ರಚನೆ ಮಾಡಿ, ಕಾವ್ಯಮುಖೇನ ಪ್ರಭು ಸ್ತುತಿಯನ್ನು ಮಾಡಿರುತ್ತಾರೆ.

ಕವಿಗಳು ತಮಗಿಂತ ಪೂರ್ವದ ಕವಿಗಳನ್ನು ಸ್ಮರಣೆ ಮಾಡುವುದು ನಾಂದಿಪದ್ಯಗಳ ಇನ್ನೊಂದು ವಿಶಿಷ್ಟತೆಯಾಗಿದೆ. ಆದಿಕವಿ ಪಂಪನೇ ಪೂರ್ವಕವಿಯಾದ ವ್ಯಾಸರಿಂದ ಕಥಾವಸ್ತುವನ್ನು ಪಡೆದು ಭಾರತವನ್ನು ರಚಿಸುವ ಪೂರ್ವದಲ್ಲಿ "ವ್ಯಾಸ ಮುನೀಂದ್ರರುಂದ್ರ ವಚನಾಮೃತ ವಾರ್ಧಿಯನೀಸುವೆಂ ಕವಿ ವ್ಯಾಸನೆಂಬ ಗರ್ವಮೆನಗಿಲ್ಲ" ಎಂದು ಹೇಳುವುದರ ಮೂಲಕ ಮಹಾಭಾರತದ ಸಂಸ್ಕೃತ ಭಾಷೆಯ ಪೂರ್ವ ಕವಿಗಳನ್ನು ಸ್ಮರಿಸುತ್ತ ವ್ಯಾಸರ ಕಾವ್ಯವನ್ನು ಕನ್ನಡಿಸಲು ಹೊರಟ ನನಗೆ ಗರ್ವವೆನ್ನುವುದಿಲ್ಲವೆಂದು ಸಮರ್ಥಿಸಿಕೊಳ್ಳುತ್ತಾನೆ.

ಕವಿರನ್ನನು ವ್ಯಾಸ, ವಾಲ್ಮಿಕಿ, ಕಾಳಿದಾಸ ಮತ್ತು ಬಾಣಭಟ್ಟರನ್ನು ಸ್ತುತಿಸುತ್ತಾನೆ. ಗದ್ಯ ಮತ್ತು ಪದ್ಯ ಕವಿಗಳನ್ನು, ಸಂಸ್ಕೃತ ಹಾಗೂ ಕನ್ನಡ ಕವಿಗಳನ್ನು ಸ್ಮರಿಸುವುದು ರನ್ನನ ವಿಶೇಷತೆಯಾಗಿದೆ.

ನಾಂದಿ ಪದ್ಯಗಳ ಇನ್ನೊಂದು ವೈಶಿಷ್ಟ್ಯವೆಂದರೆ ಸತ್ಕವಿ ಪ್ರಶಂಸೆ. ಕಾವ್ಯ ರಚಿಸಿ ಪ್ರಸಿದ್ಧರಾದ ಸತ್ಕವಿಗಳನ್ನು ಹಲವು ಕವಿಗಳು ಪ್ರಶಂಸಿಸುತ್ತಾರೆ. ಅದರೊಂದಿಗೆ ಕಾವ್ಯ ಪ್ರತಿಭೆಯಿಲ್ಲದ ಕುಜನರು ಸಜ್ಜನ, ಸತ್ಕವಿ ಮತ್ತು ಸತ್ಕಾವ್ಯಗಳನ್ನು ನಿಂದಿಸುವ ಕುಕವಿ ನಿಂದೆಯು ಇರುತ್ತದೆ. ಅಂದು ಸಮಾಜದಲ್ಲಿ ಸತ್ಕವಿಗಳಷ್ಟೇ ಅಲ್ಲದೆ ಕುಕವಿಗಳೂ ಇದ್ದರೆಂಬುದು ಈ ನಾಂದಿ ಪದ್ಯಗಳಿಂದ ತಿಳಿದುಬರುತ್ತದೆ. ಕುಕವಿನಿಂದೆಯಲ್ಲಿ ಸತ್ಕವಿಗಳನ್ನು ಅರಗಿಳಿಗಳಿಗೆ, ಕೋಗಿಲೆಗಳಿಗೆ, ಕುಕವಿಗಳನ್ನು ಕಾಗೆಗೆ, ಗೂಬೆಗೆ, ಮರಕುಟಿಗ ಹಕ್ಕಿಗೆ ಹೋಲಿಸಲಾಗಿದೆ. ದೋಷವೆಂಬ ಹುಳು ಹುಪ್ಪಟೆಯನ್ನೆ ಹಿಡಿಯುವವರು ಕುಕವಿ ಬಕಗಳು ಎನ್ನುತ್ತಾನೆ. ಪಂಪ, ಕುಕವಿಗೆ ಕಾವ್ಯನಿಂದನೆ ಬಿಟ್ಟರೆ ಬೇರೆ ಕೆಲಸವೇ ಇಲ್ಲ ಎನ್ನುತ್ತಾರೆ. ಕೆಲವು ಕವಿಗಳು

ನಿಂದಿಸುವರ್ ದುರ್ಜನರೆಂ
ಬೊಂದು ಭಯಬೆತ್ತು ಸುಕವಿ ರಚಿಸನೇ ಕೃತಿಯಂ
ಮಂದೇಹದ ಭಯದಿಂದರ
ವಿಂದಸಖಂ ನಿಜಮಯೂಖಮಂ ಪಸರಿಸನೇ

**ರಾಜಶೇಖರ ವಿಳಾಸ(೧.೧೫)**

ಕತ್ತಲೆಯ ಭಯದಿಂದ ಸೂರ್ಯ ಮೂಡದಿರುವನೇ, ಕುಕವಿ ನಿಂದಿಸುವನೆಂದು ಸುಕವಿಗಳು ಕಾವ್ಯ ರಚಿಸದೆ ಇರುವನೇ? ಎನ್ನುವ ಮೂಲಕ ಕುಕವಿಗಳು ಕತ್ತಲೆಯಂತೆ, ಸುಕವಿ ಸೂರ್ಯನಂತೆ, ಸತ್ಕಾವ್ಯವು ಪ್ರಸಿದ್ಧವಾದೊಡನೆ, ಕುಕವಿಯ ಸೊಲ್ಲು ಅಡಗುತ್ತದೆ. ಸುಕವಿಗಳಿಂದ ಕುಕವಿಗಳು ನಾಶವಾಗುವುದು ಖಂಡಿತ ಎನ್ನುತ್ತಾನೆ.

ಪ್ರಾಚೀನ ಕನ್ನಡ ಕಾವ್ಯದಲ್ಲಿ ಕಾವ್ಯದ ಫಲಶ್ರುತಿಯನ್ನು ಹೇಳಿರುವ ಕೆಲವು ನಿದರ್ಶನಗಳು ಕಂಡುಬರುತ್ತವೆ. ಕಾವ್ಯದಿಂದ ಲಾಭವಿದೆ ಎನ್ನುವರೇ ಬಹಳ ಜನ. ಇದೂ ಕೂಡ ನಾಂದಿ ಪದ್ಯಗಳ ವಿಶೇಷತೆಯಾಗಿದೆ.

ಧರೆಯೊಳಗ್ಗದ ರಾಘವೇಂದ್ರನ
ಚರಿತ ಶತಕೋಟಿ ಪ್ರವಿಸ್ತರ
ವರ ಮಹಾಚಾರಿತ್ರ ರಚನಾ ಸುಪ್ರಬಂಧದಲಿ
ಪರಮ ಭಕ್ತಿಯೊಳಾವ ನೊಂದ
ಕ್ಷರವು ಕೇಳ್ದ ನರಂಗೆ ಪಾತಕ
ಹರೆವುದೆಂದು ಕುಮಾರರಿಗೆ ವಾಲ್ಮೀಕಿ ಮುನಿ ನುಡಿದ

**ತೊರವೆ ರಾಮಾಯಣ(೧.೧೩)(ಕುಮಾರ ವಾಲ್ಮೀಕಿ)**

ರಾಘವನ ಚರಿತ್ರೆಯನ್ನು ಕೇಳಿದ ಮನುಷ್ಯನ ಪಾತಕಗಳು ನಾಶವಾಗುವುದೆಂದು ವಾಲ್ಮೀಕಿ ಮಹರ್ಷಿ ತನ್ನ ಶಿಷ್ಯರಿಗೆ ಹೇಳಿದ ಸಂದರ್ಭವನ್ನು ಕವಿ ಕುಮಾರ ವಾಲ್ಮೀಕಿ ಕಾವ್ಯದಿಂದಾಗುವ ಫಲಶ್ರುತಿಯನ್ನು ವ್ಯಕ್ತಪಡಿಸುತ್ತಾನೆ.

ತಿಳಿಯ ಹೇಳುವೆ ಕೃಷ್ಣ ಕಥೆಯನು
ಇಳೆಯ ಜಾಣರು ಮೆಚ್ಚುವಂತಿರೆ
ನೆಲೆಗೆ ಪಂಚಮ ಶ್ರುತಿಯನೊರೆವೆನು ಕೃಷ್ಣ ಮೆಚ್ಚಲಿಕೆ
ಹಲವು ಜನ್ಮದ ಪಾಪರಾಶಿಯ
ತೊಳೆವ ಜಲವಿದು ಶ್ರೀಮದಾಗಮ
ಕುಲಕೆ ನಾಯಕ ಭಾರತಾಕೃತಿ ಪಂಚಮ ಶ್ರುತಿಯ

**ಕುಮಾರವ್ಯಾಸ ಭಾರತ(೧.೧೩)**

ಈ ಪದ್ಯದಲ್ಲಿ ಕಾವ್ಯದ ಫಲಶ್ರುತಿಯನ್ನು ತಿಳಿಸುವುದಲ್ಲದೆ ತಿಳಿಯ ಹೇಳುವೆ. ಕೃಷ್ಣ ಕಥೆಯನ್ನು ಎಂಬ ವಾಕ್ಯದಿಂದ ಹಿಂದಿನ ಮಹಾಭಾರತದ ಪಂಪ ರತ್ನಾದಿಗಳ ಕಾವ್ಯಗಳು

ಯಾರಿಗೂ ತಿಳಿದಿಲ್ಲ. ನಾನು ತಿಳಿಯುವಂತೆ ಹೇಳುವೇನೆಂಬ ಆತ್ಮ ಪ್ರಶಂಸೆಯು ಕಂಡುಬರುತ್ತದೆ. ಕಾವ್ಯ ತಿಳಿಯುವಂತೆ ಹೇಳುವುದು ಬಹುಮುಖ್ಯವಾದುದು. ತಿಳಿಯದ ಕಾವ್ಯದಿಂದಾಗುವ ಉಪಯೋಗವಾದರೂ ಏನು? ಇಳೆಯಲ್ಲಿ ಜಾಣರು ಎಂಬ ಪದವು ಕರ್ನಾಟಕದ ಜನರು ಜಾಣರು ಅವರು ಮೆಚ್ಚುವಂತೆ ಕಾವ್ಯ ರಚಿಸುತ್ತೇನೆಂಬ ಆತ್ಮಪ್ರಶಂಸೆ ಜೊತೆಗೆ ಪಾಪಿಗಳ ಪಾಪವನ್ನು ಪರಿಹರಿಸುವ ಒಂದು ವಿಶೇಷ ಶಕ್ತಿ ಆ ಕಾವ್ಯವಾಹಿನಿಯಲ್ಲಿ ಇತ್ತೆಂದು ಕಂಡುಬರುತ್ತದೆ. ಅಥವಾ ತಮ್ಮ ಕಾವ್ಯವನ್ನು ಎಲ್ಲರೂ ಓದಲೆಂಬ ಉದ್ದೇಶದಿಂದ ಈ ರೀತಿ ಹೇಳಿದರೋ ತಿಳಿಯದು. ಒಟ್ಟಾರೆ ಕನ್ನಡ ಕಾವ್ಯದ ನಾಂದಿ ಪದ್ಯಗಳು ವಿಶಿಷ್ಟವಾಗಿದ್ದು, ಕಾವ್ಯ ಭಾಗಕ್ಕಿಂತ ಭಿನ್ನವಾಗಿವೆ ಎಂಬಂತೆ ಕಂಡುಬರುತ್ತವೆ.

**ಅಡಿಟಿಪ್ಪಣಿ**

೧. ಮಹದೇವಯ್ಯ ಟಿ.ಆರ್., ನಾಂದಿ, ಪು.೨೭

ಅಧ್ಯಾಯ ಒಂಬತ್ತು

# ಸಂಸ್ಕೃತ ಮತ್ತು ಕನ್ನಡ ಕಾವ್ಯಗಳ ನಾಂದಿ ಪದ್ಯಗಳ ತೌಲನಿಕ ಅಧ್ಯಯನ

**ಭಾಗ ೧**

ಸಂಸ್ಕೃತ ಮತ್ತು ಕನ್ನಡ ಸಾಹಿತ್ಯದ ಸಂಬಂಧ ಪ್ರಾಚೀನ ಕಾಲದಿಂದಲೇ ಮುಂದುವರಿದುಕೊಂಡು ಬಂದಿದೆ. ಕನ್ನಡ ಭಾಷಾ ಕವಿಗಳು ದ್ವಿಭಾಷಾ ಪಂಡಿತರಾಗಿದ್ದರು. ಹಾಗೂ ಬಹುಭಾಷಾ ಪ್ರಭುತ್ವವನ್ನು ಹೊಂದಿದ್ದರು. ಸಂಸ್ಕೃತ ಭಾಷೆ ಮತ್ತು ಸಾಹಿತ್ಯಕ್ಕೆ ತನ್ನದೇ ಆದ ವಿಶಿಷ್ಟತೆ ಇರುವಂತೆ, ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೂ ಪಾರಂಪರಿಕವಾದ ವಿಶೇಷತೆ ಇದೆ.

ಕನ್ನಡ ಕವಿಗಳಿಗೆ ಕನ್ನಡ ಭಾಷೆಯ ಪದಗಳಷ್ಟೇ ಸಾಕಾಗಿರಲಿಲ್ಲ. ಸಂಸ್ಕೃತದಲ್ಲೂ ಪಾಂಡಿತ್ಯವಿದ್ದ ಕಾರಣ ಹೆಚ್ಚು ಸಂಸ್ಕೃತ ಭೂಯಿಷ್ಠವಾದ ಕಾವ್ಯಗಳನ್ನು ರಚಿಸಿ ವಿದ್ವಾಂಸರೆನಿಸಿಕೊಂಡರು. ಕನ್ನಡ ಭಾಷೆ ಹಾಗೂ ಸಾಹಿತ್ಯ ಹಲವು ಭಾಷೆಗಳಿಂದ ಶಬ್ದಗಳನ್ನು ಸ್ವೀಕರಿಸಿದ್ದರೂ, ತನ್ನದೆಯಾದ ವಿಶಿಷ್ಟತೆಯನ್ನು ಉಳಿಸಿಕೊಂಡು ಬಂದಿದೆ. ಸಂಸ್ಕೃತ ಭಾಷಾ ಮಹಾಪೂರದ ಸಂದರ್ಭದಲ್ಲಿಯೂ ದೇಶಿಯ ಸತ್ವದ ಮೂಲಕ ಹೊರಬಂದ ಸಾಹಿತ್ಯವೇ ಕನ್ನಡ ಸಾಹಿತ್ಯವೆನಿಸಿತು.

ಕನ್ನಡ ಸಾಹಿತ್ಯ ಸಂಸ್ಕೃತದ ಅನುಕರಣ ಅಥವಾ ಅನುಸರಣವಾಗದೆ. ತನ್ನದೇಯಾದ ಪರಂಪರೆಯನ್ನು ಪಡೆದು, ಧರ್ಮ ಮತ್ತು ಕಾವ್ಯಧರ್ಮವನ್ನೊಳಗೊಂಡು ಲೌಕಿಕ ಮತ್ತು ಆಗಮಿಕ ಕಾವ್ಯ ಪದ್ಧತಿಯನ್ನೊಳಗೊಂಡಿದೆ. ಕನ್ನಡ ಭಾಷೆ ಮತ್ತು ಸಾಹಿತ್ಯಗಳು ಸಮೃದ್ಧಿ ಹೊಂದಲು ಕಾರಣ ಕನ್ನಡ ಕವಿಗಳು ಹೊಂದಿದ ಪ್ರಾದೇಶಿಕ ಲಕ್ಷಣ ಹಾಗೂ ಅನ್ಯಭಾಷಾ ಪ್ರೇರಣೆಯೇ ಕಾರಣವಾಗಿದೆ.

ಕನ್ನಡ ಸಾಹಿತ್ಯದಲ್ಲಿ ಬಂದ ಮೊಟ್ಟಮೊದಲ ರೂಪವೇ ಚಂಪೂ ಸಾಹಿತ್ಯ ಪ್ರಕಾರ. ನಂತರ ವಚನ ಸಾಹಿತ್ಯ ಪ್ರಚಲಿತವಾಯಿತು. ಚಂಪೂ ಸಾಹಿತ್ಯ ರೂಪವು ಗದ್ಯ-ಪದ್ಯ ಮಿಶ್ರಿತವಾಗಿದ್ದರೆ, ವಚನ ಸಾಹಿತ್ಯವು ಮಾತಿನ ರೂಪ ಹೊಂದಿದ ಸಾಹಿತ್ಯ ಪ್ರಕಾರವಾಗಿದೆ. ನಂತರ ಬಂದ ರಗಳೆ, ಷಟ್ಪದಿ, ತ್ರಿಪದಿ ಸಾಂಗತ್ಯ ಕಾವ್ಯಗಳು ಸಂಸ್ಕೃತ, ಸಾಹಿತ್ಯ ಪ್ರಕಾರದಲ್ಲಿಲ್ಲ. ಕನ್ನಡ ಸಾಹಿತ್ಯ ಚರಿತ್ರೆಯಲ್ಲೇ ಚಂಪೂ ಸಾಹಿತ್ಯ ಪ್ರಕಾರ ವಿಶಿಷ್ಟ ರೂಪದ ಪ್ರಕಾರವಾಗಿದ್ದು, ಪಂಡಿತರಿಗಾಗಿಯೇ ಈ ಸಾಹಿತ್ಯ ರೂಪ ಹುಟ್ಟಿಬಂದಿತೇನೋ ಎನ್ನುವಷ್ಟರ ಮಟ್ಟಿಗೆ ಇದರ ಜನಪ್ರಿಯತೆ ಹೆಚ್ಚಿತು. ಗದ್ಯ-ಪದ್ಯ ಮಿಶ್ರಿತವಾದ ಹಾಗೂ ಸಂಸ್ಕೃತ ಭೂಯಿಷ್ಠವಾದ ಚಂಪೂ ಕಾವ್ಯವನ್ನು ರಚಿಸದ ಹಾಗೂ ಬರೀ ಕನ್ನಡ ಭಾಷೆಯ ಪದ ಪ್ರಯೋಗ ಮಾಡಿ, ಕಾವ್ಯ ರಚನೆ ಮಡಿದ ಕವಿಗಳನ್ನು ಕೇವಲವಾಗಿ ಕಾಣುವ ಕಾಲವೊಂದಿತ್ತು. ಹದಿಮೂರನೇ ಶತಮಾನದ ಹರಿಹರದೇವನೇ ಇದಕ್ಕೆ ಉತ್ತಮ ಉದಾಹರಣೆ. ಹರಿಹರನು 'ರಗಳೆ' ಎಂಬ ಛಂದಸ್ಸಿನಲ್ಲಿ ನೂರಾರು ರಗಳೆಗಳನ್ನು ರಚಿಸಿಯೂ ಜನರ ನಿಂದೆಗೆ ಗುರಿಯಾಗಿ 'ರಗಳೆ ಕವಿ' ಎನಿಸಿಕೊಂಡ. ನಂತರ ತಾನು ಮನಸ್ಸು ಮಾಡಿದರೆ ಚಂಪೂ ಕಾವ್ಯವನ್ನು ರಚಿಸಬಲ್ಲೆನೆಂದು ಜನರ ಬಾಯಿ ಮುಚ್ಚಿಸಲು 'ಗಿರಿಜಾ ಕಲ್ಯಾಣ' ಎಂಬ ಚಂಪೂ ಕಾವ್ಯ ರಚಿಸಿದ ವಿಷಯ ಸಾಹಿತ್ಯ ಚರಿತ್ರೆ ತಿಳಿಸುತ್ತದೆ. ಹರಿಹರನಿಗಿಂತ ಪೂರ್ವದಲ್ಲಿ ಸಂಸ್ಕೃತ ಪದಗಳನ್ನು, ಕನ್ನಡದಲ್ಲಿ ಪ್ರಯೋಗಿಸಿ ಕಾವ್ಯ ರಚನೆ ಮಾಡುವುದು ಕನ್ನಡ ಕವಿಗಳ ವಿಶೇಷ ಲಕ್ಷಣವಾಗಿತ್ತು.

ಚಂಪೂ ಕಾವ್ಯದ ಆರಂಭ ಕಾಲದಲ್ಲಿ ಹೆಚ್ಚಾಗಿ ಮಹಾಭಾರತದ ಕಥಾವಸ್ತುವನ್ನು ಆಯ್ದುಕೊಂಡು ಕಾವ್ಯ ರಚನೆ ಮಾಡಿದವರು ಪಂಪ ರನ್ನಾದಿಗಳು. 'ಸಮಸ್ತ ಭಾರತವನ್ನು ಮೆಯ್ಗಡಲೀಯದೆ ಹೇಳುವೆನೆಂದು ಹೊರಟ ಪಂಪನ ಜೊತೆಗೆ, ಸಿಂಹಾವಲೋಕನ ತಂತ್ರವನ್ನು ಬಳಸಿ ಖ್ಯಾತಿವೆತ್ತ ಕವಿ ರನ್ನನು ಭಾರತದ ಒಂದೇ ಅಧ್ಯಾಯವನ್ನು ರಚಿಸಿ ಪ್ರಸಿದ್ಧನಾದನು. ಪುರಾಣ ವಸ್ತುವನ್ನು ಬಳಸಿ ಕಾವ್ಯ ರಚಿಸುವ ಪಂಪ, ರನ್ನಾದಿಗಳು ಕಾವ್ಯೋದ್ದೇಶ ಸಂಸ್ಕೃತ ಕಾವ್ಯ ಪರಂಪರೆಗೆ ಅಪರಿಚಿತವಾದುದು.

ಕನ್ನಡ ಕವಿಗಳು ಕಂಡುಹಿಡಿದು ಕಾವ್ಯದ ಮತ್ತೊಂದು ತಂತ್ರವೆಂದರೆ ಮಾರ್ಗ ಮತ್ತು ದೇಸಿ, ಪಂಪ, ಪೊನ್ನ, ರನ್ನ, ನಾಗಚಂದ್ರಾದಿಗಳು ಮಾರ್ಗ ತಂತ್ರವನ್ನು ಬಳಸಿದರೆ ಆಂಡಯ್ಯ, ನಯಸೇನ, ನಂಜುಂಡನಂತಹ ಕವಿಗಳು ತಮ್ಮ ಕಾವ್ಯಗಳಲ್ಲಿ ದೇಸಿ ತಂತ್ರವನ್ನು ಪ್ರಯೋಗಿಸಿದರು, ವಚನಕಾರರು ವಚನಗಳಲ್ಲಿ, ದಾಸರು ಕೀರ್ತನೆಗಳಲ್ಲಿ ಕನ್ನಡದ ಸತ್ವವನ್ನು

ಮೈಗೂಡಿಸಿಕೊಂಡು ಕಾವ್ಯರಚನೆ ಮಾಡಿರುವರು. "ಪಶ್ಚಿಮದ ಕಾವ್ಯ ಪರಂಪರೆಯಲ್ಲಿ ಹೋಮರ್, ವರ್ಜಿಲ್, ಮಿಲ್ಟನ್ ಮೊದಲಾದ ಮಹಾಕವಿಗಳು ತಮ್ಮ ಕಾವ್ಯದ ಸಂದರ್ಭಗಳಲ್ಲಿ ಕಾವ್ಯ ಶಕ್ತಿಯನ್ನು ಕಾವ್ಯದೇವಿ(Muse) ಎಂದು ಭಾವಿಸಿರುವ ಹಾಗೆ ಭಾರತೀಯ ಪರಿಸರದಲ್ಲಿ ನಮ್ಮವರು ಅದನ್ನು ಸರಸ್ವತಿ ಎಂದು ಕಲ್ಪಿಸಿಕೊಂಡಿದ್ದಾರೆ. ಆದರೆ ನಮಗೆ ಪರಿಚಿತವಾಗಿರುವ ಈ ಸರಸ್ವತಿಯನ್ನು ಕುರಿತು ವಾಲ್ಮೀಕಿ, ವ್ಯಾಸ, ಕಾಳಿದಾಸ ಮುಂತಾದ ಸಂಸ್ಕೃತ ಕವಿಗಳು ತಮ್ಮ ಕಾವ್ಯಾರಂಭದಲ್ಲಿ ಪ್ರಾರ್ಥಿಸಿಯೇ ಇಲ್ಲವೆನ್ನುವುದು ಒಂದು ಆಶ್ಚರ್ಯದ ಸಂಗತಿಯಾಗಿದೆ."[೧] ಆದರೆ ಅತಿ ವಿರಳವಾಗಿ ಸಂಸ್ಕೃತದಲ್ಲಿ ಸರಸ್ವತಿ ಸ್ತುತಿ ಇರುವುದು ಕಂಡುಬರುತ್ತದೆ. ಕವಿರಾಜಮಾರ್ಗದ ಪ್ರಾರ್ಥನಾ ಪದ್ಯದ ಮೇಲೆ ದಂಡಿಯ ಕಾವ್ಯದರ್ಶದ ಪ್ರೇರಣೆಯಿರುವುದು ಸ್ಪಷ್ಟವಾಗಿದೆ. ಕವಿರಾಜಮಾರ್ಗವು ದಂಡಿಯ ಕಾವ್ಯಾ ದರ್ಶದಿಂದ ಪ್ರೇರಣೆಗೊಂಡಿರುವುದಾದರೂ ಮೂಲ ಕೃತಿಗೆ ದಕ್ಕೆಯಾಗದಂತೆ, ವ್ಯತ್ಯಾಸಗೊಳಿಸಿದ್ದಾನೆ. ಕವಿ ರಾಜಮಾರ್ಗವು ರಾಷ್ಟ್ರಕೂಟ ದೊರೆಯಾದ ಅಮೋಘವರ್ಷ ನೃಪತುಂಗನ ಆಸ್ಥಾನ ಕವಿಯಾದ ಶ್ರೀವಿಜಯನಿಂದ ರಚಿಸಲ್ಪಟ್ಟಿದೆ ಎಂಬ ಅಂಶ ದೃಢವಾಗಿದೆ.

ಕಾವ್ಯಾದರ್ಶ : ಚತುರ್ಮುಖ ಮುಖಾಂಭೋಜವನಹಂಸ
ವಧೂರ್ಮಮ ಮಾನಸೇ ರಮಂತಾಂ
ನಿತ್ಯಂ ಸರ್ವಶುಕ್ಲಾ ಸರಸ್ವತೀ॥

ಬ್ರಹ್ಮನ ಮುಖ ಕಮಲವನದಲ್ಲಿಯ ಹಂಸ ವಧುವೂ ತನ್ನದೇಯಾದ ಶುಭ್ರವರ್ಣವನ್ನು ಧರಿಸಿದ ಸರಸ್ವತಿಯೂ ತನ್ನ ಮಾನಸದಲ್ಲಿ ನಿತ್ಯವೂ ನಿಲಿಯುತ್ತಿರಲಿ, ಎಂದು ಪ್ರಾರ್ಥಿಸುತ್ತಾನೆ. ಆದರೆ ಕವಿರಾಜಮಾರ್ಗದಲ್ಲಿ ಸರಸ್ವತಿಯ ಸ್ತುತಿಯು ಮೂಲ ಕೃತಿಗಿಂತ ಸ್ವಲ್ಪ ವ್ಯತ್ಯಾಸವಾಗಿದೆ.

ಕವಿರಾಜಮಾರ್ಗ: ಶ್ರೀ ವಿಶದ ವರ್ಣೆ ಮಧುರಾ
ರಾವೋಚಿತೆ ಚತುರೆ ರುಚಿರ ಪದರಚನೆ ಚಿರಂ
ದೇವಿ ಸರಸ್ವತಿ ಹಂಸಿ
ಭಾವದೇ ನೆಲೆಗೊಳ್ಗೆ ಕೂರ್ತುಮನ್ಮಾನಸದೊಳ್ (೧.೩)

ಅಂದರೆ ಬಿಳಿ ಬಣ್ಣದವಳೂ, ಮಧುರವಾದ ಧ್ವನಿಯಿಂದ ಉಚಿತವಾಗಿ ಮಾತನಾಡು ವವಳೂ, ಚತುರ ಮತ್ತು ಸುಂದರವಾದ ಪಾದವನ್ನು ಹೊಂದಿದವಳೂ, ಚಿರಂತನವಾಗಿ

ನೆಲಸಿರುವವಳೂ ಆದ ಸರಸ್ವತಿಯು ನನ್ನ ಮನಸ್ಸೆಂಬ ಸರೋವರದಲ್ಲಿ ಹಂಸಿಯ ಭಾವದಿಂದ, ಸದಾ ನೆಲಸಿರಲಿ ಎಂಬ ವ್ಯತ್ಯಾಸ ಕಂಡುಬರುತ್ತದೆ.

ಸರಸ್ವತಿ ಸದಾಕಾಲ ಬ್ರಹ್ಮನ ಮುಖ ಕಮಲದಲ್ಲಿ ನೆಲಸಿರುವವಳು ಎಂದು ಕಾವ್ಯಾದರ್ಶನದಲ್ಲಿದ್ದರೆ, ಕವಿರಾಜ ಮಾರ್ಗದಲ್ಲಿ ಸರಸ್ವತಿಯು ಹಂಸೀಭಾವದವಳಾಗಿದ್ದಾಳೆ. (ಸ್ವಚ್ಛಮನಸ್ಸಿನವಳು) ದಂಡಿಯ ಕಾವ್ಯದಲ್ಲಿ ಹಂಸವಧೂವಾದ ಸರಸ್ವತಿಯು ಮಾರ್ಗಕಾರನ್ನಲಿ ಹಂಸೀಭಾವ ಹೊಂದಿದವಳೂ ಎಂಬ ಕಲ್ಪನೆಯನ್ನು ಗಮನಿಸಿದರೆ, ಕಾವ್ಯಾದರ್ಶನ ಪ್ರಭಾವ ಮಾರ್ಗಕಾರನ ಮೇಲೆ ಆಗಿದೆ ಎನ್ನುವುದನ್ನು ಗುರುತಿಸಲಾಗಿದೆ. ಹಾಗಾಗಿ ಕವಿರಾಜಮಾರ್ಗ ಕಾವ್ಯಾದರ್ಶನ ಭಾಗಶಃ ಅನುವಾದವಾಗಿದೆ ಎಂಬುದನ್ನು ಸಾಮ್ಯತೆಗಳಿಂದ ಗುರುತಿಸಬಹುದು.

ಕವಿರಾಜ ಮಾರ್ಗದ ನಂತರ ಬರುವ ಮತ್ತೊಂದು ಕಾವ್ಯ ವಿಕ್ರಮಾರ್ಜನ ವಿಜಯ ಅಥವಾ ಪಂಪಭಾರತ, ಪಂಪನ ಮೇಲೆ ಪ್ರಭಾವ ಬೀರಿದ ಸಂಸ್ಕೃತ ಕವಿ ವ್ಯಾಸ ಮಹರ್ಷಿಗಳು, ಪಂಪನು ತನ್ನ ಭಾರತವನ್ನು ರಚಿಸಲು ಕೇವಲ ವ್ಯಾಸರ ಮಹಾಭಾರತವನ್ನಷ್ಟೆ ಅಲ್ಲದೆ ಇನ್ನುಳಿದ ಅನೇಕ ಸಂಸ್ಕೃತ ಕಾವ್ಯಗಳನ್ನು ಅಧ್ಯಯನ ಮಾಡಿದ್ದನೆಂದು ಕಾಣುತ್ತದೆ. ನಿದರ್ಶನಕ್ಕೆ ಹರ್ಷ, ಬಾಣ, ಕಾಳಿದಾಸ ಬಾರವಿ ಮುಂತಾದ ಕವಿಕಾವ್ಯಗಳ ವಿಚಾರಗಳನ್ನು ಬಲ್ಲವನಾಗಿದ್ದಾನೆ. ಆದರೆ ನೇರವಾಗಿ ಅತ್ಯಂತ ಪ್ರಭಾವ ಬೀರಿದ ಕವಿಗಳು ವ್ಯಾಸರೇ ವ್ಯಾಸ ಭಾರತದಲ್ಲಿರುವ ನಾಂದಿ ಪದ್ಯದಲ್ಲಿ ನಾರಾಯಣನಿಗೆ, ನರನಿಗೆ(ಅರ್ಜುನ) ಸರಸ್ವತಿದೇವಿಗೆ ನಮಸ್ಕರಿಸಿ (ಮಹಾಭಾರತಕ್ಕೆ ಜಯ ಎಂದು ಕರೆಯುತ್ತಾರೆ.) ಕಾವ್ಯವನ್ನು ಆರಂಭಿಸುತ್ತಾರೆ.

'ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್।
ದೇವಿಂ ಸರಸ್ವತೀಂ ಚೈವ ತತೋ ಜಯಮುದಿರಯೇತ್॥

**ಶ್ರೀಮನ್ಮಹಾಭಾರತ(ಸಂ.೧)**

ಮಹಾಭಾರತದ ಮೂಲ ಸೂತ್ರಧಾರಿಯೇ ಶ್ರೀಕೃಷ್ಣ ಅಥವಾ ನಾರಾಯಣ ಅದಕ್ಕಾಗಿಯೇ ಕಾವ್ಯದ ಪ್ರಾರಂಭದಲ್ಲೆ ಸ್ತುತಿಸುತ್ತಾನೆ. ನಂತರ ಕಾವ್ಯನಾಯಕ ಧರ್ಮರಾಯನಾಗಿದ್ದರೂ, ಮಧ್ಯಮ ಪಾಂಡವನಾದ ಅರ್ಜುನನಿಗೆ ನಮಸ್ಕರಿಸುತ್ತಾನೆ. ಕಾರಣ ಪಾಂಡವರಲ್ಲಿಯೇ ನಾರಾಯಣನಿಗೆ ಅತಿ ಪ್ರಿಯನಾದವನು ಅರ್ಜುನ. ಪಂಪನಿಗೆ ಅರ್ಜುನ ಪ್ರಿಯನಾದಂತೆ ವ್ಯಾಸರಿಗೂ ಅರ್ಜುನನೆಂದರೆ ಇಷ್ಟವೇ. ನಂತರ ಕಾವ್ಯವನ್ನು ಮುನ್ನಡೆಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುವ ಸರಸ್ವತಿದೇವಿಯನ್ನು ಸ್ತುತಿಸುತ್ತಾನೆ. ಹೀಗೆ

ವ್ಯಾಸರು ತಮ್ಮ ಒಂದೇ ಪದ್ಯದಲ್ಲಿ ನರ, ನಾರಾಯಣ ಹಾಗೂ ಸರಸ್ವತಿಯನ್ನು ಸ್ತುತಿಸಿದ್ದಾರೆ. ಆನಂತರ ಜಯವನ್ನು ಹೇಳಬೇಕು ಎನ್ನುವುದರ ಮೂಲಕ ಮಹಾಭಾರತವನ್ನು ಹೇಳಿದ್ದಾರೆ. ವಿನಃ ಅವರು ಬರೆದಿಲ್ಲವೆಂದು ಅರ್ಥವಾಗುತ್ತದೆ. ಮಹಾಭಾರತದ ಬರವಣಿಗೆಯನ್ನು ಗಣಪತಿ ಮಾಡಿದನೆಂದು ಹಲವು ಪುರಾಣ ಕಾವ್ಯಗಳು ತಿಳಿಸುತ್ತವೆ. "ಜೀವಾತ್ಮ ಪರಮಾತ್ಮ ಸ್ವರೂಪದಿಂದ ನರ-ನಾರಾಯಣರಿಗೂ, ಅವರ ನಿಜ ಸ್ವರೂಪದಿಂದ ಪ್ರಕಟಿಸುವ ದಿವ್ಯವಾಣಿಯಾದ ಸರಸ್ವತಿಗೂ ಅದನ್ನು ದಯಪಾಲಿಸಿದ ವೇದವ್ಯಾಸ ಮುನಿಗಳಿಗೂ ನಮಸ್ಕಾರ ಮಾಡಿದರೆ ಧರ್ಮ ವಿಜಯ ಮತ್ತು ಆತ್ಮವಿಜಯಗಳು ಸಿದ್ಧಿಸುತ್ತವೆ." ವ್ಯಾಸರ ಕಾವ್ಯದಿಂದ ಪ್ರಭಾವಿತನಾದ ಪಂಪನ ಕಾವ್ಯದಲ್ಲಿ ಪ್ರಾರಂಭದ ಪದ್ಯ ಆಶ್ರಯದಾತನಾದ ಇಮ್ಮಡಿ ಅರಿಕೇಸರಿ ಮತ್ತು ಉದಾತ್ತ ನಾರಾಯಣನ ಸ್ತುತಿಯನ್ನೊಳಗೊಂಡಿದೆ.

ಶ್ರೀಯನರಾತಿ ಸಾಧನ ಪಯೋನಿಧಿಯೊಳ್ ಪಡೆದು ಧರಿತ್ರಿಯಂ।
ಜೀಯನೆ ಬೇಡಿಕೊಳ್ಳದೆ ವಿರೋಧಿ ನರೇಂದ್ರರನೊತ್ತಿಕೊಂಡು ಮಾ॥
ತ್ಮೀಯ ಸುಪುಷ್ಪ ವೃಷ್ಟಿಯ ನೊಡಂಬಡೆ ತಾಳ್ದಿಯುಮಿಂತುದಾತ್ತನಾ।
ರಾಯಣನಾದ ದೇವನೆಮಗೀಗರಿಕೇಸರಿ ಸೌಖ್ಯಕೋಟಿಯಂ॥

**ಪಂಪಭಾರತ(೧.೧)**

ಸಮುದ್ರ ಮಥನ ಕಾಲದಲ್ಲಿ ಉದ್ಭವಿಸಿದ ಲಕ್ಷ್ಮೀಯನ್ನು ಶ್ರಮವಿಲ್ಲದೇ ಪಡೆದು ಸುಪುಷ್ಪ ಪಟ್ಟವೆಂಬ ಸಾಮಾನ್ಯ ಶಿರೋಭೂಷಣವನ್ನು ಪಡೆದ ನಾರಾಯಣನಂತಲ್ಲದೆ, ಶತ್ರು ರಾಜರನ್ನು ಮೆಟ್ಟಿನಿಂತು ಭೂಮಿಯನ್ನು ಪಡೆದು ಉದಾತ್ತ ನಾರಾಯಣ ನೆನಿಸಿಕೊಂಡಿರುವ, ದೇವ ಅರಿಕೇಸರಿಯು ನಮಗೆ ಸೌಖ್ಯವನ್ನು ದಯಪಾಲಿಸಲಿ ಇದು ಪದ್ಯದ ಭಾವಾರ್ಥವಾಗಿದೆ.

ವ್ಯಾಸರಲ್ಲೂ ನಾರಾಯಣ ಸ್ತುತಿ ಹಾಗೂ ನರನ ಸ್ತುತಿಗಳಿದ್ದರೆ, ಪಂಪನಲ್ಲಿಯೂ ಆಶ್ರಯದಾತನಾದ ಅರಿಕೇಸರಿಯನ್ನು ನಾರಾಯಣನೊಂದಿಗೆ ಅಭೇದ ಕಲ್ಪಿಸಿ ವಿಶೇಷವಾಗಿ ಸ್ತುತಿಸಲಾಗಿದೆ. ಆದರೆ ಈ ಅಭೇದ ಕಲ್ಪನೆಯಿಂದ ಸ್ತುತಿಸುವ ಕಲೆ ಸಂಸ್ಕೃತದಲಿಲ್ಲ. ಹಾಗಾಗಿ ವ್ಯಾಸರು ಅಭೇದ ಕಲ್ಪನೆ ಮಾಡಿಲ್ಲ. ಆದರೆ ಕನ್ನಡದಲ್ಲಿ ಒಂದೊಂದು ಪದ್ಯದಲ್ಲಿ ಒಂದೇ ದೇವರನ್ನು ಸ್ತುತಿಸಿದರೆ, ಸಂಸ್ಕೃತದಲ್ಲಿ ಒಂದೇ ಪದ್ಯದಲ್ಲಿ ಮೂರು, ನಾಲ್ಕು ದೇವತೆಗಳನ್ನು ಏಕಕಾಲಕ್ಕೆ ಸ್ತುತಿಸುವುದು ಮಾತ್ರ ವಿಶೇಷವಾಗಿದೆ.

ಪಂಪನ ಕಾವ್ಯಗಳಲ್ಲಿ ವೈದಿಕ ಸಾಹಿತ್ಯಕ್ಕಿಂತ ಭಿನ್ನವಾದ ಸರಸ್ವತಿಯ ಸ್ತುತಿಯಿದೆ. 'ಆದಿಪುರಾಣ'ದ ಪದ್ಯದಲ್ಲಿ ಸರಸ್ವತಿಯ ಸ್ತುತಿ ಈ ರೀತಿಯಾಗಿದೆ.

ಪರಮ ಜಿನೇಂದ್ರವಾಣಿಯೇ ಸರಸ್ವತಿ ಬೇಱದು ಪೆಣ್ಗರೂಪಮಂ
ಧರಿಯಿಸಿ ನಿಂದುದಲ್ತದುವೆ ಭಾವಿಸಿಯೋದುವ ಕೇಳ್ವಪೊಜಿಪಾ।
ದರಿಸುವ ಭವ್ಯ ಕೋಟಿಗೆ ನಿರಂತರ ಸೌಖ್ಯಮ ನೀವುದಾನದ।
ರ್ಕೆರೆದಪೆನಾ ಮಾಟ್ಕೆಮಗಿಲ್ಲಿಯ ವಾಗ್ವಿಳಾಸಮಂ॥

**ಆದಿಪುರಾಣಂ(೧.೯)**

ಸರಸ್ವತಿಯು ವೈದಿಕ ಕಾವ್ಯ ಸಂಪ್ರದಾಯದಲ್ಲಿ ಹೆಣ್ಣು ರೂಪ ಧರಿಸಿ ನಿಂತ ದೇವತೆಯಾದರೆ, ಜೈನ ಸಂಪ್ರದಾಯದಲ್ಲಿ 'ಪರಮ ಜಿನೇಂದ್ರವಾಣಿಯೇ ಸರಸ್ವತಿ' ಎನ್ನುವುದರ ಮೂಲಕ ಸರಸ್ವತಿ ಬೇರೆಯಲ್ಲ, ಜಿನನವಾಣಿ ಬೇರೆಯಲ್ಲ ಎಂಬ ಕಲ್ಪನೆ ಮಾಡಲಾಗಿದೆ. ವೈದಿಕ ಕಾವ್ಯಕ್ಕಿಂತ ಭಿನ್ನವಾದ ಸರಸ್ವತಿಯ ಕಲ್ಪನೆ ಜೈನ ಕಾವ್ಯದಲ್ಲಿದೆ.

ಪಂಪನಿಗಿಂತಲೂ ಮೊದಲು ಒಂದು ಕಾವ್ಯ ಸಂಪ್ರದಾಯ ಪ್ರಾರಂಭವಾಗಿರಬಹುದು. ಆದರೂ ಪಂಪನೇ ಕನ್ನಡದ ಮೊದಲ ಕವಿ ಎನ್ನುವುದರಲ್ಲಿ ಸಂದೇಹವಿಲ್ಲ. ಸಂಸ್ಕೃತದ ಚಂಪಕ ಮಾಲಾ ವೃತ್ತ ಅವನಿಗೆ ಬಹಳ ಇಷ್ಟವಾದ ವೃತ್ತವಾಗಿದೆ ಎಂದು ಕಾಣುತ್ತದೆ. ಹಾಗಾಗಿ ಅವನ ಕಾವ್ಯಗಳಲ್ಲಿ ವೃತ್ತಗಳು ಕಂಡುಬರುತ್ತವೆ.

ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂಸಮಸ್ತಭಾ
ರತಮನ ಪೂರ್ವಮಾಗೆ ಸಲೆ ಪೇಳ್ದಕವೀಶ್ವರರಿಲ್ಲವರ್ಣಕಂ
ಕತೆಯೊಡಂಬಡಂ ಪಡೆಯೆ ಪೇಳ್ವೊಡೆ ಪಂಪನೇ ಪೇಳ್ಗುಮೆಂದು ಪಂ
ಡಿತರೆ ತಗುಳ್ದು ಬಿಚ್ಚಳಿಸೆ ಪೇಳಲೊಡರ್ಚಿದೆ ನೀ ಪ್ರಬಂಧಮಂ

ಸಮಗ್ರ ಭಾರತದ ಕತೆಯನ್ನು ಅಪೂರ್ವವಾಗಿ ಹೇಳಲು ಪಂಪನೇ ಸಮರ್ಥ ಎಂಬ ಅರ್ಥ ಬರುವ ಈ ಪದ್ಯವು ಪಂಪನ ಕಾವ್ಯ ಸಾಮರ್ಥ್ಯವನ್ನು ವ್ಯಕ್ತಪಡಿಸುತ್ತದೆ. ಅಷ್ಟು ದೀರ್ಘವಾದ ವ್ಯಾಸಭಾರತದ ಕತೆಯನ್ನು ಕನ್ನಡ ಕಾವ್ಯವನ್ನಾಗಿಸಬೇಕಾದರೆ, ಅಂದ ಕೆಡದಂತೆ ಹೇಳಬೇಕೆಂಬುದನ್ನು ಪಂಪ–ಅರಿತವನಾಗಿದ್ದಾನೆ. ವ್ಯಾಸ ಭಾರತದ ಕತೆ ಹಿರಿದಾಗಿದ್ದರೂ ಅದರ ಅಂದ, ಚಂದ, ವಿನ್ಯಾಸ ಕೆಡದ ಹಾಗೆ ರಚಿಸುವುದೇ ಪಂಪನ ಮೂಲ ಉದ್ದೇಶವಾಗಿದೆ. ಅದಕ್ಕಾಗಿಯೇ ಹದಿನೆಂಟು ಪರ್ವಗಳ ಮಹಾಭಾರತವನ್ನು ಹದಿನಾಲ್ಕು ಆಶ್ವಾಸಗಳನ್ನಾಗಿ ಪರಿವರ್ತಿಸಿದರೂ ಅದರ ಸ್ವರೂಪಕ್ಕೆ ಧಕ್ಕೆಯುಂಟಾಗಿಲ್ಲವೆಂಬುದು ಗಮನಾರ್ಹ ಅಂಶವಾಗಿದೆ. ಪಂಪ, ಮೂಲ ಮಹಾಭಾರತವನ್ನು 'ವಿಕ್ರಮಾರ್ಜುನ ವಿಜಯ'ವನ್ನಾಗಿಸಲು ಹೊರಟಾಗ ಸಾಕಷ್ಟು ತೊಂದರೆಗೆ ಒಳಗಾಗಿದ್ದಾನೆ. ಆದರೂ ತನ್ನ ಪ್ರಯತ್ನದಲ್ಲಿ ಯಶಸ್ವಿಯಾಗಿದ್ದಾನೆ.

ಪಂಪನಿಗಿಂತ ಪೂರ್ವದಲ್ಲಿ ಸಂಸ್ಕೃತದ ಕಾಳಿದಾಸ, ಭವಭೂತಿ, ಭಾಸ ಮೊದಲಾದ ಕವಿಗಳು ನಾಟಕಕಾರರು ಆಗಿಹೋಗಿದ್ದರು. ಆದರೆ ಪಂಪಕವಿ ನಾಟಕಗಳನ್ನು ರಚಿಸದೆ ಕಾವ್ಯರಚನೆಗೆ ಮುಂದಾಗಿರುವುದು ಅವನು ಕಾವ್ಯ ಪ್ರಿಯನಾಗಿದ್ದನೆಂಬುದನ್ನು ಸೂಚಿಸುತ್ತದೆ. ಆದಿಪುರಾಣಕ್ಕೆ ಜಿನಸೇನಾಚಾರ್ಯರ ಪೂರ್ವ ಪುರಾಣವನ್ನು ತೆಗೆದುಕೊಂಡಂತೆ, 'ವಿಕ್ರಮಾರ್ಜುನ ವಿಜಯ' ಕೃತಿಗೆ ವ್ಯಾಸಭಾರತವನ್ನು ಆಯ್ದುಕೊಂಡು ಎರಡು ಮಹತ್ವಪೂರ್ಣ ಕಾವ್ಯಗಳನ್ನು ರಚಿಸಿದನು. 'ವ್ಯಾಸ ಮುನೀಂದ್ರ ರುಂದ್ರ ವಚನಾಂಮೃತ ವಾರ್ಧಿಯನೀಸುವೆಂ ಕವಿವ್ಯಾಸನೆಂಬ ಗರ್ವಮೆನಗಿಲ್ಲ ಎಂಬ ಪಂಪನ ಮಾತುಗಳನ್ನು ಗಮನಿಸಿದರೆ ಪಂಪನು ವ್ಯಾಸರಿಗೆ ಚಿರ ಋಣಿಯಾಗಿದ್ದಾನೆಂದು ಕಂಡುಬರುತ್ತದೆ.

ಪೊನ್ನನು 'ಭುವನೈಕ ರಾಮಾಭ್ಯುದಯಂ' ಮತ್ತು 'ಶಾಂತಿ ಪುರಾಣ' ಎಂಬ ಎರಡು ಕಾವ್ಯಗಳನ್ನು ರಚಿಸಿದ್ದಾನೆ. ಭುವನೈಕ ರಾಮಾಭ್ಯುದಯವು ರಾಷ್ಟ್ರಕೂಟ ಮೂರನೇ ಕೃಷ್ಣನ ಪ್ರತಾಪವನ್ನು ಪ್ರತಿಪಾದಿಸುವ ಗ್ರಂಥವೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಪ್ರಾಯಶಃ ಇದು ವಾಲ್ಮೀಕಿ ರಾಮಾಯಣದ ಅನುವಾದ ಗ್ರಂಥವಾಗಿರಬಹುದು. ಪೊನ್ನನು ಶಾಂತಿಪುರಾಣದಲ್ಲಿ ತನ್ನನ್ನು 'ಕಾಳಿದಾಸಂಗೆ ನಾಲ್ಮಡಿ, ಕನ್ನಡ ಕವಿತೆಯೊಳಸಗಂಗೆ ನೂರ್ಮಡಿ', ಚತುರ್ಭಾಷಾ ಪಂಡಿತ ಮುಂತಾದ ಬಿರುದುಗಳಿಂದ ಹೊಗಳಿಕೊಂಡಿದ್ದನ್ನು ಗಮನಿಸಿದರೆ ಬಹುಶಃ ಪೊನ್ನನು ಸಂಸ್ಕೃತದ ವಾಲ್ಮೀಕಿ ರಾಮಾಯಣವನ್ನು ಆಧರಿಸಿ 'ಭುವನೈಕ ರಾಮಾಭ್ಯುದಯ' ಎಂಬ ಕಾವ್ಯವನ್ನು ರಚಿಸಿರಬಹುದು. ಶಾಂತಿ ಪುರಾಣಕ್ಕೆ ಕಾಳಿದಾಸ ಕವಿಯ ರಘುವಂಶವೇ ಮೂಲವೆಂದು ಹೇಳಿದರೆ, ಅಸಗನ ಸಂಸ್ಕೃತ ಶಾಂತಿಪುರಾಣವೇ ಪೊನ್ನನ ಶಾಂತಿಪುರಾಣಕ್ಕೆ ಮೂಲ ಆಕರವೆಂದು ಇನ್ನೂ ಕೆಲವು ಪಂಡಿತರು ಅಭಿಪ್ರಾಯ ಪಡುತ್ತಾರೆ.

ರತ್ನತ್ರಯರಲ್ಲಿ ಕೊನೆಯವನಾದ ರನ್ನ ಕವಿಯನ್ನು ಹೇಳುವುದಾದರೆ, ರನ್ನ ವಾಗ್ದೇವಿಯ ಭಂಡಾರದ ಮುದ್ರೆಯೊಡೆದ ಖ್ಯಾತಿಗೆ ಪಕ್ಕಾದ ಕವಿ. ಪಂಪನ ಮಾರ್ಗದಲ್ಲಿಯೇ ತನ್ನೆರಡು ಕೃತಿಗಳನ್ನು ರಚಿಸಿದರೂ ಸಂಸ್ಕೃತ ಕಾವ್ಯದ ಪ್ರಭಾವ ಈತನ ಮೇಲೂ ಆಗಿರುವುದನ್ನು ಗಮನಿಸಿಬೇಕು. ಲೌಕಿಕ ಆಗಮಿಕ ಕಾವ್ಯಮಾರ್ಗದಲ್ಲಿಯೇ 'ಅಜಿತ ಪುರಾಣ' ಮತ್ತು 'ಗದಾಯುದ್ಧ' ಅಥವಾ ಸಾಹಸಭೀಮ ವಿಜಯ ಎಂಬ ಎರಡು ಕೃತಿಗಳನ್ನು ಮೊದಲ ಕೃತಿ ಅಜಿತನಾಥ ಪುರಾಣದ ಮೇಲೆ ಗುಣಭದ್ರಾಚಾರ್ಯರ 'ಉತ್ತರಪುರಾಣ' ಎಂಬ ಸಂಸ್ಕೃತ ಕಾವ್ಯದ ಪ್ರಭಾವವಿದೆ.

ರನ್ನನ ಅಗಾಧವಾದ ಕಾವ್ಯಶಕ್ತಿಯ ಪ್ರತಿಭೆ ಕಂಡುಬರುವುದು ಆತನ ಲೌಕಿಕ ಕಾವ್ಯವಾದ 'ಸಾಹಸಭೀಮ ವಿಜಯ'ದಲ್ಲಿ ಮಹಾಭಾರತದಲ್ಲಿ ಭೀಮ ದುರ್ಯೋಧನರ ನಡುವೆ ನಡೆಯುವ ಯುದ್ಧದ ಪರ್ವವನ್ನು 'ಗದಾಸೌಪ್ತಿಕ ಪರ್ವದ ಕಥೆಯೇ' ಈ ಕಾವ್ಯದ ವಸ್ತುವಾಗಿದೆ. ಹಾಗೂ ಪಂಪ ಭಾರತದ ಹದಿಮೂನೆಯ ಆಶ್ವಾಸದ ಆಧಾರದಿಂದ ಈ ಕಾವ್ಯವನ್ನು ರಚಿಸಲಾಗಿದೆ. ಪಂಪನು 'ವಿಕ್ರಮಾರ್ಜುನ ವಿಜಯ'ವನ್ನು ರಚಿಸಿ 'ಕವಿತಾ ಗುಣಾರ್ಣವ'ನೆಂದು ಬಿರುದು ಪಡೆದನು. ರನ್ನನು ಮಹಾಭಾರತದ ಒಂದೇ ಅಧ್ಯಯನವನ್ನು ಕಾವ್ಯವಸ್ತುವನ್ನಾಗಿ ಮಾಡಿಕೊಂಡು ಪ್ರಸಿದ್ಧ ಕಾವ್ಯ ರಚಿಸಿದನು. ವಿಕ್ರಮಾರ್ಜನ ವಿಜಯದ ಮೊದಲ ನಾಂದಿಯು ಚಾಲುಕ್ಯ ಅರಿಕೇಸರಿಯ ಸ್ತುತಿಯಾದರೆ, ಸಾಹಸಭೀಮ ವಿಜಯದ ನಾಂದಿಯು ಚಾಲುಕ್ಯ ಸತ್ಯಾಶ್ರಯನ ಸ್ತುತಿಯಾಗಿದೆ.

ರನ್ನನ ಗದಾಯುದ್ಧದ ಮೇಲೆ ಪ್ರಭಾವ ಬೀರಿದ ಸಂಸ್ಕೃತ ಕಾವ್ಯಗಳಾವುವೆಂದರೆ, ಭಟ್ಟನಾರಾಯಣನ ವೇಣಿಸಂಹಾರ ಮತ್ತು ಭಾಸ ಕವಿಯ ಊರುಭಂಗ. ಭಟ್ಟನಾರಾಯಣನ ಕಾಲ–ದೇಶಗಳಾಗಲಿ, ಜೀವನ ಚರಿತ್ರೆಗಳಾಗಲಿ, ತಿಳಿದುಬಂದಿಲ್ಲ. ಆದರೆ ಇವನಿಗೆ ಮೃಗರಾಜನೆಂಬ ಉಪನಾಮವೋ ಅಥವಾ ಬಿರುದೋ ಇರಬಹುದೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

**ವೇಣಿಸಂಹಾರದ ನಾಂದಿ–ಅನು:ಸಿ.ಪಿ.ಕೆ**

ಮೊಗ್ಗರಳಿ ಶಶಿಕರದಿನೊಳಗೆ ತೊಯ್ದಂತಿರುವ
ತಡೆದರೂ ದುಂಬಿಗಳು ಮಧು ಕೆದರುವ
ಹರಿಪದಕೆ ಸೂಸಿದಿ ಹೂ ಬೊಗಸೆ ದೊರಕಿಸಲಿ
ಸಭೆಯ ಕಣ್ಣಿಗೆ ಹಬ್ಬವಹ ಸಿದ್ದಿಯ

**ವೇಣಿಸಂಹಾರ(೧.೧)**

**ಗದಾಯುದ್ಧದ ನಾಂದಿ**

ಶ್ರೀಯುವತೀ ಪ್ರಿಯಂ ಬಲಯುತಂ ಬಲಿದರ್ಪಹರಂ ಜಿತಾರಿದೈ
ತೇಯನನಂತ ಭೋಗ ನಿಲಯಂ ಪ್ರತಿಪಾಲಿತ ಧರ್ಮಚಕ್ರನ
ಬ್ಜಾಯತನೇತ್ರನಾದಿ ಪುರುಷಂ ಪುರುಷೋತ್ತಮನೀ ಚಳುಕ್ಯ
ನಾರಾಯಣದೇವನೀಗೆಮಗೆ ಮಂಗಳ ಕಾರಕ ಮತ್ಸವಂಗಳಂ

**ಗದಾಯುದ್ಧಂ(೧.೧)**

ವೇಣಿ ಸಂಹಾರದಲ್ಲಿ ಕವಿ ಭಟ್ಟನಾರಾಯಣನು ಹರಿಸ್ತುತಿಯನ್ನು ಮಾಡಿ ಹರಿಪಾದಕೆ ಮೊಗ್ಗರಳಿ ಹೂವಾಗಿ ಕಣ್ಣಿಗೆ ಹಬ್ಬವನ್ನುಂಟು ಮಾಡುವ ನಾರಾಯಣನ ಪೂಜೆಯ ವಿಚಾರವನ್ನು ವಿವರಿಸಿದರೆ, ಗದಾಯುದ್ಧದಲ್ಲಿ ಕವಿ ರನ್ನನು ನಾರಾಯಣನೊಂದಿಗೆ ಚಳುಕ್ಯ ನಾರಾಯಣನಾದ ಸತ್ಯಾಶ್ರಯ ಇಜಿವ ಬೆಡಂಗನನ್ನು ಸ್ತುತಿಸುತ್ತಾನೆ. ಸಂಸ್ಕೃತ ಕಾವ್ಯದಲ್ಲಿ ದೇವತೆಗಳನ್ನು ನೇರವಾಗಿ ಸ್ತುತಿಸಿದರೆ, ಕನ್ನಡ ಕಾವ್ಯದಲ್ಲಿ ನಾರಾಯಣ ಮತ್ತು ಒಡೆಯನ ಪ್ರಶಂಸೆಯನ್ನು ಅಭೇದ ರೂಪಕಲ್ಪಿಸಿ ಚಳುಕ್ಯ ನಾರಾಯಣನೆಂದು ಆಶ್ರಯದಾತನನ್ನು ಸ್ತುತಿಸುತ್ತಾನೆ. ರನ್ನನಿಗೆ ಸತ್ಯಾಶ್ರಯ ಬೇರೆಯಲ್ಲ, ನಾರಾಯಣ ಬೇರೆಯಲ್ಲ ಇಬ್ಬರೂ ಒಂದೇ ಎಂಬ ಭಾವವಿದೆ.

**ವೇಣಿಸಂಹಾರ**

ಕೇಲಿ ಕೋಪದಲಿ ರಾಸ ತೊರೆದು ಕಾಲಿಂದಿತಡಿಯ ಹಿಡಿದು
ಅಶ್ರುಮುಖಿಯಾಗಿ ನಡೆದ ರಾಧಿಕೆಯ ಹಿಂದೆ ಹಿಂದೆ ನಡೆದು
ಅವಳ ಹೆಜ್ಜೆಯಲಿ ಹೆಜ್ಜೆಯಿಟ್ಟು ಪುಲಕಿಸುತ ಮುನಿಸಮರೆತ
ಪ್ರಿಯೆಯ ನೋಟಕೀಡಾದ ಕೃಷ್ಣನನುನಯವು ಹೊರೆಯಲೆಮ್ಮ

–ವೇಣಿಸಂಹಾರ(೧.೨) ಅನು: ಸಿ.ಪಿ.ಕೆ

ಈ ಪದ್ಯದಲ್ಲೂ ಕವಿ ಭಟ್ಟನಾರಾಯಣನು ಶ್ರೀಕೃಷ್ಣನನ್ನು ಸ್ತುತಿಸುತ್ತಾನೆ. ರಾಸ ಲೀಲೆಯನ್ನು ತೊರೆದು ಅಳುತ್ತ ಕಾಳಿಂದಿ ತೀರದಲ್ಲಿ ನಡೆಯುತ್ತಿರುವ ರಾಧೆಯ ಹೆಜ್ಜೆಯಲಿ ಹೆಜ್ಜೆಯನಿಡುತ ಬರುವ ಕೃಷ್ಣನ ನೋಟವನ್ನು ಕಂಡುಪುಳಕಗೊಂಡು ರಾಧೆಯ ಪ್ರೀತಿಯ ನೋಟಕೀಡಾದ ಕೃಷ್ಣನು ಅನುದಿನವು ಪೊರೆಯಲಿ ಎಂದಿರುವನು.

ದೇವಿ ಪ್ರೇಮದಿ ಅಸುರ ನಾರಿಯರಿದೇನೆಂದು
ಭಯಸಂಭ್ರಮದಿ, ಶಾಂತಿ ಸತ್ವರೆನಿಪ
ಮುನಿಜನರು ಕರುಣದಲಿ, ವಿಷ್ಣು ಮಂದಸ್ಮಿತದಿ
ಹೆಣ್ಣುಗಳ ಕಳಕಳವ ಶಮಿಸಿ ನಿಲಿಸಿ
ಕೈದುಗಳ ಸೆಳೆದ ದಾನವ ಭಟರು ಗರ್ವದಲಿ
ದೇವತೆಗಳೆಲ್ಲರೂ ಆನಂದದಿ
ಮಯರಚಿತ ಪುರವ ವಹಿಸುವ ಕಾದಲಿ ಕಂಡ
ದೂರ್ಜಟಿಯು ನಿಮ್ಮೆಲ್ಲರನು ಕಾಯಲಿ

ವೇಣಿಸಂಹಾರ(೧.೩)

ದೇವಿ ಪಾರ್ವತಿಯು ಪ್ರೇಮದಿಂದ, ರಾಕ್ಷಸ ಸ್ತ್ರೀಯರು ಇದೇನೆಂದು ಸಂಭ್ರಮದಿಂದ, ಶಾಂತ, ಸತ್ವರೆನಿಸಿದ ಮುನಿಗಳು ಕರುಣದಿಂದ, ವಿಷ್ಣು ಮಂದಸ್ಮಿತದಿಂದ ಸ್ತ್ರೀಯರ ಕಳವಳವನ್ನು ಕಳೆದು ಆಯುಧ ಸೆಳೆದ ದಾನವ ವೀರರು ಗರ್ವದಿಂದ, ದೇವತೆಗಳೆಲ್ಲರೂ ಆನಂದದಿಂದ ಮಯ ರಚಿತವಾದ ಪುರವನ್ನು ದಹಿಸುವ ಕಾಲದಲ್ಲಿ ಶೋಭಿಸುವ ಶಿವನು ನಿಮ್ಮೆಲ್ಲರನು ಪೊರೆಯಲಿ.

ತರುಗೋತ್ತುಂಗ ಶಶಾಂಕ ಖಂಡಮೆ ಸುಧಾಬೀಜಂ ಭುಜಂಗೇಂದ್ರನಂ
ಕುರಮುನ್ಮೀಲಿತ ಮಟ್ಟಹಾಸಮೆ ದಳಾನೀಕಂ ವೃಷಂಪುಷ್ಪಮೀ
ಶ್ವರ ಶೈಲಂ ಪರಮಾಗೆ ಕೋಮಲಮುಖಿ ಗೌರಿ ಲತಾಶ್ಲಿಷ್ಟಶಂ
ಕರ ಕಲ್ಪದ್ರುಮನೀಗಭೀಷ್ಟ ಫಲಮಂ ಚಾಳುಕ್ಯ ನಾರಾಯಣಂ

**ಗದಾಯುದ್ಧ(೧.೨)**

(ಈ ಪದ್ಯದ ಭಾವಾನುವಾದವು ೫ನೆಯ ಅಧ್ಯಾಯದಲ್ಲಿದೆ.)

ಭಟ್ಟನಾರಾಯಣ ತನ್ನ ವೇಣಿ ಸಂಹಾರದ ಎರಡನೆಯ ಪದ್ಯದಲ್ಲಿ ಶ್ರೀಕೃಷ್ಣನನ್ನು ಸ್ತುತಿಸಿ, ಮೂರನೇ ಪದ್ಯದಲ್ಲಿ ಶಿವನನ್ನು ಸ್ತುತಿಸಿದರೆ, ರನ್ನ ತನ್ನ ಗದಾಯುದ್ಧದಲ್ಲಿ ಶಂಕರ ಸ್ತುತಿಯನ್ನು ಎರಡನೆಯ ಪದ್ಯದಲ್ಲಿಯೇ ಮಾಡುತ್ತಾನೆ. ಮೂಲ ಸಂಸ್ಕೃತ ಕಾವ್ಯದಲ್ಲು ಹಾಗೂ ಸಂಸ್ಕೃತದಿಂದ ಪ್ರಭಾವಿತವಾದ ಗದಾಯುದ್ಧದಲ್ಲೂ ಶಿವಸ್ತುತಿ ಕಂಡುಬಂದಿರುವುದರಿಂದ ಭಟ್ಟನಾರಾಯಣನ ಪದ್ಯಗಳಿಗೂ, ರನ್ನನ ಪದ್ಯಗಳಿಗೂ ಸಾಮ್ಯತೆಯಿರುವುದು ಕಂಡುಬರುತ್ತದೆ.

ಕೆಲವು ನಾಟಕಗಳಲ್ಲಿ ನಾಂದಿ ಪದ್ಯವಾದ ನಂತರ ಸೂತ್ರಧಾರನ ಪ್ರವೇಶವಾದರೆ, ಇನ್ನೂ ಕೆಲವು ನಾಟಕಗಳಲ್ಲಿ, ನಾಂದ್ಯಾಂತದಲ್ಲಿ ಸೂತ್ರಧಾರನ ಪ್ರವೇಶವೆಂದು ಬರೆದು, ಸೂತ್ರಧಾರನ ಪ್ರವೇಶವಾಗುತ್ತದೆ. ಆಗ ಸೂತ್ರಧಾರನೇ ಇಷ್ಟದೈವವನ್ನು ಕುರಿತು ಪ್ರಾರ್ಥಿಸುತ್ತಾನೆ. ಅಂತಹ ಕಾವ್ಯಗಳಲ್ಲಿ ಭಾಸನ ಊರುಭಂಗ ಎಂಬ ಕೃತಿಯೂ ಒಂದು. ಈ ಕೃತಿಯೂ ಕೂಡ ರನ್ನ ಕವಿಯ ಮೇಲೆ ಪ್ರಭಾವ ಬೀರಿದೆ.

**ಊರುಭಂಗ–ಸಂಸ್ಕೃತ**

ಭೀಷ್ಮ ದ್ರೋಣತಟಾಂ ಜಯದ್ರಥಜಲಾಂ ಗಾಂದಾರರಾಜಹ್ರದಾಂ
ಕರ್ಣ ದ್ರೌಣಿ ಕೃಪೋರ್ವಿನ ಕ್ರಮಕರಾಂ ದುರ್ಯೋಧನ ಸ್ರೋತಸಮ್ ।
ತೀರ್ಣಾಃ ಶತ್ರುನದೀಂ ಶರಾಸಿಸಿಕತಾಂ ಯೇನ ಪ್ಲವೇ ನಾರ್ಜುನಃ
ಶತ್ರೂಣಾಂ ತರಣೇಷು ವಃ ಭಗವಾನಸ್ತು ಪ್ಲವಕೇಶವಃ

ಊರುಭಂಗ–ಕನ್ನಡ

ಭೀಷ್ಮದ್ರೋಣರೆ ದಡವೆನೆ ಸಿಂಧು ನೃಪಾಲನೆ ಮಡುವೆನೆ ಗಾಂಧಾರೇಶ್ವರನೇ
ಕರ್ಣದ್ರೌಣಿಕೃಪರ್ಕಳೆ ತೆರೆಮೊಸಲೆ ತಿಮಿಂಗಿಲವೆನೆ ಅದುರ್ಯೋಧನ ಹೊನಲು ಎನೆ
ಮತ್ತೆ ಶರಾಸಿ ಸಮೂಹವೆ ಮರಳೆನೆ ರಿಪುವರ್ಗವೇ ತನಗಡ್ಡವೆನಿಸಿದ ಆವಾಹಿಯೆನೆ
ಪ್ರಾರ್ಥನೆ ನಾವಿಕತಾ ನೆನೆತೇರಿಸಿ ಒಯ್ದುವನಾತನು ಅನುಪಮಹರಿ ಹರಿಗೋಲ ಎನೆ
ರಿಪುಗಳದೆಸೆಯಿಂದೊದಗುವ ಭಯದಿಂದಾತನೆ ನಿಮ್ಮನುಪೊರೆಯಲಿ ನಿತ್ಯವುಕೇಶವನೆ

–ಅನು: ಎಸ್.ವಿ.ಪರಮೇಶ್ವರಭಟ್ಟ (೧)

ರನ್ನನ ಮೇಲೆ ಪ್ರಭಾವ ಬೀರಿರುವ ಭಟ್ಟನಾರಾಯಣನ ವೇಣಿಸಂಹಾರ ಮತ್ತು ಭಾಸನ ಊರುಭಂಗ ಕೃತಿಗಳ ನಾಂದಿ ಪದ್ಯಗಳಲ್ಲಿ ಹರಿಯನ್ನು ಸ್ತುತಿಸಲಾಗಿದೆ. ಹಾಗೆಯೇ ಗದಾಯುದ್ಧದಲ್ಲೂ ನಾರಾಯಣನ ಸ್ತುತಿ ಇರುವುದರಿಂದ ಮೂಲ ಸಂಸ್ಕೃತ ಕೃತಿಗಳಿಗೂ ಈ ಎರಡೂ ಕೃತಿಗಳಿಂದ ಪ್ರಭಾವಿತವಾದ ರನ್ನನ ಗದಾಯುದ್ಧದಲ್ಲೂ ನಾರಾಯಣನ ಸ್ತುತಿ ಇರುವುದರಿಂದ ಸಂಸ್ಕೃತ ಮತ್ತು ಕನ್ನಡ ಕಾವ್ಯಗಳೆರಡರಲ್ಲೂ ಸಾಮ್ಯತೆ ಇರುವುದು ಕಂಡುಬಂದಿದೆ.

ಸಂಸ್ಕೃತ ಕವಿಯಿಂದ ಪ್ರೇರಿತನಾದ ಇನ್ನೊಬ್ಬ ಕನ್ನಡ ಕವಿ ಒಂದನೆಯ ನಾಗವರ್ಮ ಇವನು ಛಂದಸ್ಸಿಗೆ ಸಂಬಂಧಿಸಿದಂತೆ 'ಛಂದೋಂಬುಧಿ' ಎಂಬ ಕೃತಿಯನ್ನೂ, ಬಾಣಭಟ್ಟನ ಸಂಸ್ಕೃತ ಗದ್ಯಕೃತಿಯನ್ನು ಆಧರಿಸಿ ಚಂಪೂ ಕಾವ್ಯವನ್ನು ರಚಿಸಿದನು. ಬಾಣನ ಗದ್ಯ ಕಾದಂಬರಿ ನಾಗವರ್ಮನ ಕೈಯಲ್ಲಿ ಪದ್ಯಕಾವ್ಯ 'ಕರ್ಣಾಟಕ ಕಾದಂಬರಿಯಾಗಿ ಪರಿವರ್ತನೆಯಾಗಿದೆ.' ಇದೊಂದು ಅನುವಾದ ಕೃತಿ ಮೂಲ ಗದ್ಯರೂಪವನ್ನು ಪದ್ಯರೂಪಕ್ಕೆ ಅಳವಡಿಸಿ ಜನ್ಮಾಂತರದ ಕಥೆಯನ್ನು ಹೇಳುವುದು ನಾಗವರ್ಮನ ಉದ್ದೇಶವಾಗಿದೆ.

ಸಂಸ್ಕೃತಿ ಸಂಸ್ಕೃತದಿಂದೆ ಜ
ಗತ್ಕಾತುಕಮಾಗಿ ಮತ್ತೆ ಕರ್ಣಾಟದೊಳಂ
ಸತ್ಕವಿ ನಿವಹಂ ಪೊಗಟೆ ಚ
ಮುತ್ಕೃತಿಯಂ ಪಡೆದು ಸೊಬಗು ವಡೆದತ್ತಿಗಳ್

**ಕರ್ಣಾಟಕ ಕಾದಂಬರಿ(೧.೫)**

ನಾಗವರ್ಮನ ಮಾತುಗಳಲ್ಲೇ ಹೇಳುವುದಾದರೆ ಈ ಕೃತಿಯು ಮೊದಲು ಸಂಸ್ಕೃತ ಭಾಷೆಯಿಂದಲೇ ಜಗತ್ತಿಗೆ ಕೌತುಕವನ್ನುಂಟು ಮಾಡಿ ಈಗ ಮತ್ತೆ ಕರ್ನಾಟಕದಲ್ಲಿ ಸತ್ಕವಿ

ಸಮೂಹ ಹೊಗಳುವಂತಹ ಚಮತ್ಕಾರದ ಕೃತಿಯಾಗಿ ಈಗ ಸೊಬಗನ್ನು ಪಡೆಯುತ್ತಿದೆ ಎನ್ನಲು ಕಾರಣ ಬಾಣ ಕಾದಂಬರಿಯು ಸಂಸ್ಕೃತದಲ್ಲೂ ಪ್ರಸಿದ್ಧವಾಗಿತ್ತು. ಅದು ಕನ್ನಡದಲ್ಲಿ ನಾಗವರ್ಮನ ಕೈಯಲ್ಲಿ 'ಕರ್ಣಾಟಕ ಕಾದಂಬರಿ'ಯಾದ ನಂತರವೂ ಪ್ರಸಿದ್ಧ ಕಾವ್ಯವಾಗುತ್ತಿದೆ ಎಂದು ಹೇಳುತ್ತಾನೆ. "ಬಾಣೋಚ್ಛಿಷ್ಟಂ ಜಗತ್ಸರ್ವಂ" ಎಂಬ ಮಾತು ಬಳಕೆಯಲ್ಲಿದೆ. ಬಾಣ ಉಗುಳಿದ್ದರಿಂದಲೇ ಜಗತ್ತಿನ ಸಾಹಿತ್ಯ ಬೆಳೆಯಿತು ಎನ್ನುವ ಮಾತಿನಿಂದಲೇ ಜಗತ್ತಿನ ಸಾಹಿತ್ಯ ಬೆಳೆಯಿತು ಎನ್ನುವ ಮಾತಿನಿಂದ ಬಾಣಕವಿ ಯಾವ ವಿಷಯವನ್ನು ಬಿಟ್ಟಿಲ್ಲವೆಂದು ಕಂಡುಬರುತ್ತದೆ. ನಿಜವಾದ ಅನುಭವವಿದ್ದಲ್ಲಿ ಆ ಕವಿಯ ಮಾತು ಸರಸವಾಗಿರುತ್ತದೆ. ಬಾಣ ಕಾದಂಬರಿಯ ಪೂರ್ವಾರ್ದವನ್ನು ಮಾತ್ರ ಬರೆದ ನಂತರ ಅವನ ಮಗ ಭೂಷಣ ಭಟ್ಟನು ಕಾದಂಬರಿಯ ಉತ್ತರಾರ್ಧವನ್ನು ಬರೆದನೆಂಬ ಉಲ್ಲೇಖವಿದೆ. ಆದರೆ ಏನೇ ಆಗಲಿ ಭಾಣನ 'ಕಾದಂಬರಿ'ಯ ಪ್ರಭಾವ ನಾಗವರ್ಮನ ಕರ್ಣಾಟಕ ಕಾದಂಬರಿಯ ಮೇಲಾದುದು ಖಂಡಿತ.

ಆ ಕೃತಿ ಮುನ್ನಂ ಚೆಲ್ವಿಂ
ಗಾಕರ ಮೆನಿಸಿರ್ದು ಮತ್ತೆ ಕನ್ನಡಿಸಿತ್ತಿ
ನ್ನೀ ಕವಿತೆಯಿಂ ಪ್ರಗಲ್ಬತೆ
ಯಾ ಕಾದಂಬರಿಯ ಸೊಬಗದೇನಚ್ಚರಿಯೋ

**ಕರ್ನಾಟಕ ಕಾದಂಬರಿ(೧.೬)**

ಈ ಪದ್ಯದಲ್ಲಿ ಕವಿ ನಾಗವರ್ಮ ತನ್ನ ಕಾವ್ಯದ ಬಗ್ಗೆ ಹೇಳದೆ ಆ ಕೃತಿಯ ಬಗ್ಗೆ ಹೇಳುತ್ತನೆ. ಇಲ್ಲಿ ಆ ಕೃತಿ ಎಂದರೆ ಬಾಣನ ಕಾದಂಬರಿಯ ಕನ್ನಡೀಕರಣ ಸಂಸ್ಕೃತ ಕಾದಂಬರಿಯನ್ನು ತಾನು ಅನುವಾದಿಸುತ್ತಿರುವುದನ್ನು ಪದ್ಯರೂಪದಲ್ಲಿ ಹೇಳಿರುವನು. ಕಾದಂಬರಿಯ ಸೊಬಗು ಅಚ್ಚರಿ ಪಡುವಂತಿದೆ. ಅದಕ್ಕಾಗಿಯೇ 'ಕನ್ನಡಸಿತ್ತಿನ್ನಿ' ಕಾದಂಬರಿಯ ಕನ್ನಡಭಾಷೆಗೆ ಅನುವಾದ ಮಾಡುತ್ತಿರುವೆನೆನ್ನುವನು. ಜಗತ್ತಿನ ಜನರು ಅಚ್ಚರಿಪಡುವಂತೆ ಗದ್ಯಕಾವ್ಯವನ್ನು ಪದ್ಯಕಾವ್ಯವನ್ನಾಗಿ ಮಾಡಿ, ಅಚ್ಚರಿ ಮೂಡಿಸಿದ್ದಾನೆ. ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಅರ್ಥಕೆಡದಂತೆ ರಚಿಸುವುದು ಕಷ್ಟ. ಅದರಲ್ಲೂ ರೂಪಾಂತರ ಕಾರ್ಯ ಸುಲಭವಲ್ಲ. ಭಾಷಾಂತರ ಮತ್ತು ರೂಪಾಂತರ ಕ್ರಿಯೆಗಳೆರಡರಲ್ಲೂ ಯಶಸ್ವಿಯಾಗಿರುವನು. ಬಾಣನ ಗದ್ಯ 'ಕಾದಂಬರಿ'ಯ ರೂಪಾಂತರ ಮತ್ತು ಭಾಷಾಂತರವೇ ನಾಗವರ್ಮನ 'ಕರ್ಣಾಟಕ ಕಾದಂಬರಿ'.

ಕಾವ್ಯಾವಲೋಕನ ಕರ್ಣಾಟಕ ಭಾಷಾಭೂಷಣ ಮುಂತಾದ ಕೃತಿಗಳನ್ನು ರಚಿಸಿದ ಕವಿ ನಾಗವರ್ಮನು(೨ನೇ ನಾಗವರ್ಮ) ಕನ್ನಡದ ಅಸಗ, ಗುಣನಂದಿ ಸಂಸ್ಕೃತದ ಬಾಣ, ಮಯೂರ, ಕಾಳಿದಾಸರಿಗೆ ಸಮಾನನೆಂದು ಹೇಳಿಕೊಂಡಿದ್ದಾನೆ. ಈತನ ವರ್ಧಮಾನ ಪುರಾಣ ಒಂದು ಚಂಪೂಕಾವ್ಯ ಇದರ ಮತ್ತೊಂದು ಹೆಸರು 'ಮಹಾವೀರ ಚರಿತೆ' ಈ ಕೃತಿಗೆ ಜಿನಸೇನಾಚಾರ್ಯರ 'ಉತ್ತರಪುರಾಣ' ಮತ್ತು ಅಸಗನ 'ವರ್ಧಮಾನ ಪುರಾಣ' ಎಂಬ ಸಂಸ್ಕೃತ ಕೃತಿಗಳು ಆಧಾರವಾಗಿರಬಹುದೆಂದು ಹೇಳಲಾಗಿದೆ. ಆದರೆ ಕಥೆಯ ವಸ್ತು, ವಿನ್ಯಾಸಗಳಲ್ಲಿ ಪಂಪಾದಿ ಕವಿಗಳಿಂದ ಪ್ರಭಾವಿತನಾಗಿರಬಹುದು. ನಾಗವರ್ಮನ 'ಕರ್ಣಾಟಕ ಭಾಷಾಭೂಷಣ'ವು ಕನ್ನಡ ವ್ಯಾಕರಣ ಗ್ರಂಥಗಳಲ್ಲಿ ಮೊದಲನೆಯದು. ಇದರಲ್ಲಿ ಬರುವ ಸರಸ್ವತಿ ಶ್ಲೋಕವು ಈ ರೀತಿಯಾಗಿರುವುದು.

ಸರ್ವಜ್ಞಂ ತದಹಂ ವಂದೇ
ಪರಂಜೋತಿಸ್ತ ಮೋಪಹಂ
ಪ್ರವರ್ತ್ತಾಯನ್ಮುಖಾದ್ದೇವಿ
ಸರ್ವ ಭಾಷಾ ಸರಸ್ವತಿ

**ಭಾಷಾಭೂಷಣ**

ಅಂದರೆ ಸರ್ವಜ್ಞಳೂ, ಪರಂಜ್ಯೋತಿ ಸ್ವರೂಪಳೂ, ತಮವನ್ನು ಪರಿಹರಿಸುವವಳೂ, ಆಗಿರುವಂತಹ ಸರಸ್ವತಿಯು ನನ್ನ ಮುಖದಲ್ಲಿ ಬಂದು ನೆಲಸಲಿ. ಅವಳು ಸರ್ವಭಾಷಾ ಸರಸ್ವತಿ ಎಂದು ಸ್ತುತಿಸುತ್ತಾನೆ.

ಪಂಪ ರಾಮಾಯಣ ಅಥವಾ ರಾಮಚಂದ್ರ ಚರಿತ ಪುರಾಣವು ಕನ್ನಡದ ಮೊದಲ ಜೈನ ರಾಮಾಯಣ ಮೂಲ ಸಂಸ್ಕೃತ ವಾಲ್ಮೀಕಿ ರಾಮಾಯಣಕ್ಕೂ ನಾಗಚಂದ್ರನ ರಾಮಾಯಣಕ್ಕೂ ತುಂಬಾ ವ್ಯತ್ಯಾಸಗಳಿವೆ. ಕಾರಣ ನಾಗಚಂದ್ರನು ತನ್ನ ಕೃತಿ ರಾಮಚಂದ್ರ ಪುರಾಣವನ್ನು ಜೈನ ರಾಮಾಯಣದ ಪರಂಪರೆಯಲ್ಲಿ ಬರುವ ವಿಮಲ ಸೂರಿಯ 'ಪಉಮ ಚರಿಯ'(ಪದ್ಮಚರಿತ) ಪ್ರಾಕೃತ ಕಾವ್ಯದ ಆಧಾರದಿಂದ ರಚಿಸಿದ್ದಾನೆ. ಪ್ರಾಕೃತದ ಈ 'ಪಉಮಚರಿಯ' ಕಾವ್ಯದ ಜೊತೆಗೆ ಸಂಸ್ಕೃತದಲ್ಲಿ ರವಿಷೇಣನು ರಚಿಸಿದ 'ಮಹಾರಾಮಾಯಣ' ಎಂಬ ಕೃತಿಯ ಪ್ರಭಾವವೂ ನಾಗಚಂದ್ರನ ಮೇಲಿದೆ ಎಂಬುದು ಕಂಡುಬರುತ್ತದೆ.

**ಪಉಮ ಚರಿಯಂ(ವಿಮಲಸೂರಿ)**

**೧. ಸುತ್ತ ವಿಹಾಣಂ(ಸೂತ್ರವಿಧಾನ) ಮಂಗಲಮ್(ಮಂಗಲಾಚರಣ)**

ವಿದ್ಯಾಮಂತ್ರ, ಶಿಲ್ಪ ಮುಂತಾದ ವಿವಿಧ ಸಿದ್ದಿಗಳನ್ನು ಸಂಪಾದಿಸುವ ಸಿದ್ಧದೇವ, ಕಿನ್ನರ, ನಾಗ, ಅಸುರ ಪತಿ ಮೊದಲಾದ ಭುವನೇಂದ್ರರ ಸಮೂಹದಿಂದ ಪೂಜಿತನಾದವನಿಗೆ, ಜಿನವರರಲ್ಲಿ ವೃಷಭನ ಸಮಾನ, ಶ್ರೇಷ್ಠ ಮತ್ತು ಅವನ ಅವಸರ್ಪಿಣಿ ಕಾಲವನ್ನು ಪಡೆದ ಪ್ರಥಮ ತೀರ್ಥಂಕರ ವೃಷಭನಿಗೆ, ಕಾಷಾಯಗಳನ್ನು ಗೆದ್ದ ಅಜಿತನಿಗೆ, ಮುಕ್ತಿ ಪಡೆದ ನಂತರ ಮತ್ತೆ ಜನ್ಮಧಾರಣ ಮಾಡದ ಸಂಭವನಿಗೆ, ಪದ್ಮನಂತೆ ಸುಂದರ ಕಾಂತಿಯುಳ್ಳ ಪದ್ಮಪ್ರಭನಿಗೆ, ಮೂಲೋಕಗಳಲ್ಲಿ ಉತ್ತಮ ಸುಪಾರ್ಶ್ವಗಳಿಗೆ, ಜಿನೇಶ್ವರ ಶಶಿಪ್ರಭ (ಚಂದ್ರಪ್ರಭ ಹಾಗೂ ಕುಸುಮದಂತ) (ಸುವಿಧಿ)ನಿಗೆ ಮುನಿಗಳಲ್ಲಿ ಇಂದ್ರನಂತೆ ಇರುವ ಶೀತಲ ಶ್ರೇಯಾಂಸ ವಾಸುಪೂಜ್ಯ, ವಿಮಲದೇವ ಮೊದಲಾದ ಅನಂತರಿಗೆ, ಧರ್ಮದ ಆಶ್ರಯ ರೂಪ ಧರ್ಮನಿಗೆ, ರಾಗಾದಿ ಆಂತರಿಕ ಶತ್ರುಗಳನ್ನು ಜಯಿಸಿದ 'ಶಾಂತಿ'ಗೆ ಕಾಷಾಯಗಳನ್ನು ನಾಶಗೊಳಿಸುವ ಕುಂಥಗೆ ಶತ್ರುಗಳನ್ನು ಜಯಿಸುವ ಮತ್ತು ಅನಂತ ಐಶ್ವರ್ಯ ಸಂಪನ್ನನಾದ ಅರನಿಗೆ, ಜನನ-ಮರಣ ಪ್ರವಾಹ ನಾಶಗೊಳಿಸುವ ಮಲ್ಲಿಗೆ ಸುವ್ರತಧಾರಿ ದೇವರಿಗೆ, ಸ್ವಾಮಿ ಅರ್ಥಾತ್ ದೇವಾದಿದೇವ ಹಾಗೂ ಪದ್ಮ(ರಾಮ)ನ ಕಥೆ ಯಾವನ ಕಾಲದಲ್ಲಿ ಘಟಿಸಿತೋ ಅಂತಹ ಮುನಿಸುವ್ರತಗೆ, ನಮಿ ಮೊದಲಾದ ನೇಮಿಗಳಿಗೆ ಧರಣೇಂದ್ರ ಹೆಸರಿನ ನಾಗನ ದೊಡ್ಡ ದೊಡ್ಡ ಫಣಿಗಳ ಮೇಲಿರುವ ಮಣಿಗಳ ಪ್ರಕಾಶದಲ್ಲಿ ದೇದಿಪ್ಯಮಾನನಾದ ಪಾರ್ಶ್ವನಿಗೆ, ಕರ್ಮಮಲವನ್ನು ನಿವಾರಿಸುವ ಮತ್ತು ಮೂಲೋಕಗಳಿಂದ ವಂದಿತ ಭಗವಾನ್ ವೀರನಿಗೆ, ಮನ-ವಚನ-ಕಾಯಗಳನ್ನು ದುಷ್ಟಪ್ರವೃತಿಗಳಿಂದ ರಕ್ಷಿಸುವ ಇತರ ಮಹರ್ಷಿಗಣಧರ ಮತ್ತು ಸಾಧುಗಳಿಗೆ ಇವರೆಲ್ಲರಿಗೂ ತಲೆಬಾಗಿ ನಮಸ್ಕರಿಸುವೆನು.

**ಪಉಮಚರಿಯಂ ಅನು: ಎಸ್.ಎಸ್.ಬ್ಯಾತನಾಳ**

ಇದೊಂದು ದೀರ್ಘವಾದ ನಾಂದಿ ಪದ್ಯ. ಈ ಪದ್ಯದಲ್ಲಿ ಹಲವಾರು ಜೈನ ತೀರ್ಥಕರರನ್ನು, ರಾಮನನ್ನು ಇತರ ಮಹರ್ಷಿಗಳನ್ನು ಗಣಧರರನ್ನು ಸಾಧು ಸಂತರನ್ನು ಏಕಕಾಲದಲ್ಲಿ ಸ್ತುತಿಸಲಾಗಿದೆ. ವಿಮಲ ಸೂರಿಯ ಪ್ರಭಾವ ನಾಗಚಂದ್ರನ ಮೇಲೆ ನೇರವಾಗಿ ಆಗಿದೆ ಎಂಬುದು ಈ ಸ್ತುತಿಯಿಂದ ತಿಳಿದುಬರುತ್ತದೆ. ಕಾರಣ ವಿಮಲಸೂರಿ ಜೈನಪರಂಪರೆಯ ವಿಧಾನದಲ್ಲಿ ತನ್ನ ಕಾವ್ಯವನ್ನು ರಚಿಸಿದ್ದಾನೆ.

**ರವಿಷೇಣ ರಾಮಾಯಣ (ಪದ್ಮಪುರಾಣ)**

ರವಿಷೇಣನು ಸಂಸ್ಕೃತ ಭಾಷೆಯಲ್ಲಿ 'ಪದ್ಮಪುರಾಣ'ವನ್ನು ರಚಿಸಿದನು. ಇದು 'ರವಿಷೇಣ ರಾಮಾಯಣ'ವೆಂದೇ ಹೆಸರಾಗಿದೆ. ಪ್ರಾಕೃತದ ವಿಮಲ ಸೂರಿಯ 'ಪಉಮ ಚರಿತೆ'ಯಂತೆ ಇದೂ ಕೂಡ ನಾಗಚಂದ್ರನ ಮೇಲೆ ಪ್ರಭಾವ ಬೀರಿದೆ.

'ಪರ್ಯಾಯಾ ರಾಮಾಯಣ ಮಿತ್ಯುಕ್ತಂ ತೇನ ಚೇಷ್ಟಿತಂ ರಾಮಸ್ಯ।
ಬುಧ ಪಂಕ್ತಿ ಕ್ರಮಾಯತಂ ಚರಿತಂ ರಾಮಗೋಚರಮ್
ಭಕ್ತ್ಯಾ ಪ್ರಣೋದಿತಾ ಬುದಿಃ ಪ್ರಷ್ಟುಂ ಮಮ ಸಮುದ್ಯತಾ॥

**ಪದ್ಯಪುರಾಣ**

ಪೆಸರ್ ಪಡೆದಿರ್ಪುದು ಜಗದೊಳ್ ತಾಂ ರಾಮ ಚಾ
ರಿತ್ರ್ಯವು ರಾಮಾಯಣವೆಂದು ವಿಬುಧ ಪಂಕ್ತಿ।
ಪರಂಪರಾಗತ ರಾಮಚರಿತೆಯನು ಭಕುತಿ
ಪ್ರಚೋದಿತ ಬುದ್ದಿಯೊಳಾಲಿಸಲಣಿಯಾಗಿಹೆನು॥

**ಅನು: ಮಿರ್ಜಿ ಅಣ್ಣಾರಾಯ**

ರಾಮ ಚರಿತ್ರೆಯು ಜಗತ್ತಿನಲ್ಲಿ 'ರಾಮಾಯಣ'ವೆಂದು ಹೆಸರುವಾಸಿಯಾಗಿದೆ. ಪರಂಪರಾಗತ ರಾಮಚರಿತೆಯನು ಭಕ್ತಿಯಿಂದ ಭಕ್ತರ ಸಾಲಿನಲ್ಲಿ ನಿಂತು ಆಲಿಸಲು ಅಣಿಯಾಗಿರುವೆನೆನ್ನುವನು. ಈ ಮೂಲಕ ರಾಮಚರಿತ್ರೆ ಜಗತ್ತಿನಲ್ಲೆ ಪ್ರಸಿದ್ಧವಾದುದೆಂಬುದನ್ನು ತಿಳಿಸುತ್ತಾನೆ.

ಶ್ರೀಕೇಳೀ ನಿಳಯಂ ನಿಜಾಂಘ್ರಿಕಮಳಂ ವಿದ್ಯಾನಟೀ ನಾಟ್ಯವೇ
ದೀಕಲ್ಪಂ ಮುಖಚಂದ್ರ ಬಿಂಬಮಖಿಳೇಂ ದ್ರೋತ್ತಂ ಸಮಾಣಿಕ್ಯದೀ
ಪಾರ್ಕಿರ್ಣ್ಣಂ ಹರಿಪೀಠಪಾರ್ಶ್ವಮೆನಿಪಂ ಪೂಜಾರ್ಹನಾರ್ಹಂತ್ಯಲ
ಕ್ಷ್ಮೀಕಾಂತಂ ಮುನಿಸುವ ಮುನಿಸುವ್ರತಂ ನಮಗೆ ಮಾಟ್ಕೆಷ್ಟಾರ್ಥ ಸಂಸಿದ್ಧಿಯಂ।

**ರಾಮಚಂದ್ರಚರಿತ ಪುರಾಣ(೧.೧)**

ಲಕ್ಷ್ಮೀಯ ಕ್ರೀಡೆಗೆ ಆಗರವಾದ ಪಾದ ಕಮಲಗಳ್ಳ ವಿದ್ಯಾನಟಿ(ಸರಸ್ವತಿ) ಅಥವಾ ವಿದ್ಯಾನರ್ತಕಿಗೆ ನಾಟ್ಯರಂಗ ಸ್ಥಳವಾದ ಮುಖಚಂದ್ರವುಳ್ಳ, ಇಂದ್ರದೇವನು ಶಿರದಲ್ಲಿ ಧರಿಸಿದ ಶ್ರೇಷ್ಠ ರತ್ನಗಳ ಕಾಂತಿ ಎಡಬಲ ಪಸರಿಸಿದ ಸಿಂಹ ಪೀಠ ಹೊಂದಿರುವ, ಪೂಜಿಸಲು ಯೋಗ್ಯನಾದ ಅರ್ಹಂತ ಲಕ್ಷ್ಮಿಗೆ ಒಡೆಯನಾದ ಮುನಿಸುವ್ರತನು ನಮಗೆ ಇಷ್ಟಾರ್ಥ ಸಂಸಿದ್ಧಿಯನ್ನುಂಟು ಮಾಡಲಿ.

ಪ್ರಾಕೃತ ಭಾಷೆಯು 'ಪಉಮಚರಿತೆ" ಹಾಗೂ ಸಂಸ್ಕೃತದ ಪದ್ಮಪುರಾಣಗಳ ನಾಂದಿ ಪದ್ಯಗಳನ್ನು ಗಮನಿಸಿದರೆ ಸಂಸ್ಕೃತ ಭಾಷೆಯ ಪದ್ಮಪುರಾಣಕ್ಕಿಂತ ವಿಮಲಸೂರಿಯ 'ಪಉಮಚರಿತೆ'ಯ ಪ್ರಭಾವವು ನಾಗಚಂದ್ರನ ಮೇಲೆ ದಟ್ಟವಾಗಿದೆ ಎಂದು ತಿಳಿದುಬರುತ್ತದೆ.

ಹೊಯ್ಸಳ ಚಕ್ರವರ್ತಿ ವೀರಬಲ್ಲಾಳನ ಆಸ್ಥಾನ ಕವಿಯಾಗಿದ್ದ ಜನ್ನನು ಪಂಪನಂತೆ ಖ್ಯಾತಿಯನ್ನು ಪಡೆದು ಅನಂತನಾಥ ಪುರಾಣ, ಯಶೋಧರ ಚರಿತೆ, ಅನುಭವ ಮುಕುರ ಎಂಬ ಮೂರು ಕಾವ್ಯಗಳನ್ನು ರಚಿಸಿದನು. ಅನಂತನಾಥ ಪುರಾಣ ಜೈನ ತೀರ್ಥಂಕರರ ಪುರಾಣಗಳ ಚೌಕಟ್ಟಿನಲ್ಲಿ ರಚಿತವಾಗಿರುವ ಧಾರ್ಮಿಕ ಕೃತಿಯಾದರೆ ಯಶೋಧರ ಚರಿತೆ ಸಂಸ್ಕೃತ ವಾದಿರಾಜನ 'ಯಶೋಧರಚರತೆ'ಯನ್ನು ಆಧಾರವಾಗಿಟ್ಟುಕೊಂಡು ರಚಿಸಿದ ಭವಾವಳಿಯನ್ನು ತಿಳಿಸುವ ಕಾವ್ಯವಾಗಿದೆ. ಈ ಕಾವ್ಯದ ಮೇಲೆ ಸಂಸ್ಕೃತ ಕವಿ ವಾದಿರಾಜನ ಯಶೋಧರ ಚರಿತೆಯ ಪ್ರಭಾವವಿದೆ.

'ಉಪಮಾಲೋಲ' ಮತ್ತು 'ಕರ್ನಾಟಕ ಚೈತ್ರವನ ಚೂತ' ಎಂಬ ಬಿರುದಾಂಕಿತ ಕವಿ ಲಕ್ಷ್ಮೀಶ ಸಂಸ್ಕೃತದ ಜೈಮಿನಿ ಮುನಿಗಳು ರಚಿಸಿದ 'ಜೈಮಿನಿ ಭಾರತದಿಂದ ಪ್ರಭಾವಿತನಾಗಿ ವಾರ್ಧಕ ಷಟ್ಪದಿಯಲ್ಲಿ ಜೈಮಿನಿ ಭಾರತವನ್ನು ರಚಿಸಿರುವನು. 'ಜೈಮಿನಿ ಭಾರತ' ಎಂಬ ಶೀರ್ಷಿಕೆಯೇ ಜೈಮಿನಿ ಮುನಿಯಿಂದ ರಚಿತವಾದುದೆಂಬುದನ್ನು ಸೂಚಿಸುತ್ತದೆ. ಹೀಗಾಗಿ ಲಕ್ಷ್ಮೀಶನ 'ಜೈಮಿನಿ ಭಾರತ' ಸಂಸ್ಕೃತ ಜೈಮಿನಿ ಭಾರತದ ಸಂಗ್ರಹ ರೂಪವಾದ ಕನ್ನಡಾನುವಾದವಾಗಿದೆ.

ಜೈಮಿನಿ ಭಾರತದ ಕಥಾವಸ್ತು ಬಹುಮಟ್ಟಿಗೆ ಮೂಲವನ್ನೆ ಅವಲಂಬಿಸಿದೆ. ಮೂಲ ಜೈಮಿನಿ ಮುನಿಯಿಂದ ರಚಿತವಾದ ಭಾರತವನ್ನು ಕವಿ ಲಕ್ಷ್ಮೀಶನು ಕನ್ನಡದಲ್ಲಿ ಮೂಲ ಶೀರ್ಷಿಕೆಯನ್ನು ಬಳಸಿಯೇ ರಚಿಸಿರುವನು.

**ರಾಮಾಯಣ(ವಾಲ್ಮೀಕಿ)**

ರಾಮಾಯಣ ಮತ್ತು ಮಹಾಭಾರತಗಳು ಹಿಂದೂ ಧಾರ್ಮಿಕ ಪವಿತ್ರ ಗ್ರಂಥಗಳು, ಎರಡು ಮಹಾಕಾವ್ಯಗಳು ಎನಿಸಿಕೊಂಡಿರುವ ಈ ವಸ್ತುವನ್ನು ಬಳಸಿಕೊಂಡು ಕೃತಿ ರಚನೆ ಮಾಡಿರುವವರ ಸಂಖ್ಯೆ ಹೆಚ್ಚಾಗಿದೆ. ಅದಕ್ಕಾಗಿಯೇ 'ರಾಮಾಯಣಗಳ ಭಾರದಲಿ ತಿಣುಕಿದನು ಫಣಿರಾಯ' ಎಂದು ಕವಿ ಕುವೆಂಪು ಅವರು ಹೇಳಿರುವರು.

ರಾಮಾಯಣ ಮಹಾಕಾವ್ಯ ಅಷ್ಟೇ ಅಲ್ಲ ಪುರಾತನ ಸಂಸ್ಕೃತಿಯ ಅತ್ಯಂತ ಅಪೂರ್ವವಾದ ಕೃತಿಯಾಗಿದೆ. ಸಂಸ್ಕೃತ ಭಾಷೆಯಲ್ಲಿ ರಚಿತವಾದ ಈ ಕೃತಿ ಭಾರತೀಯ

ಕಾವ್ಯಸಂಸ್ಕೃತಿಯ ಮೊದಲ ಕಾವ್ಯವೆಂಬ ಹಿರಿಮೆಗೆ ಪಾತ್ರವಾಗಿದೆ. ೨೪೦೦೦ ಶ್ಲೋಕಗಳಿಂದ ಕೂಡಿರುವ ಈ ಮಹಾಕಾವ್ಯದಲ್ಲಿ ಕವಿ ವಾಲ್ಮೀಕಿ ಮಹರ್ಷಿಗಳು ಮೊದಲ ಶ್ಲೋಕದಲ್ಲೆ ನಾರದರನ್ನು ಸ್ತುತಿಸುತ್ತಾರೆ.

'ತಪಸ್ವಾಧ್ಯಾಯ ನಿರತಂ ತಪಸ್ವೀವಾಗ್ವಿದಾಂವರಂ।
ನಾರದಂ ಪರಿಪ್ರಪಚ್ಛ ವಾಲ್ಮೀಕಿಮುನಿಪುಂಗವಮಂ॥'

**ವಾಲ್ಮೀಕಿ ರಾಮಾಯಣ**

ತಪಸ್ಸಿನಲ್ಲಿಯೂ, ವೇದಾಧ್ಯಯನದಲ್ಲಿಯೂ ಸದಾಕಲಾವೂ ನಿರತನಾಗಿದ್ದು, ವೇದಾರ್ಥಗಳನ್ನು ತಿಳಿದವರಲ್ಲಿ ಪರಮ ಶ್ರೇಷ್ಠರೂ ಋಷಿ ಪುಂಗವರು ಆದ ನಾರದ ಮಹರ್ಷಿಗಳನ್ನು ಸ್ತುತಿಸುತ್ತಾರೆ. ಶ್ಲೋಕದ ನಂತರ ನಾರದರ ಸ್ತುತಿ ಮಾಡಲಾಗಿದೆ.

ದೇವ ದ್ವಿಜ ಗುರು ಪ್ರಜ್ಞ ಪೂಜನಂ ಶೌಚ ಮಾರ್ಜವಂ
ಬ್ರಹ್ಮಚರ್ಯ ಮಹಿಂಸಾಚ ಶಾರೀರಂ ತಪಂ ಉಚ್ಯತೇ
ಅನುದ್ವೇಗ್ರರಂ ವಾಕ್ಯ ಸತ್ಯಂ ಪ್ರಿಯಹಿತಂಯತ್
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪಂ ಉಚ್ಯತೇ
ಮನಃ ಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ
ಭಾವ ಸಂಶುದ್ದಿರಿತ್ಯೇ ತತ್ತಪೋ ಮಾನಸ ಮುಚ್ಯತೇ

**ವಾಲ್ಮೀಕಿ ರಾಮಾಯಣ**

ದೇವತೆಗಳನ್ನು, ಬ್ರಾಹ್ಮಣರನ್ನು, ಗುರುಗಳನ್ನು ಮತ್ತು ಜ್ಞಾನಿಗಳನ್ನು ಪೂಜಿಸುವುದು ಮನಶುದ್ಧಿಗಾಗಿ, ದೇಹಶುದ್ಧಿ, ಶರೀರದ ಅಂಗಾಂಗಗಳನ್ನು ಅವುಗಳ ಋಜು ಸ್ವಭಾವದಲ್ಲಿಟ್ಟು ಕೊಳ್ಳುವಿಕೆ ಬ್ರಹ್ಮಚರ್ಯ ಮತ್ತು ಅಹಿಂಸೆ ಇವು ಶಾರೀರಿಕ ತಪಸ್ಸಿನ ಲಕ್ಷಣಗಳು, ಮತ್ತೊಬ್ಬರಿಗೆ ನೋವನ್ನುಂಟು ಮಾಡದಂತೆಯೂ, ಸತ್ಯವೂ, ಪ್ರಿಯವೂ, ಹಿತವೂ ಅಗಿರುವ ರೀತಿಯಲ್ಲಿ ಮಾತನಾಡುವಿತೆ ಮತ್ತು ವೇದಾಧ್ಯಯನ ಅಥವಾ ಭಗವಜ್ಞಾನ ಬೋಧಕವಾದ ಗ್ರಂಥಗಳ ಪಠಣ ಇವು ವಾಚಕ ತಪಸ್ಸಿನ ಲಕ್ಷಣಗಳು. ಮನಶ್ಯಾಂತಿ, ಸೌಮ್ಯತೆ, ಮೌನ ಆತ್ಮ ಸಂಯಮ ಅಥವಾ ಇಂದ್ರಿಯ ನಿಗ್ರಹ, ಚಿತ್ರ ಶುದ್ಧಿ ಇವು ಮಾನಸಿಕ ತಪಸ್ಸಿನ ಲಕ್ಷಣಗಳು. ಈ ಎಲ್ಲ ಲಕ್ಷಣಗಳಿಂದ ಕೂಡಿ ವೇದಾಧ್ಯಯನ ಸಂಪನ್ನರೂ, ವೇದಜ್ಞಾನವನ್ನು ಪಡೆದವರಲ್ಲಿ ಉತ್ತಮರೆನಿಸಿಕೊಂಡವರಲ್ಲಿ ನಾರದರು ಶ್ರೇಷ್ಠರಾಗಿರುವರು ನಾರದರಾಗಿದ್ದಾರೆ. ಅಂತಹ ಯೋಗ್ಯ ಮುನಿಗಳಾದ ನಾರದ ಮಹರ್ಷಿಗಳನ್ನು ಕಾವ್ಯಾರಂಭದಲ್ಲಿ ಸ್ತುತಿಸುತ್ತೇನೆಂದು ವಾಲ್ಮೀಕಿಗಳು ನಾರದರನ್ನು ಪೂಜಿಸುತ್ತಾರೆ.

ಸಂಸ್ಕೃತ ಮಹಾಕವಿ ಭವಭೂತಿ ಮೂರು ರೂಪಕಗಳನ್ನು ರಚಿಸಿದ್ದು ತಿಳಿದುಬರುತ್ತದೆ. ಮಹಾವೀರ ಚರಿತೆ, ಮಾಲತೀ ಮಾಧವ ಮತ್ತು ಉತ್ತರ ರಾಮ ಚರಿತೆ ಇವು ಮೂರು ಸಂಸ್ಕೃತ ಕೃತಿಗಳಾಗಿದ್ದು ಈತನು ಬದುಕಿನ ಕಾಲ ಕ್ರಿ.ಶ.ಸು.೭ನೆಯ ಶತಮಾನವೆಂದು ಕಂಡುಬರುತ್ತದೆ. ಈ ಕವಿಗೆ ಶ್ರೀಕಂಠ ಎಂಬ ಬಿರುದು ಇತ್ತು ಎಂಬುದು ತಿಳಿದುಬರುತ್ತದೆ. ದಕ್ಷಿಣಾಪಥದ ಪದ್ಮಪುರ ಈತನ ಜನ್ಮಸ್ಥಳ.

ಪೂರ್ವ ಕವಿಗಳಿಗೆರಗಿ ಹಾರೈಪೆವಿದನು
ಆತ್ಮಕಲೇ ಅಮೃತೆ ವಾಗ್ದೇವಿ ಬರಲೆಂದು॥

**ಕನ್ನಡ ಉತ್ತರರಾಮಚರಿತೆ, ಅನು:ಸಿ.ಪಿ.ಕೆ.**

ಭವಭೂತಿ ಕವಿಯ ಉತ್ತರರಾಮ ಚರಿತದ ನಾಂದಿಪದ್ಯ ಬಹಳ ವಿಶೇಷವಾಗಿದ್ದು, ಕೇವಲ ಎರಡು ಸಾಲಿನ ನಾಂದಿಯಲ್ಲಿ ಪೂರ್ವಕವಿಗಳನ್ನು ಹಾಗೂ ಸರಸ್ವತಿಯನ್ನು ಸ್ತುತಿಸಲಾಗಿದೆ.

ಸಂಸ್ಕೃತ ಕವಿ ಭವಭೂತಿಯ ಮತ್ತೊಂದು ಕಾವ್ಯ ಮಹಾವೀರ ಚರಿತೆ. ಇದರಲ್ಲಿ ವರ್ಧಮಾನ ಮಹಾಸ್ವಾಮಿಯ ಜೀವನ ಚರಿತ್ರೆಯು ಕಂಡುಬರುತ್ತದೆ.

ಆವುದೂ ಆಧಾರವಿರದೆಯೆ ತನಗೆ ತಾನಾಧಾರನಾದವನಾವನು
ದೇವನಾವನು ನಿತ್ಯನಾವನು ಪಾಪಹಾರಕನೆನಿಸಿದಂಥವನಾವನು
ಜನನ ಮೊದಲಾಕ್ರಮ ವಿಭಾಗ ವಿದೂರನೆನ್ನಿಸಿದಂಥವನು ತಾನಾವನು
ಅಂಥ ಚೈತನ್ಯದಾದಿಜ್ಯೋತಿ ರೂಪನ ನಿಂದ ನಾನಿದೊ ಮಣಿವೆನು

**ಕನ್ನಡ ಮಹಾವೀರಚರಿತೆ ಅನು: ಎಸ್.ವ್ಹಿ.ಪರವೇಶ್ವರಭಟ್**

**ಶ್ರೀ ಹರ್ಷನ ರತ್ನಾವಳಿ**

ಈ ಹರ್ಷನ ರತ್ನಾವಳಿ ಸಂಸ್ಕೃತ ನಾಟಕ, ಕನ್ನಡದ ಪ್ರಥಮ ನಾಟಕ ಮಿತ್ರಾವಿಂದ ಗೋವಿಂದವು ರತ್ನಾವಳಿಯ ಅನುವಾದ ಕೃತಿಯಾಗಿದೆ. ಮಿತ್ರಾವಿಂದ ನಾಟಕದ ಭಾಷೆ ಹಳಗನ್ನಡವಾಗಿದ್ದು, ಇದರ ಕರ್ತೃ ಸಿಂಗರಾರ್ಯ. ಮೂಲ ರತ್ನಾವಳೀಯ ವತ್ಸರಾಜ ಇಲ್ಲಿ ಶ್ರೀಕೃಷ್ಣನಾಗಿ, ವಾಸವಹತ್ತೆ ರುಕ್ಮಿಣಿಯಾಗಿ, ಸಾಗರಿಕೆಯು ಸರಸ್ವತಿಯಾಗಿ ವಿದೂಷಕನು ಕುಚೇಲನನ್ನಾಗಿ ಚಿತ್ರಿಸಲ್ಪಟ್ಟಿದೆ.

ಪಾದಾಗ್ರಸ್ಥಿತಯಾ ಮುಹುಃಸ್ತುನಭರೇಣಾ ನೀತಯಾ ನಮ್ರತಾಂ
ಶಂಬೋಃ ಸಸ್ಪಹ ಲೋಚನತ್ರಯಪಥಂ ಯಾಂತ್ಯಾ ತದಾರಾಧನೇ ।

ಹ್ರೀ ಮತ್ಯಾ ಶಿವಸೀಹಿತ ಸಪುಲಕಸ್ವೇದೋದ್ಗ ಮೋತ್ಕಂಪಯಾ
ವಿಶ್ಲಿಷ್ಯನ್ ಕುಸುಮಾಂಜಲಿರ್ಗಿರಿಜಯಾ ಕ್ಲಿಪ್ತೋಂ ತರೇಪಾತುವಃ ರತ್ನಾವಳಿ॥೧॥
ಅವನ ಸೇವೆಯೊಳಗಜೆ ಪಾದಗ್ರದೊಳು ನಿಲ್ಲುತೆ ನಿಮಿರುತೆ
ತನ್ನ ಕುಚ ಭಾರದೊಳು ತಾನಡಿಗಡಿಗೆ ಬಾಗುತೆ ಬಳುಕುತೆ
ಶಿವನ ಸಸ್ಪೃಹ ಲೋಚನತ್ರಯ ಪ್ರಥಮ ನೈದುತೆ ನಾಚುತೆ
ಸ್ವೇದ ಕಂಪನ ಪುಳಕದೊಡವೆರೆದರ್ಪಿಸಿದ ಸುಮದಂಜಲಿ
ಶಿವನ ಗಿರಿಜೆಯ ನಡುವೆ ಬಿದ್ದಿರಲದುವೆ ನಮ್ಮನು ಪೊರೆಯಲಿ

**ಕನ್ನಡ ರತ್ನಾವಳಿ ಅನು:**

ಔತ್ಸುಕ್ಯೇನ ಕೃತತ್ವರಾ ಸಹಭುವಾ ವ್ಯಾತರ್ತನಾಹ್ರಿಯಾ
ತೈಸ್ತೈರ್ಬಂಧು ವಧೂ ಜನಸ್ಯ ವಚನೈರ್ನೀತಾಭಿಮುಖ್ಯ ಪುನಃ
ದೃಷ್ಟ್ವಾಗ್ರೇ ವರಮಾತ್ತ ಸಾಧ್ವ ಸರಸಾಗೌರೀ ನವೇಸಂಗಮೇ
ಸುರೋಹೃತ್ಪುಲಕಾ ಹರೇಣ ಹಸತಾಶ್ಲಿಷ್ಟಾ ಶಿವಾಯಾಸ್ತುವಃ ॥
ತ್ವರೆಯೊಳಾವಳು ತನ್ನ ನವ ಸಂಗಮದ ಔತ್ಸುಕ್ಯದೊಳು ಪತಿಯನು ಸಾರ್ದಳು
ಮತ್ತದಾವಳು ಹುಟ್ಟು ಗುಣವಹ ಲಜ್ಜೆಯೊಳು ಹಿಂದಿರುಗಿ ಒಡನೆಯೆ ಬಂದಳು
ಮತ್ತೆ ವಧುವಿನ ಬಂಧು ಜನಗಳದಾವಳನು ಪರಿಪರಿಯ ಬೋಧೆಯನುಡಿಯೊಳು
ಧೈರ್ಯ ದುತ್ಸಾಹವನು ತುಂಬುತೆ ಪತಿಯ ಸನ್ನಿದಿಗೊಯ್ದು ಬಿಟ್ಟರು ಒಲವೊಳು
ನೇರ ಎದುರಿನೊಳಿರುವ ವರವನು ನೋಡಿ ಮೈಗುಡಿಗಟ್ಟಿ ಸಾಧ್ವಸದೊಳು
ಅಳ್ಕದಾವಳಿನೊಡನೆ ಶಂಬುವು ನಗುತೆ ಬರಸೆಳೆದುಕೊಂಡನು ಭರದೊಳು
ಅಂಥ ಗೌರಿಯು ನಿಮಗೆ ನಿತ್ಯವು ತಾಂ ಶಿವಪ್ರದೆಯಾಗಿ ಮೆರೆಯಲಿ ಧರೆಯೊಳು

**ಅನು:(೨)**

ಕ್ರೋದೇದ್ಧೈರ್ದೃಷ್ಟಿಪಾತೈಸ್ತ್ರಿಭಿರುಪಶಮಿತಾ ವಹ್ನಯೋಮಿೂ ತ್ರಯೋಪಿ
ತ್ರಾಸಾರ್ತಾ ಋತ್ವಿಜೋ ಧ್ವಜ ಪಲಗಣಹೃತೋಷ್ಲಿಷ ಹಟ್ಟಾಃ ಪಂತಂತಿ
ದಕ್ಷಃ ಸ್ತೌತಸ್ಯ ಪತ್ನಿ ವಿಲಪತಿ ಕರುಣಂ ವಿದ್ರುತಂ ಚಾಪಿ ದೇವೈ
ಶಂ ಸನ್ನಿತ್ಯಾತ್ತ ಹಾಸೋ ಮುಖಮಥನ ವಿದೌ ಪಾತು ದೇವ್ಯೈ ಶಿವೋ ವಃ

**ರತ್ನಾವಳಿ(೩)**

ಜಿತಮುಡು ಪತಿನ ನಮಃ ಸುರೇಭ್ಯೋ ದ್ವಿಜ ವೃಷಬಾ ನಿರುಪದ್ರವಾ ಭವಂತು॥
ಭವತು ಚ ಪೃಥಿವೀ ಸಮೃದ್ಧ ಸಸ್ಯಾ
ಪ್ರತಪತು ಚಂದ್ರವ ಪುರ್ನರೇಂದ್ರ ಚಂದ್ರ ॥

ರತ್ನಾವಳಿ(೪)

ಉಡುಪಗೆಲ್ಲಲ್ಲಿ ಸುರರು, ನಮನಂಗೊಳ್ಳಲಿ
ವಿಪ್ರವೃಷಭರುಮಿರಲಿ ನಿರುಪದ್ರವದಲಿ
ಪೃತ್ವಿ ಸಸ್ಯ ಸಮೃದ್ದಿಯೊಳು ಸಲೆ ನಲಿಯಲಿ
ಚಂದ್ರವಪುವು ನರೇಂದ್ರ ಚಂದ್ರನು ಬೆಳಗಲಿ

**ಅನು.ಕರ್ನಾಟಕ ರತ್ನಾವಳಿ**

ಹೀಗೆ ಶ್ರೀಹರ್ಷನ ರತ್ನಾವಳಿಯಲ್ಲಿ ಬರುವ ದೇವತಾ ಸ್ತುತಿಗಳಲ್ಲಿ ಶಿವ ಮತ್ತು ಗೌರಿಯ ಸ್ತುತಿಗಳನ್ನು ಮೂರು ಪದ್ಯಗಳಲ್ಲಿ ಮಾಡಿ ನಂತರ ನರೇಂದ್ರ ಚಂದ್ರನ ಅಥವಾ ರಾಜನನ್ನು ಚಂದ್ರನಿಗೆ ಹೋಲಿಸಿ ಸ್ತುತಿಸುತ್ತಾನೆ.

**ಅಚ್ಯುತರಾಯಾಭ್ಯುದಯಮಂ**

ಸಂಸ್ಕೃತ ಕವಿ ರಾಜನಾಥ ಡಿಂಡಿಮನಿಂದ ರಚಿತವಾದ ಅಚ್ಯುತರಾಮಾಭ್ಯುದಯಂ ಎಂಬ ಕಾವ್ಯವನ್ನು ಕನ್ನಡಕ್ಕೆ ಯಥಾವತ್ತಾಗಿ ಅನುವಾದಿಸಿದರು. ಡಾ.ಸುಚೇತಾ ನವರತ್ನ ವಿಜಯನಗರ ಕಾಲದ ಅಚ್ಯುತರಾಯನ ಆಳ್ವಿಕೆಯ ವಿಷಯವನ್ನೊಳಗೊಂಡ ಈ ಮಹಾಕಾವ್ಯ ಚಾರಿತ್ರಿಕ ವಿಷಯಗಳ ಮೇಲೆ ಬೆಳಕು ಚಲ್ಲುವ ಕಾವ್ಯವಾಗಿದ್ದು, ಆ ಕಾಲದ ಇತಿಹಾಸವನ್ನು ತಿಳಿಸುವ ಹನ್ನೆರಡು ಸರ್ಗಗಳಿಂದ ಕೂಡಿದ ದಾಖಲಾರ್ಹ ಮಹಾಕಾವ್ಯವಾಗಿದೆ. ಈ ಕಾವ್ಯವನ್ನು ಬರುವ ಹಲವು ನಾಂದಿ ಪದ್ಯಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**ವಿಷ್ಣು ಮತ್ತು ಶಿವಸ್ತುತಿ**

ನಾಲೀಕಾಕ್ಷಮಲೀಕಾಕ್ಷಂ ನಾಗೇಶಯಮಗೇಶಯಮ್॥
ವಿಪುಂಗವಧ್ವಜಂ ಧಾಮ ಪುಂಗವಧ್ವಜ ಮಾಶ್ರಯೇ ॥

ರಾಜನಾಥ ಡಿಂಡಿಮ

ಇದೊಂದು ಪ್ರಾರ್ಥನಾ ಪದ್ಯವಾಗಿದ್ದೂ, ಒಂದೇ ವರ್ಣನೆಯಿಂದ ಎರಡು ಅಂಶಗಳನ್ನು ಇಲ್ಲಿ ಹೇಳಲಾಗಿದೆ. ಕಮಲದಂತೆ ಕಣ್ಣುಳ್ಳ ಶೇಷಶಾಯಿಯಾದ, ಗರುಡಧ್ವಜನಾಗಿ ತೇಜಪುಂಜನಾದ ವಿಷ್ಣುವನ್ನು ಭಜಿಸಿರಿ, ಇನ್ನೊಂದರ್ಥದಲ್ಲಿ ಮುಕ್ಕಣ್ಣನು, ಪರ್ವತಶಾಯಿ,

ವೃಷಭ ಧ್ವಜನಾಗಿ ತೇಜಹುಂಜನಾದ ಶಿವನನ್ನು ಭಜಿಸಿರಿ. ಒಂದರ್ಥದಲ್ಲಿ ವಿಷ್ಣುವನ್ನು ಇನ್ನೊಂದರ್ಥದಲ್ಲಿ ಶಿವನನ್ನು ಏಕಕಾಲಕ್ಕೆ ಸ್ತುತಿಸುತ್ತದೆ(ಅನು:ಸುಚೇತಾ ನವರತ್ನ).

ಕಾವ್ಯಾರಂಭದಲ್ಲೇ ಎರಡು ದೇವತೆಗಳನ್ನು ಸ್ತುತಿಸಿರುವುದನ್ನು ಗಮನಿಸಿದರೆ, ಶೈವ ಮತ್ತು ವೈಷ್ಣವ ಧರ್ಮಗಳು ಮಹತ್ವವನ್ನು ಹೊಂದಿದ್ದವೆಂದು ಕಾಣುತ್ತದೆ. ಹಾಗಾಗಿ ಶಿವ ಮತ್ತು ವಿಷ್ಣುವನ್ನು ಏಕಕಾಲಕ್ಕೆ ಸ್ತುತಿಸಲಾಗಿದೆ.

**ವಿಷ್ಣುಸ್ತುತಿ**

ಅವ್ಯಾದಪೂರ್ವೋ ನಿಧಿರಾರಗಮಾನಾ
ಮಾದ್ಯೋ ವೃಷಾದ್ರೇಃ ಪತಿರಚ್ಯುತೇಂದ್ರಮ್।
ನಿರೀಕ್ಷಿತುಂ ನಿಃ ಸ್ಪೃಹಕಾಂಕ್ಷಿತಂಯಂ
ನಿರಂಜನಾ ಏವ ಜನಾಃ ಕ್ಷಮಂತೇ॥

ರಾಜನಾಥ ಡಿಂಡಿಮ(೧)

ಅಪೂರ್ವವಾದ ನಿಧಿಯಾದ ವೇದಶಾಸ್ತ್ರಗಳು ಸರ್ವಜಗತ್ತಿಗೆ ಆದಿಯಾದವುಗಳು ಅಥವಾ ಈ ನಿಧಿಯು ಸರ್ವ ಜಗತ್ತಿಗೂ ಮೂಲವಾದುದು ಅಂತಹ ನಿಧಿ ವೈಶಿಷ್ಟ್ಯದಿಂದ ಕೂಡಿದ ವೃಷಾದ್ರಿ ಒಡೆಯನಾದ ಶ್ರೀನಿವಾಸನು ಅಚ್ಯುತರಾಯನನ್ನು ರಕ್ಷಿಸಲಿ ನಿಸ್ಪೃಹರಾದವರು ನಿಧಿಯನ್ನು ಅಂಜನವಿಲ್ಲದೇ ಕಾಣಬಹುದಾದ/ನೋಡಲು ಸಾಧ್ಯವಿದೆ. ನಿಧಿ ಆಸೆಯಿರುವವರು ಅಂಜನದಿಂದಲೇ ನಿಧಿಯ ಲಕ್ಷಣವನ್ನು ನೋಡುವರು(ಅನು: ಡ.ಸುಚೇತಾ ನವರತ್ನ).

ಈ ಪದ್ಯದಲ್ಲಿ ವೇದಶಾಸ್ತ್ರಗಳು ಎಲ್ಲಾ ಜಗತ್ತಿಗೂ ಅಪೂರ್ವ ನಿಧಿಗಳು. ಅಂಥಹ ನಿಧಿ ವೈಶಿಷ್ಟ್ಯದಿಂದ ಕೂಡಿರುವ ಶ್ರೀನಿವಾಸ ಅಚ್ಚುತರಾಯನನ್ನು ರಕ್ಷಿಸಲಿ ಎನ್ನುವ ಮೂಲಕ ಡಿಂಡಿಮ ಕವಿಯು ಶ್ರೀನಿವಾಸ ಅಥವಾ ಮಹಾವಿಷ್ಣುವನ್ನು ಸ್ತುತಿಸಿದ್ದಾನೆ. ಹಾಗೂ ರಾಜನ ರಕ್ಷಣೆ ಬಹು ಮುಖ್ಯವಾಗಿದೆ.

ಧಮ್ಮಿಲ್ಲ ಶೈವಾಲಧರಾ ವಿರಾಜ
ದಪಾಂಗಮೀನಾಧರ ವಿದ್ರುಮಾಪ್ತಾ ।
ಧನ್ಯಾ ಪಿತೃಚ್ಛಾಯತಯಾಬ್ದಿ ಕನ್ಯಾ
ತನ್ಯಾದವನ್ಯಾಂ ವಿಶ್ರಮಚ್ಚುತೇಂದ್ರೋ ॥೨॥

ಈ ಪದ್ಯದಲ್ಲೂ ಕೂಡ ಶ್ರೀನಿವಾಸನು ಅಚ್ಚುತೇಂದ್ರನನ್ನು ರಕ್ಷಿಸಲಿ ಎಂಬ ಕೋರಿಕೆಯನ್ನು ಒಳಗೊಂಡಿದೆ. ಅಚ್ಚುತರಾಯನ ರಕ್ಷಣೆ ಎಂದು ಈ ಪದ್ಯದಲ್ಲಿರುವುದರಿಂದ ಇದೊಂದು ರಾಜನ ಸ್ತುತಿಯಂತೆ ಕಂಡುಬರುತ್ತದೆ.

ಸುವರ್ಣ ರೂಪೈಃ ಶುಭನಾಮಕಾಂಕೈ
ರೌಜ್ವಲ್ಯವದ್ಭಿರ್ಧ್ವ ನಿಮಶ್ನುವಾನೈಃ
ಪರಿಷ್ಕೃತಾದಿಕ್ಷಿತಿಪಾನ್ ಪ್ರಬಂಧೈಃ
ಪ್ರಾಚೇತಸಾದೀನ್ ಪ್ರಣುಮಃ ಕವೀಂದ್ರಾನ್ ॥೩॥

ಪಾಚಿಯನ್ನು ಮುಡಿಗಂಟಾಗಿ ಹೊಂದಿರುವ ಕಡೆಗಣ್ಣ ನೋಟದಿಂದ ವಿರಾಜಿಸುವ ಮೀನಿನಂಥ ಹವಳದ ತುಟಿ ಹೊಂದಿರುವ ಧನ್ಯಳಾದ, ಸಮುದ್ರ ಕನ್ಯೆಯಾದ ಲಕ್ಷ್ಮಿಯು, ಪಿತೃ ಸದೃಶನಾಗಿ ಭೂಮಿಯನ್ನು ಪರಿಪಾಲಿಸುತ್ತಿರುವ ಅಚ್ಯುತೇಂದ್ರನನ್ನು ಶ್ರೇಯೋಭಿವೃದ್ಧಿಗಳಿಂದ ರಕ್ಷಿಸಲಿ(ಅನು: ಸುಚೇತಾ ನವರತ್ನ).

ಮೇಲಿನ ಎರಡು ಪದ್ಯಗಳಲ್ಲಿ ಶ್ರೀನಿವಾಸನು ಅಚ್ಯುತರಾಯನನ್ನು ರಕ್ಷಿಸಲಿ ಎಂದಿದ್ದರೆ, ಈ ಪದ್ಯದಲ್ಲಿ ಕಡಲ ಕನ್ಯೆಯಾದ ಶ್ರೀದೇವಿ ಅಥವಾ ಲಕ್ಷ್ಮಿಯು ತಂದೆಯ ಹಾಗೇ ಭೂಮಿಯನ್ನು ಕಾಪಾಡುತ್ತಿರುವ ಅಚ್ಚುತರಾಯನನ್ನು ರಕ್ಷಿಸಲಿ ಎಂದು ವರ್ಣಿಸಲಾಗಿದೆ.

ಕಥಂ ನು ವರ್ಣ್ಯಾ ಭುವಿ ಕಾಲಿದಾಸ
ಮಯೂರ ಮಖಾದಿ ಮಹಾಕವೀಂದ್ರಾಃ।
ಪುರಾತನೀಂ ಪುರುಷಭೂಮಿಕಾಂ ಯರು
ದ್ವೇಷೇಣ ಧೃತ್ವಾ ವಿನನರ್ತ ವಾಣೀ॥

**ರಾಜನಾಥ ಡಿಂಡಿಮ**

ಸುವರ್ಣಾ ಭರಣದ ಮಧ್ಯಮಣಿಯಂತೆ ಕಾಂತಿವಿಶಿಷ್ಟವಾದ, ಧ್ವನಿತತ್ವವನ್ನು ತಮ್ಮ ಕಾವ್ಯಾದಿ ಪ್ರಬಂಧಗಳಲ್ಲಿ ಪಡೆದು ಅಲಂಕೃತರಾದ, ವಾಲ್ಮೀಕಿಯೇ ಮೊದಲಾದ ಶ್ರೇಷ್ಠ ಕವಿಗಳು ರಾಮನಾದಿಯಾಗಿ ರಾಜರುಗಳನ್ನೆಲ್ಲ ಸ್ತುತಿಸಿದ್ದಾರೆ(ಅನು.ಸುಚೇತಾ ನವರತ್ನ).

ಬಂಗಾರದ ನಡುವಿನ ಮುತ್ತಿನ ವೋಪಾದಿಯಲ್ಲಿರುವ ಕಾಳಿದಾಸ ಮಯೂರ ವಾಲ್ಮೀಕಿ, ವ್ಯಾಸ ಮುಂತಾದ ಕವಿಗಳು ರಾಜಾಸ್ಥಾನದಲ್ಲಿದ್ದುಕೊಂಡು ರಾಮನಿಂದ ಹಿಡಿದು ಮುಂದೆ ಬಂದಿರುವ ಎಲ್ಲ ರಾಜ ಮಹಾರಾಜರನ್ನು ತಮ್ಮದೇ ಆದ ಶೈಲಿಯಲ್ಲಿ ಸ್ತುತಿಸಿದ್ದಾರೆ.

ಆದ್ದರಿಂದ ನಾನೂ ಕೂಡ ಅಚ್ಯುತರಾಯನನ್ನು ಸ್ತುತಿಸುತ್ತಿರುವೆನೆಂಬುದು ಡಿಂಡಿಮನ ಅಭಿಪ್ರಾಯವಾಗಿದೆ.

ಅಸ್ತಿ ಸ್ಮರಪ್ರಾಭೃತಮಕ್ಷಿ ಶೌರೇ
ರದಕ್ಷಿಣಂ ಶೇಖರ ಪುಷ್ಪಮೈಶಮ್ ।
ಅಪಾಂನಿಧೇರದ್ಬುತ ನಾಟ್ಯವಿದ್ಯಾ
ಗುರುಕೋರೀಕುಲಬಂಧುರಿಂದುಃ ॥

ಮನ್ಮಥನಿಗೆ ಉಪಾಯನವಾಗಿ, ವಿಷ್ಣುವಿಗೆ ಎಡಗಣ್ಣಾಗಿ, ಶಿವನು ತಲೆಯಲ್ಲಿ ಧರಿಸಿದ ಶೇಖರ ಪುಷ್ಪವಾಗಿ, ಸಮುದ್ರದ ಅದ್ಭುತಕಾರೀ ನಾಟ್ಯರೂಪಕ್ಕೆ ಅಂದರೆ ಅಲ್ಲೋಲ ಕಲ್ಲೋಲಗಳಿಗೆ ಗುರುವಾಗಿ, ಚಕೋರ ಪಕ್ಷಿಗಳ ಕುಲ ಬಂಧುವಾಗಿ ಚಂದ್ರನಿರುವನು. (ಅನು.ಸುಚೇತಾ ನವರತ್ನ).

ಈ ಪದ್ಯದಲ್ಲಿ ಚಂದ್ರನ ವರ್ಣನೆ ಮಾಡಲಾಗಿದೆ. ಮನ್ಮಥ, ವಿಷ್ಣು, ಶಿವನಿಗೆ ಬೇಕಾಗಿರುವ ಚಂದ್ರನನ್ನು ಕಂಡು ಸಮುದ್ರ ಉಕ್ಕಿರುವುದು, ಚಂದ್ರನ ಬೆಳದಿಂಗಳನ್ನು ಕುಡಿದು ಚಕೋರ ಪಕ್ಷಿಗಳು ಬದುಕುವವು ಇಂತಹ ಚಂದ್ರನಾದ ಅಚ್ಯುತರಾಯನು ಸಜ್ಜನ ರಕ್ಷಕನಾಗಲಿ ಎಂಬ ಭಾವಾರ್ಥವನ್ನು ಹೊಂದಿದೆ.

ಈ ಕೃತಿಯ ನಾಂದಿಪದ್ಯಗಳಲ್ಲಿ ಶ್ರೀನಿವಾಸ, ಶ್ರೀದೇವಿ ಪೂರ್ವಕವಿಗಳು ಮತ್ತು ಚಂದ್ರನ ಸ್ತುತಿಗಳ ಪದ್ಯಗಳೊಂದಿಗೆ ಈ ದೇವತೆಗಳೆಲ್ಲ ಅಚ್ಯುತರಾಯನನ್ನು ರಕ್ಷಿಸಲಿ ಎಂಬ ಬೇಡಿಕೆಯಿದೆ. ಕನ್ನಡ ಕಾವ್ಯಗಳಲ್ಲಿ ನೇರವಾಗಿ ಇಷ್ಟದೇವತೆ, ಇತರ ದೇವತೆ, ಪೂರ್ವಕವಿ ಸ್ಮರಣೆ, ಕುಕವಿ ನಿಂದೆ ಇತ್ಯಾದಿಗಳು ಇದ್ದರೆ, ಸಂಸ್ಕೃತ ಕಾವ್ಯಗಳಲ್ಲಿ ದೇವತೆಗಳು ರಾಜನನ್ನು ರಕ್ಷಿಸಲಿ ಎಂಬ ಬೇಡಿಕೆಯಿದೆ.

"ಕಾವ್ಯದ ಪರಮೋದ್ದೇಶ ರಸಾನುಭೂತಿ ರಂಗಸ್ಥಳದ ಮೇಲೆ ನಟರು ಅಭಿನಯಿಸಲೆಂದು ರಚಿತವಾಗುವ ಯಾವುದೇ ಕೃತಿ ನಾಟಕವಾಗುತ್ತದೆ. ನಾಟಕ ಕಾವ್ಯದ ಅತ್ಯಂತ ರಮ್ಯವಾದ ಪ್ರಕಾರ 'ಕಾವ್ಯೇಷು ನಾಟಕಂ ರಮ್ಯಂ' ಕಾವ್ಯಗಳಲ್ಲಿ ನಾಟಕವು ರಮ್ಯವಾದುದು ಎಂಬ ಮಾತು ಜನಜನಿತವಾಗಿದೆ. ನಾಟಕವನ್ನು ಸಾಹಿತ್ಯಕೃತಿಯೆಂದು ಓದುವುದು ಸಾಧ್ಯವಿದೆ. ಸಂಸ್ಕೃತ ಕವಿಗಳು ಹೆಚ್ಚು ನಾಟಕಪ್ರಿಯರಾಗಿದ್ದರು."[೨] ಆದರೆ ಕನ್ನಡ ಪ್ರಾಚೀನ ಸಾಹಿತ್ಯ ಸಂದರ್ಭದಲ್ಲಿ ಒಂದು ಸತ್ಯವಾದ ಸಂಗತಿ. ಏಕೆಂದರೆ ಕವಿಗಳು ಕಾವ್ಯಗಳನ್ನೇ ಬರೆದರೇ

ವಿನಃ ನಾಟಕ ರಚನೆಯ ಗೋಜಿಗೆ ಹೋಗಲಿಲ್ಲ. ಬರೆದರೆ ಮಹಾಕಾವ್ಯವನ್ನೇ ಬರೆಯಬೇಕೆಂಬ ಮಹತ್ವಾಕಾಂಕ್ಷೆಯಿಂದ ಕಾವ್ಯಗಳನ್ನೇ ರಚಿಸಿದರು. ರನ್ನನ ಗದಾಯುದ್ಧದಲ್ಲಿ ನಾಟಕೀಯತೆಯೇ ತುಂಬಿಕೊಂಡಿದೆ. ಹಾಗೂ ಹರಿಶ್ಚಂದ್ರ ಕಾವ್ಯದಲ್ಲಿ ರಾಘವಾಂಕನು ನಾಟಕಾಂಶಗಳಿಂದ ಕೂಡಿರುವ ದೃಶ್ಯಗಳನ್ನೆ ತಂದಿದ್ದಾನೆ.

ಸಂಸ್ಕೃತ ಭಾಷೆಯ ಪ್ರಸಿದ್ಧ ಕವಿಯೂ ಹಾಗೂ ನಾಟಕಕಾರನು ಆಗಿದ್ದ ಮಹಾಕವಿ ಕಾಳಿದಾಸನು ೧. ಅಭೀಜ್ಞಾನ ಶಾಕುಂತಲ, ೨. ಕುಮಾರ ಸಂಭವ, ೩. ಮೇಘದೂತ, ೪. ವಿಕ್ರಮೋರ್ವಶೀಯ, ೫. ಋತುಸಂಹಾರ, ೬. ಮಾಲವಿಕಾಗ್ನಿ ಮಿತ್ರ ೭. ರಘುವಂಶ, ೮. ಕುಂತಲೇಶ್ವರ ದೌತ್ಯ. ಹೀಗೆ ಎಂಟು ಕೃತಿಗಳನ್ನು ರಚಿಸಿರುವನೆಂದು ತಿಳಿಯಲಾಗಿದೆ. ಇದರಲ್ಲಿ ಋತು ಸಂಹಾರ, ಕುಮಾರ ಸಂಭವ, ಮೇಘದೂತ ಮತ್ತು ರಘುವಂಶ ಇವು ಕಾವ್ಯಗಳು ಹಾಗೂ ವಿಕ್ರಮೋರ್ವಶೀಯ, ಶಾಕುಂತಲ ಮತ್ತು ಮಾಲವಿಕಾಗ್ನಿ ಮಿತ್ರ ಇವು ನಾಟಕಗಳಾಗಿವೆ. ಕಾಳಿದಾಸನ ಕಾವ್ಯಾರಾಧನೆಯ ಆರಾಧ್ಯ ದೈವ ಶಿವನೆಂದು ಕಂಡುಬರುತ್ತದೆ.

"ವಾಗಾರ್ಥಾವಿವ ಸಂಪೃಕ್ತೌ ವಾಗಾರ್ಥ ಪ್ರತಿ ಪತ್ರಯೇ
ಜಗತಃ ಪಿತರೌ ವಂದೇ ಪಾರ್ವತಿ ಪರಮೇಶ್ವರೌ॥"

**ರಘುವಂಶ(ಕಾಳಿದಾಸ)**

ಮಾತು ಮತ್ತು ಅರ್ಥ ಪಾರ್ವತಿ ಪರಮೇಶ್ವರರಂತೆ ಒಂದುಗೂಡಿರಬೇಕು. ಜಗತ್ತಿನ ಸೃಷ್ಟಿಗೆ ಶಿವಶಕ್ತಿಯರೇ ಮಾತಾಪಿತರೆನಿಸಿದಂತೆ ಕಾವ್ಯವೂ ಕೂಡ ಅರ್ಧನಾರೀಶ್ವರರಂತೆ ಕಾವ್ಯದ ಶಬ್ಧಾರ್ಥಗಳು ಒಂದುಗೂಡಿರಬೇಕು ಎಂದು ಕಾವ್ಯ ಲಕ್ಷಣವನ್ನು ಕುರಿತು ಹೇಳುವನು.

**ಅಭಿಜ್ಞಾನ ಶಾಕುಂತಲಮ್**

'ಯಾ ಸೃಷ್ಟಿ ಸಷ್ಟರಾಧಾ ವಹತಿ ವಿಧಿಹುತ ಯಾ ಹವಿಯಾಚ ಹೋತ್ರಿ
ಏ ದೆ ಕಾಲಂ ವಿದತಃ ಶೃತಿ ವಿಷಯಗುಣಾ ಯಾರಿಥತಾ ವ್ಯಪ್ಯ ವಿಶ್ವಮ
ಯಾಮಾಹು ಸರ್ವಬೀಜಮ ಕೃತಿ ರಿತಿಯಯಾ ಪ್ರಾಣಿನಃ ಪ್ರಾಣವಂತಃ
ಪ್ರತ್ಯಾಕ್ಷಾಭಿಃ ಪ್ರಸನ್ನಸ್ತನುಭಿರವತು ವಸ್ತಾಭಿರಷ್ಟಾಬಿರೀಶಃ'

**ಅಭಿಜ್ಞಾನ ಶಾಕುಂತಲ(೧)**

ಸಂಸ್ಕೃತದ ಮಹಾಕವಿ ಕಾಳಿದಾಸನಿಂದ ರಚಿತವಾದ ಪ್ರಸಿದ್ಧ ಕೃತಿ 'ಅಭಿಜ್ಞಾನ ಶಾಕುಂತಲ' ಇದೊಂದು ದೃಶ್ಯಕಾವ್ಯ. ಇದರಲ್ಲಿ ಬರುವ ಮಂಗಲಾಚರಣ ಪದ್ಯವು ಶಿವಸ್ತುತಿಯನ್ನೊಳಗೊಂಡಿದೆ. ಹಾಗೂ ಕಲ್ಯಾಣಿ ರಾಗವನ್ನೂ ಹೊಂದಿದೆ.

ಬ್ರಹ್ಮಸೃಷ್ಟಿಯೊಳಂದು ತಾನೊಗೆದಿರ್ದುದಾದಿಯೊಳಾವುದು
ಶಾಸ್ತ್ರದೊಳು ಪೇಳ್ದಂತೆ ಬೇಳಿದ ಹವಿಯ ನೊಯ್ಯುವುದಾವುದು
ಹೋತೃವಾವುದು ಕಾಲಕರ್ತೃಕ ಯುಗಳ ಮೇಣಿನ್ನಾವುದು
ವಿಶ್ವವ್ಯಾಪಕವೆನುವ ಆ ಶ್ರುತಿ ವಿಷಯಗುಣ ವಿನ್ನಾವುದು
ಸರ್ವಬೀಜ ಪ್ರಕೃತಿಯೆನೆ ತಾ ಪೇಳೆ ಪಟ್ಟಿಹುದಾವುದು
ಸರ್ವಸತ್ವ ಪ್ರಾಣದಾಧಾರವದು ತಾ ನಿನ್ನಾವುದು
ಪೊರೆಯಲಾ ಎಣ್ಮೆಗಳೆರೆಯನು ಒಲಿದು ಈಶನು ಎಂದು ಅನುವಾದಿಸಿದ್ದಾರೆ.

**ಅನು: ಕನ್ನಡ ಅಭಿಜ್ಞಾನ ಶಾಕುಂತಲ**

ಕರ್ಣಾಟಕ ಶಾಕುಂತಲ ನಾಟಕ ಎಂಬ ಕೃತಿಯಲ್ಲಿ ಬಸವಪ್ಪ ಶಾಸ್ತ್ರಿಗಳು

ಆವುದು ಧಾತೃಸೃಷ್ಟಿಗೆ ಮೊದಲ್ ಹುತಹವ್ಯಯನಾಂ ಪುದಾವುದಿ
ನ್ನಾವುದು ಹೋತೃ ಶಬ್ದಗುಣಮಾವುದವಾವುವು
ಆವುದುಸಿರ್ ಜಗಕ್ಕುಸಿರ್ವರಾವುದ ಭೂತಕುಲ ಪ್ರಧಾನಮೆಂ
ದಾ ವೊಡೆಲೆಂಟರಿಂದೆ ಮೆರೆವೀಶ ನೊಡರ್ಚುಗೆ ನಿಮ್ಮಭೀಷ್ಟವಂ

**ಅನು: ಕರ್ಣಾಟಕ ಶಾಕುಂತಲ ನಾಟಕಂ**

ಚುರಮರೀ ಶೇಷಗಿರಿರಾಯರ ಅನುವಾದಿತ ಶಾಕುಂತಲ ನಾಟಕದಲ್ಲಿ ಬರುವ ನಾಂದಿ ಪದ್ಯ ಈ ರೀತಿಯಾಗಿದೆ.

ತಳೆದಿಹ ಪರಾತ್ಪರನು ಹರಿ। ನಾಟ್ಯರೂಪಂ ॥
ಜಲಮೆಲರು ವಿಳಿಯು। ತಿಳಿವು ಬೆಳಕು ಬಾಂ ॥
॥ದಳಂದಳಂ ತಾನೆಯಾಗಿ॥ ॥ಪಲ್ಲವಿ॥
ತಿಳಿಯ ತಿಳಿವ ಜಡಮಾದಾ। ಜೀವಮಾದಾ ।
ಕಲಿವ ತಾ ಕಲಿಸುವನು । ತಾನೆ ಸೋಲುವ ಗೆಲ್ಲುವ
ದೀನ । ನುತಾ । ದನಿ ತಾ ಸತಿ ಪತಿ ತಾ।

ದುಃಖ । ಸುಖ । ಬಡುವ ಅಳಿದು ಉಳಿವ

ನಿರುತದೊಳಳತಲಿ ನಗುತಲಿ

**ಶಾಕುಂತಲ ನಾಟಕಂ**

ಇಂಥ ಪರಮೇಶ್ವರನು ನಿಮ್ಮನ್ನು ರಕ್ಷಣೆ ಮಾಡಲಿ ಎಂದು ನಾಂದಿಯಾದ ಮೇಲೆ ಸೂತ್ರಧಾರನ ಪ್ರವೇಶವಾಗುತ್ತದೆ. ನಾಟಕದಲ್ಲಿ ಒಂದು ನಾಂದಿಯಾದ ನಂತರ ಪಾತ್ರಗಳ ಪ್ರವೇಶವಾದರೆ ಕಾವ್ಯಗಳಲ್ಲಿ ಹಲವು ನಾಂದಿ ಪದ್ಯಗಳು ಕಂಡುಬರುತ್ತವೆ. ಆದರೆ ಅಭಿಜ್ಞಾನ ಶಾಕುಂತಲ ವಿಶ್ವವಿಖ್ಯಾತನಾದ ಕವಿ ಕುಲಗುರು ಕಾಳಿದಾಸನ ಶ್ರೇಷ್ಠಕೃತಿ ಇದರ ರಸ, ರೀತಿ ಭಾವಭಂಗಿ ವಿನ್ಯಾಸಗಳೆಲ್ಲವೂ ವಿಶ್ವಸಾಹಿತ್ಯದಲ್ಲೆ ಲೋಕೋತ್ತರವಾದುದು. ಸಾಹಿತ್ಯ ಕ್ಷೇತ್ರಕ್ಕೆ ಹೊನ್ನ ಕಳಸವಾದ ಶಾಕುಂತಲ ಅದ್ವಿತೀಯ ಕಾವ್ಯವಾಗಿದೆ. "ಸಂಸ್ಕೃತದ ಈ ಕೃತಿಯು ಚಿನ್ನದ ಅದಿರು ಅದನ್ನು ದ್ರಾವಕಾದಿಗಳಿಂದ ಸಂಶೋಧಿಸಿ ಚಿನ್ನವನ್ನು ಬೇರ್ಪಡಿಸಿ ತಯಾರಿಸಿದ ಸುಂದರ ಕಲಾಮೂರ್ತಿ ಶಾಕುಂತಲ ನಾಟಕ ಮೂಲ ಮಹಾಭಾರತದಲ್ಲಿರುವ ನೀರಸವಾದ ಸನ್ನಿವೇಶಗಳನ್ನು ಕವಿ ಕಾಳಿದಾಸನು ಬದಲಾಯಿಸಿ ಕಲಾತ್ಮಕವಾಗಿ ಚಿತ್ರಿಸಿದ್ದಾನೆ."[೩]

ಕಾಲಿದಾಸ ವಿರಚಿತಂ ವಿಕ್ರಮೋರ್ವಶೀಯಂ ನಾಟಕಂ

ವೇದಾಂತೇಷು ಯಮಾಹುರೇಕ ಪುರುಷಂ ವ್ಯಾಪ್ಯಸ್ಥಿತಂ ರೋದಸೀ

ಯಸ್ಮಿನ್ನೀಶ್ವರ ಇತ್ಯ ನನ್ನ ವಿಷಯಃ ಶಬ್ದೋ ಯಥಾರ್ಥಾಕ್ಷರಃ ॥

ಅಂತರ್ಯಶ್ಚ ಮುಮುಕ್ಷುಭಿರ್ನಿಯಮಿತ ಪ್ರಾಣಾದಿಭಿರ್ಮೃಗ್ಯತೇ

ಸಸ್ಥಾಣುಃ ಸ್ಥಿರ ಭಕ್ತಿ ಯೋಗ ಸುಲಭೋನಿಃ ಶ್ರೇಯಸಾಯಸುವಃ ॥೧॥

**ಕಾಳಿದಾಸನ ವಿಕ್ರಮೋರ್ವಶೀಯಂ**

ಅಂದರೆ ವೇದಾಂತ ಮಾನವನು ಭೂವ್ಯೋಮ ವೆಲ್ಲವನು ವ್ಯಾಪಿಸಿ ಯುಮುಳಿದೇವ ಪುರುಷನೆನುತಿಹುದು ಪರರಿಗನ್ವಯಿಸದೀಶ್ವರ ಶಬ್ದವಾವನೊಳುತಾಂ ಯಥಾರ್ಥಾಕ್ಷರತೆ ವಡೆದೆಸೆಯುತಿಹುದು ಪ್ರಾಣಾದಿ ನಿಯಮದೆ ಮುಮುಕ್ಷು ಜನ ಮಾವನನು ಹೃದಯಾಂತ ರಾಳದೊಳು ತಾಮರಸುತಿಹುದು ಸ್ಥಿರಭಕ್ತಿಯೋಗಕತಿಸುಲಭನೆನುವಾಸ್ಥಾಣು ನಿಃ ಶ್ರೇಯಮಂ ಕುಡುಗೆ ನಿಮಗೆಂದು ಮೊಲಿದು(ಅನು: ಎಸ್.ವಿ.ಪರಮೇಶ್ವರಭಟ್ಟ).

ಕಾಳಿದಾಸ ವಿರಚಿತ ವಿಕ್ರಮೋರ್ವಶೀಯದ ಈ ಪದ್ಯದಲ್ಲಿಯೂ ಶಿವಸ್ತುತಿಯನ್ನು ಮಾಡಿರುವುದು ಕಂಡುಬರುತ್ತದೆ. ವೇದಾಂತಗಳು ಯಾವನನ್ನು ಭೂಮಿ ಆಕಾಶವನ್ನುಳ

ಏಕವ್ಯಕ್ತಿ ಏನ್ನುತ್ತದೆಯೋ ಅಂತಹ ಈಶ್ವರನು ಸ್ಥಿರಭಕ್ತಿ, ಯೋಗಕ್ಕೆ ಅತಿ ಸುಲಭವಾಗಿ ಒಲಿಯುವ ಪಂಡಿತರ ಹೃದಯದ ಅಂತರಾಳದಲ್ಲಿ ನೆಲಸಿರುವ ಶಿವನು ಒಲಿದು ಶ್ರೇಯಸ್ಸನ್ನು ದಯಪಾಲಿಸಲೆಂದು ಸ್ತುತಿಸುವನು.

**ಋತುಸಂಹಾರಮ್**

ಪ್ರಚಂಡ ಸೂರ್ಯಃ ಸ್ಪೃಹಣೀಯ ಚಂದ್ರಮಾ
ಸದಾವಗಾಹಕ್ಷತವಾರಿ ಸಂಚಯಃ
ದಿನಾಂತರ ವ್ಯೋಽಭ್ಯೂಸ ಶಾಂತ ಮನ್ಮಥೋ
ನಿದಾಘ ಕಾಲೋಽಯ ಮುಪಗತಃ ಪ್ರಿಯೇ ॥೧॥

**ಕಾಳಿದಾಸ**

ಪ್ರಚಂಡಮಾದ ದಿನಕರಂ ಜಗವನೆಲ್ಲ ತಪಿಸಿರೆ
ಮನೋಜ್ಞಮಾದ ಹಿಮಕರಂ ತಣುಪನಂತೆ ಸೂಸಿರೆ
ಜಲಾವಗಾಹದಿಂದಲಾನಂದ ಮಂದಿಗಾಗಿರೆ
ಅನಂಗಭಾವದುಲ್ಬಣಂ ಶಮನಗೊಂಡವೋಲಿರೆ
ದಿನಾಂತಶಾಂತ ಸಮಯ ತಾನತಿ ವಿನೋದ ಮಾಗಿರೆ
ಗ್ರೀಷ್ಮನಿಂದೆ ಬಂದನೀ ಧರಗೆ ಮನ್ಮನೋಹರೆ

**ಅನು: ಎಸ್.ವಿ.ಪರಮೇಶ್ವರಭಟ್ಟ**

**ಮೇಘಸಂದೇಶಮ್**

ಕಶ್ಚಿತ್ಕಾಂತಾ ವಿರಹ ಗುರುಣಾ ಸ್ವಾದಿ ಕಾರಾತ್ಪ್ರಮತ್ತ
ಶ್ಯಾಪೇನಾಸ್ತಂಗಮಿತ ಮಹಿಮಾ ವರ್ಷ ಭೋಗ್ಯೇಭರ್ತುಃ
ಯಕ್ಯಶ್ಚಕ್ರೆ ಜನಕತನಯಾಸ್ನಾನ ಪ್ರಣ್ಯೋದಕೇಷು
ಸ್ನಿಗ್ದ ಚ್ಛಾಯಾತರುಷು ವಸತಿಂ ರಾಮಗಿರ್ಯಾಶ್ರಮೇಶು ॥೧॥

**ಕಾಳಿದಾಸ**

ಅಲ್ಲಿ ಉತ್ತರ ದಿಶೆಯೊಳಿರುವವನು ಹಿಮಾಲಯನು
ದೇವತಾತ್ಮನು ತಾನು ಪರ್ವತೇಶ್ವರನು
ಪೂರ್ವ ಪಶ್ಚಿಮ ಶರಧಿಗಡಿಚಾಚಿ ನಿಂದಿಹನು
ಪೃಥ್ವಿಯ ಮಹಾಮಾನದಂಡದಂತಹನು

**ಅನು.ಎಸ್.ವಿ.ಪರಮೇಶ್ವರಭಟ್ಟ**

ಕುಮಾರಸಂಭಾವ ಮಹಾಕಾವ್ಯವು ಕುಮಾರಸ್ವಾಮಿ(ಕಾರ್ತೀಕೆಯ ಸ್ವಾಮಿ, ಷಣ್ಮುಖ ಅಮರುಗ)ಯ ಜನನ ವೃತ್ತಾಂತ ವರ್ಣನೆಯಿಂದ ಕೂಡಿದಂತಹ ಮಹಾಕೃತಿಯಾಗಿದೆ.

**ರಘವಂಶಮ್**

ವಾಗಾರ್ಥವಿವ ಸಂಪೃಕೌ ವಾಗಾರ್ಥ ಪ್ರತಿಸತ್ತಯೇ
ಜಗತಃ ಪಿತಕಾ ವಂದೇ ಪಾರ್ವತಿ ಪರಮೇಶ್ವರೌ

**ಕಾಳಿದಾಸ**

ವಾಗಾರ್ಥದಂತನಿಸ ಮಾಡವೆರೆದು ಶೋಭಿಸುವ ಜಗದ ತಾಯ್ ತಂದೆಯರನು
ಪಾರ್ವತಿ ಪರಮೇಶ್ವರರ್ಕಳನು ವಾಗರ್ಥದರಿವಿಗೆಂದೆ ರಗಿದಪೆನು

**ಎಸ್.ವಿ.ಪರಮೇಶ್ವರಭಟ್ಟ**

ಜಗತ್ತಿನ ಮಾತಾ ಪಿತರಾದ ಪಾರ್ವತಿ ಪರಮೇಶ್ವರರು ನಿತ್ಯರು, ಸನಾತನರು ಶಾಶ್ವತರೂ ಆಗಿರುವರು ಶಬ್ದದಲ್ಲಿ ಅರ್ಥವು ಸೇರಿರುವಂತೆ ಪಾರ್ವತಿ ಪರಮೇಶ್ವರರು ಬೆರತಿರುವರು. ವಾಕ್ಯದಲ್ಲಿ ವ್ಯಂಜಕಾರ್ಥವು ಬೆರೆತ ಹಾಗೆ ಅವರ ಸಂಬಂಧ ಶಾಶ್ವತವಾಗಿರುವುದು. ಈ ರೀತಿ ನಿತ್ಯರಾದ ಜನನಿ ಜನಕರಾದ ಶಿವಶಕ್ತಿಯರು ನನ್ನ ಮಾತಿಗೆ ವಿಶೇಷವಾದ ವಾಗ್ವಿಲಾಸವನ್ನುಂಟು ಮಾಡಲಿ.

ಕಾಳಿದಾಸನ ಶಾಕುಂತಲ, ರಘುವಂಶ ವಿಕ್ರಮೋರ್ವಶೀಯ ಈ ಕೃತಿಗಳ ನಾಂದಿ ಪದ್ಯ ಶಿವಸ್ತುತಿಯಿಂದ ಕೂಡಿದೆ. ಬಹುಶಃ ಕಾಳಿದಾಸನು ಶಿವಭಕ್ತನಾಗಿದ್ದನೆಂಬುದು ಕಂಡು ಬರುತ್ತದೆ. ಕಾಳಿಕಾದೇವಿಯಿಂದ ಕಾವ್ಯ ವಿದ್ಯಾ ಪಾರಂಗತನಾದ ಈ ಕವಿಗೆ ಕಾಳಿಯಿಂದಲೇ ಕಾಳಿದಾಸನೆಂದಾಗಿದೆ. ಸರ್ವಶಕ್ತಳೂ, ಶಕ್ತಿದೇವತೆಯೂ ಸರ್ವೇಶನ ಅರ್ಧಾಂಗಿಯೂ ಆದ ಪಾರ್ವತಿ ಅಥವಾ ಕಾಳಿಕಾಂಬೆಯ ಭಕ್ತನಾಗಿ ವಿಶ್ವವಿಖ್ಯಾತನಾದನು. ಹಾಗೂ ಕೆಲವು ಕೃತಿಗಳ ನಾಂದಿಪದ್ಯಗಳಲ್ಲಿ ಸೃಷ್ಟಿಯ ವರ್ಣನೆಯಿದೆ. ಋತು ಸಂಹಾರದಲ್ಲಿ ಗ್ರೀಷ್ಮ ಋತುವಿನ ವರ್ಣನೆ ಕಂಡುಬರುತ್ತದೆ. ಕುಮಾರ ಸಂಭಂವ ಕಾವ್ಯದಲ್ಲಿ ಷಣ್ಮುಖ ಅಥವಾ ಕುಮಾರಸ್ವಾಮಿಯ ಚರಿತ್ರೆ ಇರುವುದು ಕಾಳಿದಾಸನ ಈ ಕಾವ್ಯ ಹರಿಹರನ ಏಕೈಕ ಚಂಪೂ ಕೃತಿಯಾಗಿರುವ 'ಗಿರಿಜಾಕಲ್ಯಾಣ' ಕೃತಿಯ ಮೇಲೆ ಪ್ರಭಾವ ಬೀರಿದೆ.

## ಭಾಗ ೨

ಸಂಸ್ಕೃತ ಕವಿಗಳಿಂದ ಹಾಗೂ ಅವರ ಕಾವ್ಯಗಳಿಂದ ಪ್ರಭಾವಿತರಾದ ಕನ್ನಡ ಕವಿಗಳು ಕನ್ನಡ ಕಾವ್ಯಗಳಲ್ಲಿ ಹಲವು ಸ್ತುತಿಗಳನ್ನು ತಂದರೆ ಇನ್ನೊಂದೆಡೆ ಕನ್ನಡ ಕವಿಗಳಿಂದಲೇ ಸಂಸ್ಕೃತ ಕವಿಗಳು ಪ್ರಭಾವಿತರಾದಂತೆ ಕಂಡುಬರುತ್ತದೆ.

ವಿಜಯನಗರದ ಬುಕ್ಕರಾಯನ ತಮ್ಮನಾದ 'ಕಂಪಣ್ಣವೊಡೆಯನ' ಹೆಂಡತಿ 'ಗಂಗಾದೇವಿ' ರಚಿಸಿದ 'ಮಧುರಾ ವಿಜಯಂ' ಅಥವಾ 'ವೀರಕಂಪಣರಾಯ ಚರಿತಂ' ಇದು ಸು.೧೪ನೆಯ ಶತಮಾನದ ಕಾವ್ಯವಾದ ಕಾರಣ ಈ ಕಾವ್ಯದ ಪೀಠಿಕಾ ಭಾಗದಲ್ಲಿ ಬರುವ ನಾಂದಿ ಪದ್ಯಗಳು ಹತ್ತನೆಯ ಶತಮಾನದ ಪಂಪಾದಿಗಳ ಕಾವ್ಯದ ಪ್ರಭಾವದಿಂದಲೇ ಬಂದಿರಬಹುದು. ಕನ್ನಡದ ಕಾವ್ಯದ ಮೇಲೆ ಸಂಸ್ಕೃತ ಕಾವ್ಯದ ಪ್ರಭಾವವಿದ್ದಂತೆ, ಸಂಸ್ಕೃತ ಕಾವ್ಯದ ಮೇಲೂ ಕನ್ನಡ ಕಾವ್ಯದ ಪ್ರಭಾವವಿರುವುದು ಕಂಡುಬರುತ್ತದೆ.

ಅ ಸಂದರ್ಭದಲ್ಲಿ ಶೂದ್ರರು, ಸ್ತ್ರೀಯರೂ ಸಂಸ್ಕೃತ ಭಾಷೆಯನ್ನು ಕಲಿಯಲು ಅವಕಾಶವಿರಲಿಲ್ಲ. ಆದರೆ ಗಂಗಾದೇವಿ ಪ್ರಯತ್ನಪಟ್ಟು ಸಂಸ್ಕೃತ ಭಾಷೆಯನ್ನು ಕಲಿತು ಕಾವ್ಯರಚಿಸಿ ಯಶಸ್ವಿಯಾದಳು.

ಗಂಗಾದೇವಿಯ 'ಮಧುರಾವಿಜಯಂ' ಎಂಬ ಸಂಸ್ಕೃತ ಕಾವ್ಯದಲ್ಲಿಯೂ ಕನ್ನಡ ಕಾವ್ಯಗಳಂತೆ ಇಷ್ಟದೇವತಾ ಸ್ತುತಿ, ಇತರ ದೇವತಾ ಸ್ತುತಿ, ಪೂರ್ವಕವಿ ಸ್ಮರಣೆ, ಕಾವ್ಯಪ್ರಶಂಸೆ. ಹೀಗೆ ಹಲವಾರು ನಾಂದಿ ಪದ್ಯಗಳಿವೆ. ಹಾಗಾಗಿ ಗಂಗಾದೇವಿ ವಿರಚಿತ 'ಮಧುರಾ ವಿಜಯಂ' ಕಾವ್ಯದ ಮೇಲೆ ಕನ್ನಡ ಕಾವ್ಯದ ಪ್ರಭಾವವಿರುವುದು ಕಂಡುಬರುತ್ತದೆ.

**'ಮಧುರಾವಿಜಯಂ'**

'ಮಧುರಾ ವಿಜಯಂ' ಎಂಬ ಕಾವ್ಯದಲ್ಲಿ ಬರುವ ನಾಂದಿ ಪದ್ಯಗಳನ್ನು ಗಮನಿಸಿದಾಗ, ಕನ್ನಡ ಕಾವ್ಯಗಳ ನಾಂದಿ ಪದ್ಯಗಳ ಪ್ರಭಾವವಿರುವುದು ಕಂಡುಬರುತ್ತದೆ.

**೧. ಗಣೇಶ ಸ್ತುತಿ**

ಕಲ್ಯಾಣ ವೆಸಗುವವನು ಸಜ್ಜನರಿಗನವರತ
ಶರಣಾಗಿ ಬಂದವರ ಸಂಕಲ್ಪವ
ಸಿದ್ದಿಸುವ ಶ್ರೀಕಲ್ಪವೃಕ್ಷವಾಗಿರುವವನು
ದೇವ ಗಜವದನ ನೀಗೆಮಗೆ ಶುಭವ

**ಮಧುರಾವಿಜಯಂ(೧.೧) ಅನು: ಕೆ.ಕುಶಾಲಪ್ಪಗೌಡ**

ಸಜ್ಜನರಿಗೆ ಸದಾಕಾಲ ಒಳ್ಳೆಯದನ್ನು ಮಾಡುವ, ಶರಣಾಗಿ ಬಂದವರ ಇಷ್ಟಾರ್ಥಗಳನ್ನು ಪೂರೈಸುವ ಸಂಪತ್ತಿನ ಕಲ್ಪವೃಕ್ಷವಾಗಿರುವ ದೇವನಾದ ಗಜಮುಖನು ನಮಗೆ ಶುಭವನ್ನುಂಟು ಮಾಡಲಿ.

೨. ಬ್ರಹ್ಮ ಶಿವ ಹಾಗೂ ಪಾರ್ವತಿ ಸ್ತುತಿ

ನರನಾರಿ ನಿರ್ಮಿತಿಗೆ ಬ್ರಹ್ಮನಿಗೆ ಪ್ರಾಮಾಣ್ಯ
ರಾಗಿಹರು ಚಿತ್ರ್ಭಾತ್ಮಕರು ಶಿವನು ಶಿವೆಯು
ದಯೆಗೆಯ್ಯುವರೆನಗೆ ಪ್ರತಿಬೋಧ ಶಕ್ತಿಯನು
ಕರುಣೆಯಿಂದವರಿಗೆರಗಿ ಬೇಡುವೆನು

**ಮಧುರಾ ವಿಜಯಂ(೧.೨), ಅನು:ಕೆ.ಕುಶಾಲಪ್ಪಗೌಡ**

ನರನಾರಿಯರನ್ನು ನಿರ್ಮಿಸುವ ಬ್ರಹ್ಮನಿಗೆ ನಮಸ್ಕಾರ ಶಿವಶಕ್ತಿಯರು ಸದಾಕಾಲ ಮನದಲ್ಲಿರುವವರು. ಅವರು ನನಗೆ ದಯತೋರಲಿ ಹಾಗೂ ಕಾವ್ಯ ರಚನಾ ಶಕ್ತಿಯನ್ನು ದಯಪಾಲಿಸಲೆಂದು ನಮಸ್ಕರಿಸುತ್ತೇನೆ.

೩. ಸರಸ್ವತಿ ಸ್ತುತಿ

ಆ ಮಹಾಕವಿಗಳೆಂಬರ ಮುಖಾಂಭೋಜವೆಂ
ದೆಂಬ ಮಣಿ ಪಂಜರದಿಂ ನಿಂತ ಶಾರಿಕೆಯೇ
ಚೈತನ್ಯ ಜಲ ನಿಧಿಯನುಕ್ಕಿಸುವ ಚಂದ್ರಿಕೆಯೆ
ದೇವಿ ವಂದಿಪೆ ನಾನು ನಿನಗೆ ಶಾರದೆಯೆ

**ಮಧುರಾ ವಿಜಯಂ(೧.೩) ಅನು: ಕೆ.ಕುಶಾಲಪ್ಪಗೌಡ**

ಮಹಾಕವಿಗಳ ಮುಖಕಮಲವೆಂಬ ಮುತ್ತಿನ ಪಂಜರದಲ್ಲಿ ನೆಲಸಿರುವ ವಿದ್ಯಾದೇವತೆಯೇ ಸದಾಕಾಲ ಚೈತನ್ಯ ಜಲನಿಧಿಯನ್ನು ಉಕ್ಕಿಸುವ ಚಂದ್ರಿಕೆಯೇ ವಂದಿಪೆ ನಿನಗೆ ಶಾರದೆಯೇ.

**ಗುರುಸ್ತುತಿ**

ಸರ್ವಮಂಗಳೆಯೊಡನೆ ಶೋಭಿಸುತ ಪಾವಿತ್ರ್ಯ
ವರ್ಷಿಸುತ ಸರ್ವೇಶ ಮೂರ್ತಿಯಂತಿರುವ
ಸರ್ವಜ್ಞಗುರು ಕ್ರಿಯಾಶಕ್ತಿಯಭಿನವ ಶಿವನ
ಪಾದಕಭಿವಂದಿಸುವೆ ಭಯ ಭಕ್ತಿಯಿಂದೆ

**ಮಧುರಾವಿಜಯಂ(೧.೪) ಅನು:ಕೆ.ಕುಶಾಲಪ್ಪಗೌಡ**

ಸರ್ವಮಂಗಳೆಯಾದ ಪಾರ್ವತಿಯೊಂದಿಗೆ ಶೋಭಿಸುತ ಪವಿತ್ರವಾದುದನ್ನು ದಯಪಾಲಿಸುವ ಸರ್ವರಿಗೂ ಈಶನಂತಿರುವ ಸರ್ವಜ್ಞ ಗುರುವಾದ ಅಭಿನವ ಶಿವನೆನಿಸಿದ ಕ್ರಿಯಾಶಕ್ತಿ ಗುರುವಿನ ಪಾದಕೆ ಅಭಿವಂದಿಸುವೆ ಭಯ ಭಕ್ತಿಯಿಂದ

**ಪೂರ್ವಕವಿ ಪ್ರಶಂಸೆ**

ಮಧುರಾ ವಿಜಯಂ ಕಾವ್ಯದಲ್ಲಿ ಬರುವ ಪೂರ್ವಕವಿ ಸ್ಮರಣೆಯೂ ಕನ್ನಡ ಕಾವ್ಯದ ಪ್ರಭಾವದಿಂದಲೇ ಬಂದಿರಬಹುದು.

**ವಾಲ್ಮೀಕಿಯ ಸ್ಮರಣೆ**

ಕಾವ್ಯರಸ ಧಾರೆಯನು ಮೊದಲಿಳೆಗೆ ಕರೆದವನು
ದಿವ್ಯಮುನಿ ಆದಿಕವಿ ವಾಲ್ಮೀಕಿಯು
ಸುಹೃತ್ಸಮೂಹಕೆ ನಿರಂತರಾನಂದವನು
ವರ್ಷಿಸಲಿ ಹರ್ಷಮಯವಕ್ಕೆ

**ಮಧುರಾವಿಜಯಂ(೧.೫) ಅನು: ಕೆ.ಕುಶಾಲಪ್ಪಗೌಡ**

ಕಾವ್ಯರಸದ ಮಳೆಯನ್ನು ಮೊದಲು ತಂದ ಕವಿಯೇ ವಾಲ್ಮೀಕಿ ಎಂದು ಹೇಳುವ ಮೂಲಕ ಕಾವ್ಯ ಪ್ರಕಾರವೆಂಬುದು ಮಳೆಯಾಗಿದೆ. ಅದನ್ನು ಮೊದಲು ಕರೆದ ಏನು(ತಂದವನು) ಕವಿ ವಾಲ್ಮೀಕಿ, ಆ ವಾಲ್ಮೀಕಿಯನ್ನು ಸ್ಮರಿಸಿ, ಸಹೃದಯಿಗಳಿಗೆ ನನ್ನ ಕಾವ್ಯವು ಆನಂದವನ್ನು ತರಲೆಂದು ಹೇಳುವಳು.

**ವ್ಯಾಸಸ್ಮರಣೆ**

ತನಿಗರ್ವುತುದಿ ಮೊದಲು ಎಡೆಯಿಲ್ಲ ಮಧುರರಸ
ವನು ತೀವಿಕೊಂಡಿರುವುದಾವ ಪರಿಯಲ್ಲಿ
ವ್ಯಾಸ ಕೃತಿಯಂತೆ ಯಾಹ್ಲಾದ ಸಜ್ಜನರೆಡೆಗೆ
ಹರಿಸುತಿದೆ ಕಂಗೊಳಿಪ ಪ್ರತಿ ಪರ್ವಗಳಲಿ

**ಮಧುರಾವಿಜಯಂ(೧.೬) ಅನು: ಕೆ.ಕುಶಾಲಪ್ಪಗೌಡ**

ಮೊದಲಿನಿಂದ ಕೊನೆಯವರೆಗೂ ರಸಭರಿತ ಕಬ್ಬಿನ ಹಾಗೆ ತುಂಬಿಕೊಂಡಿರುವ ವ್ಯಾಸರ ಕೃತಿಯು ಪ್ರತಿ ಪರ್ವದಲ್ಲೂ ಕಣ್ಣಿಗೆ ತಂಪನ್ನು ಮತ್ತು ಸಜ್ಜನರ ಹೃದಯಕ್ಕೆ ಆಹ್ಲಾದವನ್ನು ಕೊಡುವ ಮಹಾಭಾರತ ಕೃತಿಯನ್ನು ಯಾವ ಪರಿಯಿಂದ ವರ್ಣಿಸಲಿ ಎನ್ನುವ ಮೂಲಕ ವ್ಯಾಸರನ್ನು ಸ್ತುತಿಸಲಾಗಿದೆ.

ಎರಡು ಮಹಾಕಾವ್ಯಗಳನ್ನು ರಚಿಸಿದ ವ್ಯಾಸ, ವಾಲ್ಮೀಕಿಯರ ಸ್ತುತಿಯ ನಂತರ ಸಂಸ್ಕೃತ ಭಾಷೆಯ ಪ್ರಸಿದ್ಧ ಕವಿಯಾದ ಕಾಳಿದಾಸನ ಸ್ಮರಣೆ ಮಾಡಲಾಗಿದೆ.

**ಕಾಳಿದಾಸನ ಸ್ಮರಣೆ**

ಕಾಳಿದಾಸನ ಅರ್ಥದಿಂದಲುಪಜೀವಿಸಿಹ
ರೆಲ್ಲ ಕವಿಗಳು ಎಂದರೇನಚ್ಚರಿ
ಕವಿ ನಿಕರ ಕಾಳಿದಾಸಗೆ ದಾಸರೆಂಬುದನು
ಮೀರಲಿಕ್ಕೆಡೆಯುಂಟೆ ಲೋಕದಲಿ

**ಮಧುರಾವಿಜಯಂ(೧.೭), ಅನು: ಕೆ.ಕುಶಾಲಪ್ಪಗೌಡ**

ಎಲ್ಲ ಕವಿಗಳು ಕಾಳಿದಾಸನ ಅರ್ಥದಿಂದ ಉಪಜೀವಿಸಿರುವರು ಎಂದರೆನಾಶ್ಚರ್ಯ ಕವಿ ಸಮೂಹ ಕಾಳಿದಾಸನಿಗೆ ದಾಸರೆಂಬುದನು ಮೀರಲು ಸಾಧ್ಯವೇ ಕವಿಗಳು ಕಾಳಿದಾಸನಿಗೆ ದಾಸರೆನಿಸಿದ್ದಾರೆ.

**ಬಾಣಸ್ಮರಣೆ**

ಶ್ರೀವಾಣಿ ಪಾಣಿಯಿಂ ನಿಕ್ವಣಿತವಹ ವೀಣೆ
ಹೃದಯವನು ಸೆರೆಗೊಂಡು ನಲಿಸುವಂತೆ
ಹೃದಯ ಹಾರಿಯು ಬಾಣಭಟ್ಟನದು ವಾಙ್ಮಹಿಮೆ
ಅನ್ಯರಿಗೆ ಕೈಸಾರ್ದುಬರಲಪ್ಪುದೆ

**ಮಧುರಾವಿಜಯಂ(೧.೮), ಅನು: ಕೆ.ಕುಶಾಲಪ್ಪಗೌಡ**

ಬಾಣ ಕವಿಯ ವಾಕ್ಚಾತುರ್ಯ ಬೇರೆ ಕವಿಗಳಿಗೆ ಬರಲು ಸಾಧ್ಯವಿಲ್ಲವೆಂದು, ಬಾಣನ ಮಾತು ವಾಣಿಯ ಕೈಯಲ್ಲಿಯ ವೀಣೆಯಂತೆ ಕೇಳುಗರ ಹೃದಯವನು ಸಂತೋಷಗೊಳಿಸು ವುದೆಂದೂ, ಅದು ಬೇರೆಯವರಿಗೆ ಬರಲು ಸಾಧ್ಯವಿಲ್ಲ.

ಮಧುರಾ ವಿಜಯಂ ಕಾವ್ಯದ ಒಂಭತ್ತು, ಹತ್ತು ಹಾಗೂ ಹನ್ನೊಂದನೇ ಪದ್ಯಗಳಲ್ಲಿ ಭಾರವಿ ದಂಡಿ ಮತ್ತು ಭವಭೂತಿಯರ ಕವಿವಾಣಿಯನ್ನು ಸ್ಮರಿಸುತ್ತ ಈ ಎಲ್ಲ ಕವಿಗಳ ವಾಣಿ ಕರ್ಣಾಮೃತವನ್ನು ತಂದು ಕೊಡುವುದೆಂದು ಹೇಳಿರುವ ಗಂಗಾದೇವಿ ಕೇವಲ ಸಂಸ್ಕೃತ ಕವಿಗಳಿಂದ ಪ್ರೇರಿತವಾಗಿರುವಂತೆ ಕಂಡುಬರುತ್ತದೆ. ಕೇವಲ ಸಂಸ್ಕೃತ ಕವಿಗಳನ್ನು ಮಾತ್ರ ಸ್ಮರಿಸಿ ಕಾವ್ಯವನ್ನು ಮುಂದುವರಿಸುವುದು ಕಂಡುಬರುತ್ತದೆ. ಕನ್ನಡ ಕಾವ್ಯದ ಪೀಠಿಕಾ ಪದ್ಯಗಳಿರುವಂತೆ 'ಮಧುರಾ ವಿಜಯಂ'ದ ಕಾವ್ಯಾರಂಭದ ಪದ್ಯಗಳನ್ನು ಗಮನಿಸಿದರೆ, ಕನ್ನಡ ಕಾವ್ಯದ ಪ್ರಭಾವವಿದೆ. ಎಂದಾದರೂ ಸಹ ಕನ್ನಡ ಕವಿಗಳನ್ನು ಈ ಕಾವ್ಯದಲ್ಲಿ

ಸ್ಮರಿಸದಿರುವುದು ವಿಷಾದನೀಯ. ನಮ್ಮ ಕನ್ನಡ ಕವಿಗಳು ಸಂಸ್ಕೃತ ಕವಿಗಳನ್ನು ಸ್ಮರಿಸಲು ಮರೆತಿಲ್ಲ. ಆದರೆ ಕನ್ನಡ ಕವಿಗಳ ಸ್ಮರಣೆ ಮಾತ್ರ ಈ ಕಾವ್ಯದಲ್ಲಿಲ್ಲ.

**ಕುಕಾವ್ಯ ನಿಂದೆ**

'ಹದಿಬದೆಯ ತಾನದೊಡಂ ರೂಪವಿರದಿರಲು
ಪತಿಯೊದೆಗೆ ನಾರಿಯಾಹ್ಲಾದವನು ಕೊಡಳು
ದೋಷವಿಲ್ಲದ ಕೃತಿಯು ಕಾವ್ಯಗುಣವಿರದಿರಲು
ಬಲ್ಲರಿಗೆ ರಂಜನೆಯನೊದಗಿಸಲು ಬರದು'

**ಮಧುರಾವಿಜಯಂ, ಅನು: ಕೆ.ಕುಶಾಲಪ್ಪಗೌಡ**

ಹೆಣ್ಣಾದವಳು ಪತಿವ್ರತೆಯಾಗಿದ್ದರೂ ಅವಳಲ್ಲಿ ರೂಪವಿಲ್ಲದಿದ್ದರೆ ಗಂಡನಿಗೆ ಆನಂದವನ್ನುಂಟು ಮಾಡಲಾರಳು. ಹಾಗೆಯೇ ಕಾವ್ಯಗಳಲ್ಲಿ ಯಾವ ದೋಷಗಳಿಲ್ಲದಿದ್ದರೂ, ಅದರಲ್ಲಿ ಕಾವ್ಯಗುಣವಿಲ್ಲದಿದ್ದರೆ ಕಾವ್ಯ ರಸಿಕರಿಗೆ ರುಚಿಸಲಾರದು. ಕಾವ್ಯವು ಕಾವ್ಯಗುಣ ಸಹಿತವಾಗಿರಬೇಕು. ಗುಣರಹಿತ ಕಾವ್ಯಗಳಿಂದ ಯಾವ ಪ್ರಯೋಜನವೂ ಇಲ್ಲ.

**ಕುಕವಿ ನಿಂದೆ**

ಕಾವ್ಯದಲ್ಲಿ ತುಳುಕುವೊಳಿತನು ತಳ್ಳಿ ದೋಷವದು
ದುಷ್ಟನಾದವ ಕೆದಕಿ ಹುಡುಕುತಿಹನು
ಕಾಡಿನಲಿ ಮಧುರ ಮಾಕಂದವನು ಕಹಿ
ಬೇವು ಹಣ್ಣನ್ನು ಕಾಗೆಯರಸುತಿಹುದು

**ಮಧುರಾವಿಜಯಂ(೧.೨೦) ಕೆ.ಕುಶಾಲಪ್ಪಗೌಡ**

ಕಾಗೆಯು ಕಾನನದಲ್ಲಿ ಸಿಗುವ ಉತ್ತಮವಾದ ಕಂದಮೂಲಗಳನ್ನು ತೊರೆದು ಕಹಿ ಬೇವನ್ನು ಅರಸುವ ಹಾಗೆ ಕುಕವಿಗಳು, ಕಾವ್ಯಗಳಲ್ಲಿ ತುಂಬಿರುವ ಉತ್ತಮ ಕಾವ್ಯಾಂಶವನ್ನು ತಳ್ಳಿಹಾಕಿ ದೋಷಗಳನ್ನೇ ಕೆದಕುವರು ಎಂದು, ಕುಕವಿಗಳು ಕಾಗೆಗೆ ಸಮಾನ ಆದ್ದರಿಂದ ಇವರು ಕೇವಲ ಕಾವ್ಯನಿಂದಕರಾಗಿರುವರು.

**ದುರ್ಜನ ನಿಂದೆ**

ದುರ್ಜನರು ಚೌರ್ಯದಿಂದಾರ್ಜಿಸಿದ ಕಾವ್ಯವದು
ಚಿರಕಾಲ ಬಾಳಲಿಕೆ ಸಾಧ್ಯವಿಹುದೆ?

ಕೈತವದ ರತ್ನಕಿಹ ಸಹಜವಿಲ್ಲದ ಕಾಂತಿ
ಚಿರವಾಗಿ ಶೋಭೆಯನ್ನೀಯ ಬಹುದೇ?

**ಮಧುರಾವಿಜಯಂ(೧.೨೧), ಅನು: ಕೆ.ಕುಶಾಲಪ್ಪಗೌಡ**

ದುರ್ಜನರು ಅವರಿವರ ಕೃತಿಯಿಂದ ಕದ್ದು ರಚಿಸಿದ ಕಾವ್ಯವದು ಚಿರಕಾಲ ಉಳಿಯಲು ಸಾದ್ಯವಿಹುದೇ? ಕೃತ್ರಿಮವಾದ ರತ್ನದ ಕಾಂತಿ ಸಹಜ ರತ್ನದ ಕಾಂತಿಯಂತೆ ಶೋಭಿಸುವುದಿಲ್ಲ. ಹಾಗೆ ಕದ್ದು ಕಾವ್ಯ ರಚಿಸಿದ ಕಾವ್ಯ ಬಹಳ ದಿನ ಉಳಿಯುವುದಿಲ್ಲ.

**ಸ್ವಕಾವ್ಯಪ್ರಶಂಸೆ**

ಓ ವಿಬುಧ ಮಣಿಗಳೇ ಲಾಲಿಪುದು ನನ್ನದೀ
ಕಬ್ಬ ಶ್ರೀಕಂಪ ಭೂಪತಿಯ ಚರಿತ
ನಾಮದಲಿ ಸುಪ್ರಸಿದ್ಧವು ಮಧುರಾ ವಿಜಯ
ವೆಂಬುದಿಳೆಯಲ್ಲಿಂತು ಬೆಳಗುತಿಹುದು

**ಮಧುರಾವಿಜಯಂ(೧-೨೫), ಅನು: ಕೆ.ಕುಶಾಲಪ್ಪಗೌಡ**

ಶ್ರೀಕಂಪಭೂಪತಿಯ ಹೆಸರಿನಿಂದಲೇ ಪ್ರಸಿದ್ಧವಾದ 'ಮಧುರಾವಿಜಯಂ' ಎಂಬ ಈ ಕಾವ್ಯವನ್ನು ವಿದ್ವಾಂಸರು ಕೇಳಬೇಕು ಹಾಗೂ ವಾಚಿಸಬೇಕು. ಇದರಲ್ಲಿ ಕಂಪಣರಾಯನು ಯುದ್ಧಮಾಡಿ ಮಧುರೆಯನ್ನು ಗೆದ್ದ ವಿಷಯವಿರುವುದರಿಂದ ಮಧುರಾ ವಿಜಯಂ ಎಂದೇ ಹೆಸರಾಗಿದೆ. "ಶೃಂಗಾರ ಪ್ರಧಾನವಾದ ದೇವರಾಜನ ಸೊಬಗಿನ ಸೋನೆ ಕಾವ್ಯದಲ್ಲಿ ಪೂರ್ವಕವಿ ಸ್ತುತಿಯ ನುಡಿಗಟ್ಟಿನಲ್ಲಿ ಮಧುರಾವಿಜಯಂನ ದೂರದ ಛಾಯೆ ಬಿದ್ದಿರುವಂತೆ ಕಾಣುತ್ತದೆ."[೪]

ದಾಸತಾಂ ಕಾಲಿದಾಸಸ್ಯ ಕವಯಃ ಕೇನ ಬಿಭ್ರತಿ
ಇದಾನಿಮಪಿ ತಸ್ಯರ್ಥಾನುಪಜೀವಂತ್ಯಮೀಯತಃ

(ಕಾಳಿದಾಸನ ಅರ್ಥದಿಂದಲುಪಜೀವಿಸಿಹರೆಲ್ಲ ಕವಿಗಳು ಎಂದರೇನಚ್ಚರಿ?)

ಸಂಸ್ಕೃತ ಕಾವ್ಯಗಳಲ್ಲಿ ಅಲ್ಲೊಂದು ಇಲ್ಲೊಂದು ದೇವತಾ ಸ್ತುತಿ ಹೊರತುಪಡಿಸಿದರೆ ಬೇರೆ ರೀತಿಯ ನಾಂದಿ ಪದ್ಯಗಳು ದೊರೆಯುವುದು ವಿರಳ. 'ಕುಕವಿನಿಂದೆ'ಯಂತೂ ಇಲ್ಲವೇ ಇಲ್ಲ. ಕನ್ನಡ ಕಾವ್ಯ ಪರಂಪರೆಯಲ್ಲಿ ಕಾವ್ಯಭಾಗದ ಚರ್ಚೆಯಂಬಂತಿರುವ ಹಲವು ತೆರನಾದ ನಾಂದಿ ಪದ್ಯಗಳು ಸಂಸ್ಕೃತ ಭಾಷೆಯಲ್ಲಿ ಇಲ್ಲದಿರುವುದರಿಂದ ನಾಂದಿ ಪದ್ಯಗಳು ಕನ್ನಡ ಕಾವ್ಯಗಳಲ್ಲೆ ವಿಶೇಷವಾಗಿ ಬಂಧಿವೆ. ಸಂಸ್ಕೃತದ ಮಹಾಕವಿಗಳು ತಮ್ಮ ಕಾವ್ಯಗಳಲ್ಲಿ

ಕೇವಲ ಒಂದೊಂದು ನಾಂದಿಪದ್ಯಗಳನ್ನು ಮಾತ್ರ ರಚಿಸಿರುವುದು ಕಂಡುಬರುತ್ತದೆ. ಇವುಗಳಿಂದ ಪ್ರಭಾವಿತರಾದ ಕನ್ನಡ ಕವಿಗಳು ತಮ್ಮ ಕಾವ್ಯಗಳಲ್ಲಿ ಹಲವಾರು ಪ್ರಕಾರದ ನಾಂದಿಪದ್ಯಗಳನ್ನು ರಚಿಸಿದರು.

ಹೀಗೆ ಸಂಸ್ಕೃತ ಕವಿಗಳ ನಾಂದಿ ಪದ್ಯಗಳು ಕನ್ನಡ ಕವಿಗಳ ಮೇಲೆ ಪ್ರಭಾವ ಬೀರಿವೆ. ಅದೇ ರೀತಿ ಕನ್ನಡ ಕವಿಗಳ ನಾಂದಿ ಪದ್ಯಗಳು ಸಂಸ್ಕೃತ ಕಾವ್ಯಗಳ ಮೇಲೆಯೂ ಪ್ರಭಾವ ಬೀರಿವೆ. ಇದಕ್ಕೆ ಗಂಗಾಂಬಿಕೆಯ ಮಧುರಾ ವಿಜಯಂ ಕಾವ್ಯ ಉತ್ತಮ ನಿದರ್ಶನವಾಗಿದೆ. ಮಧುರಾ ವಿಜಯಂ ಕಾವ್ಯದಲ್ಲಿ ಕನ್ನಡ ಕಾವ್ಯಗಳ ನಾಂದಿಭಾಗದಲ್ಲಿ ಬರುವ ಎಲ್ಲ ಗುಣಲಕ್ಷಣಗಳು ಬರುತ್ತವೆ. ಹಾಗಾಗಿ 'ನಾಂದಿ' ಎನ್ನುವ ಪರಂಪರೆಯು ಕನ್ನಡ ಸಂಸ್ಕೃತ ಕಾವ್ಯಗಳ ಮಟ್ಟಿಗೆ ಏಕಮುಖವಾಗಿಲ್ಲ ಎಂದು ಹೇಳಬಹುದು.

**ಅಡಿಟಿಪ್ಪಣಿಗಳು**

೧. ಶಿವರುದ್ರಪ್ಪ ಜಿ.ಎಸ್., **ಕನ್ನಡ ಕಾವ್ಯತತ್ವ ಚಿಂತನೆ–ಕನ್ನಡ ಕವಿಗಳ ಕಾವ್ಯ ಕಲ್ಪನೆ,** ಪು.೧೨೩

೨. ಮಹದೇವಯ್ಯ ಬಿ.ಎಸ್., **ಸಂಸ್ಕೃತ ಕಾವ್ಯಗಳಲ್ಲಿ ನಾಟಕೀಯತೆ,** ಪು.೨೬

೩. ಬಸವಪ್ಪಶಾಸ್ತ್ರಿ, **ಕರ್ನಾಟಕ ಶಾಕುಂತಲ ನಾಟಕಂ,** ಪು.೨೮

೪. ಕುಶಾಲಪ್ಪಗೌಡ ಕೆ., **ಮಧುರಾ ವಿಜಯಂ,** ಪು.೪೩

ಅಧ್ಯಾಯ ಹತ್ತು

# ಸಮಾರೋಪ

ಪ್ರಸ್ತುತ ಪ್ರಬಂಧದಲ್ಲಿ ಚರ್ಚಿಸಿದ ವಿಷಯಗಳ ಹಿನ್ನೆಲೆಯಲ್ಲಿ ಒಟ್ಟಾರೆ ಕಂಡುಕೊಂಡ ವಿಚಾರಗಳನ್ನು ಅಥವಾ ಪ್ರಬಂಧದ ಪ್ರತಿಪಾದನೆಯನ್ನು ಸಾರರೂಪದಲ್ಲಿ ಸಂಗ್ರಹಿಸಿ ವಿವರಿಸಲಾಗಿದೆ.

ಕನ್ನಡ ಸಾಹಿತ್ಯ ಪ್ರಾದೇಶಿಕವಾಗಿ ತನ್ನ ಭಾಷೆಯ ಸತ್ವವನ್ನು ಮೈಗೂಡಿಸಿಕೊಂಡು ಜೊತೆಗೆ ಇತರ ಭಾಷಾ ಸತ್ವಗಳನ್ನು ಮೇಳೈಸಿಕೊಂಡು ಬೆಳೆದಿದೆ. ಕನ್ನಡ ಭಾಷೆಯ ಮೇಲೆ ಬೇರೆ ಬೇರೆ ಭಾಷೆಗಳ ಪ್ರಭಾವ ಸಾಕಷ್ಟಿದೆ. ಅದರಲ್ಲೂ ಸಂಸ್ಕೃತ ಭಾಷಾ ಪ್ರಭಾವ ಕನ್ನಡ ಕವಿಗಳ ಮೇಲೆ ಹೆಚ್ಚಾಗಿದೆ. ಕನ್ನಡ ಸಾಹಿತ್ಯ ಆರಂಭವಾಗುವ ವೇಳೆಗೆ ಸಂಸ್ಕೃತ ಸಾಹಿತ್ಯದಲ್ಲಿ, ಸಾಹಿತ್ಯ ರಚನೆ ಕಡಿಮೆಯಾಗಿತ್ತು. ಆದರೆ ಸಂಸ್ಕೃತ ಸಾಹಿತ್ಯದಲ್ಲಿ ಹಲವು ಶ್ರೇಷ್ಠ ಕವಿಗಳು, ಅವರ ಕಾವ್ಯಗಳು ಪ್ರಸಿದ್ಧವಾಗಿ ಕನ್ನಡ ಕವಿಗಳನ್ನು ಅಯಸ್ಕಾಂತದಂತೆ ಸೆಳೆದಿದ್ದವು. ಸಂಸ್ಕೃತದ ಕಾವ್ಯಗಳ ಗುಣಲಕ್ಷಣಗಳನ್ನು ಕುರಿತು ನಡೆಸಿದ ಚರ್ಚೆ ಕನ್ನಡ ಕವಿಗಳ ಹಿನ್ನೆಲೆಗೆ ದೊರಕಿತ್ತು. ಸಂಸ್ಕೃತ ಕಾವ್ಯಗಳು ಕನ್ನಡ ಕವಿಗಳಿಗೆ ಇಷ್ಟವಾಗಿದ್ದವು. ಮಹಾಕವಿಗಳಾದ ವ್ಯಾಸರು ಮತ್ತು ವಾಲ್ಮೀಕಿ ಮಹರ್ಷಿಗಳ ಕಾವ್ಯ ವಸ್ತುವನ್ನು ತಮ್ಮ ಕಾವ್ಯ ವಸ್ತುವನ್ನಾಗಿಸಿಕೊಂಡ ಕನ್ನಡದ ಹಲವಾರು ಕವಿಗಳು ಹೊಸತೆನಿಸುವ ಹಾಗೂ ಮೂಲಕಾವ್ಯವನ್ನು ಅನುಸರಿಸಿಯೂ ವ್ಯತ್ಯಾಸವೆನಿಸುವ ಕೃತಿ ರಚನೆ ಮಾಡಿ ಜನಪ್ರಿಯರಾದರ. ಸಂಸ್ಕೃತದ ಸಿರಿಯಿಂದ ಕನ್ನಡ ಕವಿಗಳು ಆಕರ್ಷಿತರಾದರೂ, ಕನ್ನಡತನವನ್ನೆ ಮರೆದರು.

ಕನ್ನಡ ಕಾವ್ಯದ ಆರಂಭದ ಕವಿಗಳು ಜೈನರು, ನಂತರ ಶೈವರು, ತದನಂತರ ವೈಷ್ಣವ ಕವಿಗಳು ತಮ್ಮ ಕಾವ್ಯಗಳಲ್ಲಿ ವಿಶಿಷ್ಟ ಪ್ರಯೋಗಗಳನ್ನು ನಡೆಸಿದರು. ಜೈನರು

ಲೌಕಿಕ ಆಗಮಿಕ ಕಾವ್ಯ ಪರಂಪರೆಯನ್ನು ಶೈವರು ವಚನ, ಪುರಾಣ ಶತಕ ಇತ್ಯಾದಿ ಪ್ರಕಾರಗಳನ್ನು, ವೈಷ್ಣವರು ಕೀರ್ತನೆ ಅಥವಾ ಸ್ತುತಿ ಪದ್ಯಗಳನ್ನು ದೇವರಸ್ತುತಿಯ ರೂಪದಲ್ಲಿ ಬಳಕೆಗೆ ತಂದರು. ಇದರಿಂದ ಕನ್ನಡ ಸಾಹಿತ್ಯ ಹಾಗೂ ಭಾಷೆ ಸಮೃದ್ಧವಾಗಿ ಬೆಳೆಯಲು ಕಾರಣವಾಯಿತು.

ಒಂದು ಕಾವ್ಯ ರಚನೆಯಾಗಬೇಕಾದರೆ ಕಾವ್ಯದಲ್ಲಿ ಅಷ್ಟಾದಶ ವರ್ಣನೆಗಳಿರಬೇಕು ಹಾಗೂ ನವರಸಗಳಿರಬೇಕು. ಅಂದಾಗ ಮಾತ್ರ ಕಾವ್ಯ ಯಶಸ್ವಿಯಾಗುವುದು. ಸಂಸ್ಕೃತ ಕವಿಗಳಿಗಿಂತ ಭಿನ್ನವಾಗಿ ಕಾವ್ಯ ಎಂದರೇನು? ಕಾವ್ಯದ ಆಕರ ಪರಿಕರಗಳೇನು? ರಸ ಎಂದರೇನು? ಧ್ವನಿ ಎಂದರೇನು? ಔಚಿತ್ಯ ಎಂದರೇನು? ಕಾವ್ಯ ಪ್ರಯೋಜನ ಇತ್ಯಾದಿ ಅಂಶಗಳನ್ನು ಕುರಿತು ಚರ್ಚಿಸಿದ್ದಾರೆ.

ಪೀಠಿಕಾ ಪದ್ಯಗಳಲ್ಲಿ ಪ್ರಾಚೀನ ಕನ್ನಡ ಕವಿಗಳು ತಮಗಿಂತ ಪೂರ್ವದ ಕವಿಗಳ ಬಗ್ಗೆ ಮಾಡಿರುವ ಸ್ಮರಣೆ ಹಾಗೂ ಅವರ ಕೃತಿಗಳ ಬಗ್ಗೆ ತೋರುವ ಪ್ರತಿಕ್ರಿಯೆಗಳು, ಪ್ರಾಚೀನ ಕಾವ್ಯದ ಗುಣ-ಲಕ್ಷಣ, ವಸ್ತು ವಿಶೇಷಗಳನ್ನು ಗುರುತಿಸಿ ಆ ಎಲ್ಲಾ ಗುಣಗಳು ನಮ್ಮ ಕೃತಿಯಲ್ಲಿಯೂ ಬರಲಿ ಎಂದು ಹೇಳುವ ಕಾವ್ಯ ಆಶಯಗಳು ಅಭಿವ್ಯಕ್ತಗೊಂಡಿವೆ. ಜೊತೆಗೆ ಇಷ್ಟದೇವತೆ, ಇತರ ದೇವತೆ ಕುಕವಿನಿಂದೆ, ಸತ್ಕವಿ ಪ್ರಶಂಸೆ, ಸ್ವಪ್ರಶಂಸೆ, ಸ್ವಕಾವ್ಯ ಪ್ರಶಂಸೆಯ ನೆಪದಲ್ಲಿ ಅಂದಂದಿನ ಸಮಕಾಲೀನ ಬರಹಗಳ ಬಗ್ಗೆ ಮಾಡುವ ಸಾಹಿತ್ಯಿಕ ಸಂದರ್ಭಗಳಾಗಿದೆ.

ಪ್ರಬಂಧದ ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ವ್ಯಾಪ್ತಿ ಮತ್ತು ಈ ವರೆಗಿನ ಅಧ್ಯಯನವನ್ನು ಕುರಿತು ವಿವರಿಸಲಾಗಿದೆ. ನಾಂದಿ ಪದ್ಯಗಳೆಂದರೆ ಕಾವ್ಯಾರಂಭದ ಪದ್ಯಗಳು ಇವುಗಳ ಬಗ್ಗೆ ಪ್ರತ್ಯೇಕ ಅಧ್ಯಯನಗಳಾಗಿಲ್ಲ. ಟಿ.ಆರ್.ಮಹದೇವಯ್ಯನವರ 'ನಾಂದಿ' ಸಂಕಲನ ಕೃತಿಯನ್ನು ಹೊರತುಪಡಿಸಿದರೆ ಬೇರೆ ಅಧ್ಯಯನಗಳಾಗಿಲ್ಲ. 'ನಾಂದಿ' ಕೃತಿಯಲ್ಲಿ ಕವಿರಾಜ ಮಾರ್ಗದಿಂದ ಮುದ್ದಣನ ಕೃತಿಗಳವರೆಗೆ ಆರಂಭದ ಒಂದೊಂದು ಪದ್ಯಗಳನ್ನು ಕುರಿತು ಸಂಗ್ರಹಿಸಲಾಗಿದೆ. ಪ್ರಸ್ತುತ ಈ ಅಧ್ಯಯನದಲ್ಲಿ ಕವಿರಾಜಮಾರ್ಗದಿಂದ ಮುದ್ದಣನವರೆಗಿನ ಕಾವ್ಯಗಳಲ್ಲಿ ಪ್ರಾರಂಭಿಕ ಪದ್ಯಗಳನ್ನಿರಿಸಿಕೊಂಡು ಅಧ್ಯಯನ ಕೈಗೊಂಡ ವಿಷಯವನ್ನು ವ್ಯಕ್ತಪಡಿಸಲಾಗಿದೆ. ಹಾಗೂ ನಾಂದಿ ಪದ್ಯಗಳನ್ನು ಕುರಿತು ಈವರೆಗೆ ಸಂಸ್ಕೃತದ ಕಾವ್ಯಗಳಲ್ಲಿಲ್ಲದ ಕಾವ್ಯ ಪರಂಪರೆಯ ವಿಶಿಷ್ಟತೆಯನ್ನು ಅಭಿವ್ಯಕ್ತಪಡಿಸಲಾಗಿದೆ.

ಹಾಗೂ ನಾಂದಿಪದ್ಯಗಳನ್ನು ಕುರಿತು ಈವರೆಗೆ ನಡೆದಿರುವ ಅಧ್ಯಯನಗಳನ್ನು ಕುರಿತು ವಿವರಿಸಲಾಗಿದೆ. ನಾಂದಿ ಪದ್ಯಗಳ ಬಗ್ಗೆ ಹಲವು ಸಂಕಲನ ಕೃತಿಗಳು ಪ್ರಕಟವಾಗಿವೆ. ಕಾವ್ಯಸಾರ, ಸೂಕ್ತಿಸುಧಾರ್ಣವ ಇತ್ಯಾದಿ ಕೃತಿಗಳು ಪ್ರಸಿದ್ಧ ಸಂಕಲನ ಕೃತಿಗಳು, ನಾಂದಿ ಪದ್ಯಗಳಿಗೆ ಸಂಬಂಧಿಸಿದಂತೆ ಟಿ.ಆರ್.ಮಹದೇವಯ್ಯನವರ 'ನಾಂದಿ' ಎಂಬ ಸಂಕಲನ ಕೃತಿಯಲ್ಲಿ ಕವಿರಾಜಮಾರ್ಗದಿಂದ ಸುಮಾರು ಹತ್ತೊಂಭತ್ತನೆಯ ಶತಮಾನದವರೆಗಿನ ಕೃತಿಗಳ ಆರಂಭದ ಒಂದೊಂದು ನಾಂದಿ ಪದ್ಯಗಳನ್ನು ಸಂಗ್ರಹಿಸಲಾಗಿದೆ. ಆದರೆ ಈ ಕೃತಿಯು ಅಪೂರ್ಣವಾಗಿದೆ. ನಾಂದಿ ಪದ್ಯಗಳು ಸುದೀರ್ಘವಾಗಿದ್ದು, ಅದರಲ್ಲಿ ಹಲವಾರು ಅಂಶಗಳು ಚರ್ಚೆಯಾಗಿವೆ.

ಜಿ.ಎಸ್.ಶಿವರುದ್ರಪ್ಪನವರ 'ಕನ್ನಡ ಕವಿಗಳ ಕಾವ್ಯ ತತ್ವ ಚಿಂತನೆ' ಎಂಬ ಕೃತಿಯ 'ಕನ್ನಡ ಕವಿಗಳ ಕಾವ್ಯಕಲ್ಪನೆ' ಎಂಬ ಲೇಖನದಲ್ಲಿ ಸಂಸ್ಕೃತ ಕಾವ್ಯಕ್ಕಿಂತ ಭಿನ್ನವಾದ ಕನ್ನಡ ಕಾವ್ಯ ಪರಂಪರೆಯನ್ನು ಕುರಿತು ಚರ್ಚಿಸಲಾಗಿದೆ.

ನಾಂದಿ ಪದ್ಯಗಳಿಗೆ ಸಂಬಂಧಿಸಿದಂತೆ ಇರುವ ಇನ್ನೊಂದು ಕೃತಿಯ ಸಮೀಕ್ಷೆ ಎಂದರೆ, ರಂ.ಶ್ರೀ.ಮುಗಳಿಯವರ 'ಕನ್ನಡ ಸಾಹಿತ್ಯ ವಿಮರ್ಶೆಯ ತಾತ್ವಿಕ ವಿವೇಚನೆ' ಎಂಬ ಕೃತಿ. ಈ ಕೃತಿಯ 'ಕನ್ನಡ ಕಾವ್ಯದಲ್ಲಿ ಸರಸ್ವತಿ ದರ್ಶನ' ಎಂಬ ಲೇಖನದಲ್ಲಿ ಬರುವ ಮಾರ್ಗಕಾವ್ಯದಲ್ಲಿ ಸರಸ್ವತಿ ದರ್ಶನ, ದೇಸಿ ಕಾವ್ಯದಲ್ಲಿ ಸರಸ್ವತಿ ಹೇಗೆ ಅನಾವರಣ ಗೊಂಡಿದ್ದಾಳೆಂಬುದನ್ನು ಚರ್ಚಿಸಲಾಗಿದೆ. ಇವುಗಳನ್ನು ಹೊರತುಪಡಿಸಿ ಪ್ರತ್ಯೇಕವಾದ ಅಧ್ಯಯನಗಳಾಗಿಲ್ಲ ಎಂಬುದನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಪ್ರಬಂಧದ ಎರಡನೇ ಅಧ್ಯಾಯದಲ್ಲಿ ನಾಂದಿ ಪದ್ಯಗಳ ಗುಣಲಕ್ಷಣಗಳನ್ನು ಕುರಿತು ಚರ್ಚಿಸಲಾಗಿದೆ. ಕವಿತಾ ರಹಸ್ಯ ಎಂದರೇನು? ಸತ್ಕವಿ ಎಂದರೆ ಯಾರು? ಲಲಿತ ಪದ ಎಂದರೇನು? ಕವಿಯಲ್ಲಿರುವ ಸಹಜ ಗುಣ ಎಂಥದು, ಮೃದುನುಡಿ ಕಾವ್ಯಕ್ಕೆ ಎಷ್ಟು ಅವಶ್ಯಕ, ಕವಿಯಲ್ಲಿ ಪ್ರಸನ್ನ ಕವಿತಾ ಗುಣ ಇತ್ಯಾದಿ ವಿಷಯಗಳನ್ನು ಕುರಿತು ಚರ್ಚಿಸಲಾಗಿದೆ. ಹಾಗೂ ನಾಂದಿ ಪದ್ಯ ಎಂದರೇನು? ನಾಂದಿ ಪದ್ಯಗಳ ವಿಶಿಷ್ಟತೆಯನ್ನು ವಿವರಿಸಲಾಗಿದೆ.

ಅಧ್ಯಾಯ ಮೂರನೇ ನಾಂದಿ ಪದ್ಯಗಳಲ್ಲಿ ವ್ಯಕ್ತವಾಗುವ ಕವಿಕಾವ್ಯ ಪರಂಪರೆಗೆ ಸಂಬಂಧಿಸಿದಂತೆ ಕವಿಗಳು ಮಾಡುವ ಪೂರ್ವಕವಿ ಸ್ಮರಣೆಯನ್ನು ಪ್ರಸ್ತಾಪ ಮಾಡಲಾಗಿದೆ. ಪೂರ್ವಕವಿಗಳ ಸ್ಮರಣೆಯ ಪ್ರಕ್ರಿಯೆಯು ಪಂಪನಿಂದಲೇ ಪ್ರಾರಂಭವಾಗಿ ಕನ್ನಡ ಕಾವ್ಯಗಳುದ್ದಕ್ಕೂ ಸಾಗಿ ಬಂದಿರುವ ವಿಷಯವೇ ಆಗಿದೆ. ಪಂಪ ವ್ಯಾಸರನ್ನು ನೆನೆಯುತ್ತ

“ವ್ಯಾಸ ಮುನೀಂದ್ರರುಂದ್ರ ವಚದಾಂಮೃತ ವಾರ್ಧಿಯಂ ನೀಸುವೆಂ ಕವಿವ್ಯಾಸನೆಂಬ ಗರ್ವಮೆನಗಿಲ್ಲ” ಎಂಬ ವಾಣಿಯನ್ನು ಗಮನಿಸಿದರೆ ಕನ್ನಡ ಕವಿಗಳು ತಮಗಿಂತ ಮೊದಲು ಕಾವ್ಯ ರಚಿಸಿದ ವ್ಯಾಸ, ವಾಲ್ಮೀಕಿ, ಕಾಳಿದಾಸ, ಬಾಣಭಟ್ಟ ಇತ್ಯಾದಿ ಸಂಸ್ಕೃತ ಕವಿಗಳೊಂದಿಗೆ ಅಸಗ, ಗುಣನಂದ ಗುಣವರ್ಮ ಇತ್ಯಾದಿ ಕನ್ನಡ ಕವಿಗಳನ್ನು ಸ್ಮರಿಸಿದ್ದಾರೆ ಎಂಬ ವಿಷಯವನ್ನು ಚರ್ಚಿಸಲಾಗಿದೆ.

ಪ್ರಬಂಧದ ನಾಲ್ಕನೆಯ ಅಧ್ಯಾಯದಲ್ಲಿ ಪ್ರಾಚೀನ ಕನ್ನಡ ಕವಿಗಳ ದೈವಿಕ ಕಲ್ಪನೆಯನ್ನು ಕುರಿತು ವಿವರಿಸಲಾಗಿದೆ. ನಾಂದಿ ಪದ್ಯಗಳಲ್ಲಿ ಇಷ್ಟ ದೇವತಾ ಹಾಗೂ ಇತರ ದೇವತಾ ಪದ್ಯಗಳಿರುತ್ತವೆ. ಅದರಲ್ಲಿ ಆಶ್ರಯದಾತನ ಸ್ತುತಿ, ಜಿನ ಸ್ತುತಿಗಳು ಇರುತ್ತವೆ. ಜೈನಕವಿಗಳ ಆಗಮಿಕ ಕಾವ್ಯಗಳ ಆರಂಭದಲ್ಲಿ ಜಿನಸ್ತುತಿಗಳು ನಂತರದಲ್ಲಿ ಸಿದ್ಧರ, ಯಕ್ಷರ ಆಚಾರ್ಯರ ಸ್ತುತಿಗಳಿರುತ್ತವೆ. ಲೌಕಿಕ ಕಾವ್ಯಗಳಲ್ಲಿ ಆಶ್ರಯದಾತನ ಸ್ತುತಿಗಳೂ ಕಾವ್ಯಾರಂಭದಲ್ಲಿ ಕಂಡುಬರುತ್ತವೆ ಎಂಬುದಕ್ಕೆ ಪಂಪ, ರನ್ನಾದಿಗಳ ಕಾವ್ಯಗಳನ್ನು ಉದಾಹರಿಸಬಹುದು. ವೀರಶೈವರಲ್ಲಿ ಶಿವನನ್ನು ಸ್ತುತಿಸುವ ಶೈವಾರಾಧನೆಯ ಪದ್ಯಗಳು ಕಂಡುಬರುತ್ತವೆ. ಜೈನರಲ್ಲಿ ಜಿನಸ್ತುತಿಗಳಂತೆ ಶೈವರಲ್ಲಿ ಶಿವ ಸ್ತುತಿಗಳು, ವೈಷ್ಣವರಲ್ಲಿ ವಿಷ್ಣು ಸ್ತುತಿಗಳು ಕಂಡುಬರುತ್ತವೆ. ಹಾಗೂ ಆಶ್ರಯದಾತ ದೊರೆಯನ್ನು ತಮ್ಮ ಆರಾಧ್ಯದೈವದೊಂದಿಗೆ ಸಮೀಕರಿಸಿ ಸ್ತುತಿಸುವ ವಿಶಿಷ್ಟ ಪದ್ಧತಿಯನ್ನು ಕನ್ನಡ ಕವಿಗಳು ಅನುಸರಿಸಿದರು. ಕವಿರಾಜಮಾರ್ಗಕಾರನು ತನ್ನ ದೊರೆಯಾದ ಅಮೋಘವರ್ಷ ನೃಪತುಂಗನನ್ನು ನಾರಾಯಣನೊಂದಿಗೆ ಸಮೀಕರಿಸಿದ್ದಾನೆ. ಪಂಪನೂ ಕೂಡ ಉದಾತ್ತ ನಾರಾಯಣನೆನ್ನುತ್ತಾನೆ. ಹೀಗೆ ನರ–ನಾರಾಯಣರನ್ನು ಏಕಕಾಲಕ್ಕೆ ಸ್ತುತಿಸುವುದರ ಮೂಲಕ ಪ್ರಭುಪ್ರಶಂಸೆ ಹಾಗೂ ದೇವತಾ ಸ್ತುತಿಗಳನ್ನು ಏಕಕಾಲಕ್ಕೆ ಸಾಧಿಸಿದ್ದಾರೆ. ಇದೊಂಧು ಕನ್ನಡ ಕವಿಗಳು ಕಂಡುಕೊಂಡ ವಿಶೇಷ ಕಾವ್ಯರಚನಾ ಶೈಲಿಯಾಗಿದೆ. ಕವಿಗಳು ಇತರ ದೇವತಾ ಸ್ತುತಿಗಳಲಿ ಸರಸ್ವತಿಯನ್ನು ಹೆಚ್ಚಾಗಿ ಸ್ತುತಿಸಿದ್ದಾರೆ. ಕವಿರಾಜಮಾರ್ಗಕಾರನು ‘ಶ್ರೀವಿಶದವರ್ಣೆ ಎಂದು, ಪಂಪನು ಪರಮಜಿನೇಂದ್ರವಾಣಿಯೇ ಸರಸ್ವತಿ’ ಎಂದು ಸ್ತುತಿಸಿರುವ ವಿಚಾರಗಳು ವ್ಯಕ್ತವಾಗಿವೆ.

ಐದನೆಯ ಅಧ್ಯಾಯವು ಕರ್ನಾಟಕ ಹಾಗೂ ಕನ್ನಡದ ಚರಿತ್ರೆ ನೆಲ–ಜಲ–ಸಂಸ್ಕೃತಿ, ತಿರುಳ್ಗನ್ನಡ ಸೀಮೆ ಕವಿಗಳು ಮಾಡಿದ ನಾಡಿನ ವರ್ಣನೆ ಕನ್ನಡಿಗರ ಸ್ವಭಾವ, ಕನ್ನಡಿಗರ ಗುಣ ಔದಾರ್ಯ, ಸ್ನೇಹಪರತೆ ಇತ್ಯಾದಿಗಳ ಜೊತೆಗೆ ಕನ್ನಡಿಗರು ‘ಕುರಿತೋದದೆಯಂ ಕಾವ್ಯಪ್ರಯೋಗ ಪರಿಣತಮತಿಗಳಾದ ನಾಡ ಜನರ ಕಾವ್ಯಪ್ರಭುತ್ವವನ್ನು ತೆರೆದಿಟ್ಟ ಕವಿರಾಜ

ಮಾರ್ಗಕಾರ ಕನ್ನಡಮೆನಿಪ್ಪಾ ನಾಡು ಚಲ್ವಾಯ್ತು' ಎಂದು ಹೇಳುವುದರ ಮೂಲಕ ಕನ್ನಡ ನಾಡಿನ ಪ್ರಾಕೃತಿಕ ಸೊಬಗನ್ನು ತೆರೆದಿಟ್ಟ ಆಂಡಯ್ಯ ನಾಡಪ್ರೇಮವನ್ನು ಕಾವ್ಯಮುಖೇನ ವ್ಯಕ್ತಪಡಿಸಿದ್ದಾರೆ. 'ಆರಂಕುಶ ಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ' ಎಂಬ ಪಂಪನ ಮಾತುಗಳಲ್ಲಿ ದೇಶಭಕ್ತಿಯ ಪರಾಕಾಷ್ಠತೆ ತುಂಬಿಕೊಂಡಿದೆ. ಅರಿಕೇಸರಿ ಎಂಬ ಯುದ್ಧಮಲ್ಲನಿಗೆ ಸಂಬಂಧಿಸಿದ ಚಾರಿತ್ರಿಕ ವಿವರಗಳು ಪಂಪನ ಕಾವ್ಯದಿಂದಲೇ ಲಭ್ಯವಾಗಿವೆ. ಹಾಗೂ ಕಾವ್ಯ ಚರಿತ್ರೆಯನ್ನು ರೂಪಿಸುತ್ತದೆ. ಇತಿಹಾಸಕ್ಕೆ ಸಂಬಂಧಿಸಿದಂತೆ ಇರುವ ದಾಖಲೆಗಳೇ ವಿರಳ ಕವಿಕೃತಿಗಳೇ ದಾಖಲೆಗಳಾಗಿ ಉಳಿಯುತ್ತವೆ ಎಂಬ ವಿಚಾರಗಳನ್ನು ಚರ್ಚಿಸಲಾಗಿದೆ.

ಪ್ರಬಂಧದ ಆರನೆಯ ಅಧ್ಯಾಯದಲ್ಲಿ ನಾಂದಿ ಪದ್ಯಗಳಲ್ಲಿ ವ್ಯಕ್ತವಾಗುವ ಕಾವ್ಯ ಮೀಮಾಂಸೆಯನ್ನು ಕುರಿತು ವಿವರಿಸಲಾಗಿದೆ. ಪಂಪ, ರನ್ನಾದಿಗಳ ಕಾವ್ಯಗಳಲ್ಲಿ ಅಭಿವ್ಯಕ್ತಗೊಳ್ಳುವ ಕಾವ್ಯ ಲಕ್ಷಣ, ಕಾವ್ಯ ಪ್ರಯೋಜನಗಳು ಭಾರತೀಯ ಅಥವಾ ಸಂಸ್ಕೃತ ಕಾವ್ಯಗಳಿಗಿಂತ ಹೇಗೆ ಭಿನ್ನವಾಗಿದೆ ಎಂಬುದನ್ನು ವಿವರಿಸಲಾಗಿದೆ. ಕವಿರಾಜಮಾರ್ಗದಿಂದಲೇ ಕನ್ನಡ ಕಾವ್ಯ ಮೀಮಾಂಸೆ ಪ್ರಾರಂಭವಾಗಿದೆ. ಆದರೆ ನಮಗೆ ಅದರ ಅರಿವಿಲ್ಲ. ಕನ್ನಡದ ಕಾವ್ಯಗಳಲ್ಲಿ ಕಾವ್ಯ ಮೀಮಾಂಸೆ ದೊರಕಿದರೂ ನಾವು ಅಧ್ಯಯನ ಮಾಡಿರುವುದು ಕೇವಲ ಭಾರತೀಯ ಕಾವ್ಯಮೀಮಾಂಸೆ(ಸಂಸ್ಕೃತ ಕಾವ್ಯಮೀಮಾಂಸೆ) ನಮ್ಮದೇ ಆದ ಕನ್ನಡ ಕಾವ್ಯಮೀಮಾಂಸೆಯೊಂದು ನಮಗಿದೆ ಎಂಬ ಅರಿವಿಲ್ಲದಂತಿರುವ ಸ್ಥಿತಿ ನಮ್ಮದಾಗಿದೆ. ನಾವು ಕನ್ನಡ ನಾಡಿನಲ್ಲಿದ್ದು, ಕನ್ನಡ ಸಾಹಿತ್ಯವನ್ನು ಅಧ್ಯಯನ ಮಾಡುತ್ತಿದ್ದರು. ಸಂಸ್ಕೃತತನ ನಮ್ಮನ್ನು ಇನ್ನೂ ಬಿಟ್ಟಿಲ್ಲವೆಂಬ ವಿಚಾರಗಳು ವ್ಯಕ್ತವಾಗಿದೆ.

ಪ್ರಬಂಧದ ಏಳನೆಯ ಅಧ್ಯಾಯದಲ್ಲಿ ನಾಂದಿ ಪದ್ಯಗಳಲ್ಲಿ ವ್ಯಕ್ತವಾಗುವ ಕುಕವಿನಿಂದೆಯನ್ನು ಕುರಿತು ವಿವರಸಲಾಗಿದೆ. ಕನ್ನಡ ಕಾವ್ಯಗಳಲ್ಲಿ ಕುಕವಿನಿಂದೆ ಸುದೀರ್ಘವಾಗಿ ಬಂದಿದ್ದು, ತಾನು ಬರೆದ ಕಾವ್ಯ ಉತ್ತಮವಿಲ್ಲವೆಂದು ಯಾವ ಕವಿ ತಾನೆ ಹೇಳಿಕೊಂಡಾನು, ಸುಕವಿಗಳು ಬರೆದ ಕಾವ್ಯಗಳನ್ನು ತೆಗಳುವ ಕವಿಗಳೆಲ್ಲ ಕುಕವಿಗಳೇ ಆಗಿ ಪರಿಣಮಿಸಿದರೆ ಅಚ್ಚರಿಯೇನಿಲ್ಲ. ಕಾವ್ಯ ಸಾಮರ್ಥ್ಯವಿಲ್ಲದ ಅಕವಿಗಳನ್ನು ಹಾಗೂ ಕೆಟ್ಟ ಕಾವ್ಯವನ್ನು ಬರೆದ ಕುಕವಿಗಳನ್ನು ನಿಂದಿಸುವ ಒಂದು ಪರಂಪರೆಯೇ ಅಂದು ಬೆಳೆದು ಬಂದಿತ್ತೆಂದು ಕಂಡುಬರುತ್ತದೆ. ಇದೂ ಕೂಡ ಕನ್ನಡ ಕಾವ್ಯದ ಒಂದು ಲಕ್ಷಣವಾಗಿಯೇ ಪರಿಣಮಿಸಿತ್ತು. ಕುಕವಿ ನಿಂದೆಯ ಪದ್ಯಗಳು ಕನ್ನಡ ಕಾವ್ಯವಲ್ಲದೆ ಬೇರೆ ಭಾಷೆಯ ಕಾವ್ಯಗಳಲ್ಲಿ ದೊರೆಯಲು ಸಾಧ್ಯವಿಲ್ಲ. ಪೂರ್ವದ ಸಂಸ್ಕೃತ ಭಾಷೆಯಲ್ಲೂ ಕುಕವಿನಿಂದೆ ಇಲ್ಲವೆಂದು ವ್ಯಕ್ತಪಡಿಸಲಾಗಿದೆ.

ಪ್ರಬಂಧದ ಎಂಟನೆಯ ಅಧ್ಯಾಯವು ನಾಂದಿ ಪದ್ಯಗಳ ವೈಶಿಷ್ಟ್ಯವನ್ನು ಕುರಿತು ವಿವರಿಸುತ್ತದೆ. ಪ್ರಾಚೀನ ಕನ್ನಡ ಕಾವ್ಯದ ಜೈನ ಕವಿಗಳಲ್ಲಿ ಮಾತ್ರ ಕಂಡುಬರುವ ಶ್ರೀಕಾರವನ್ನು ಕುರಿತು ಚರ್ಚಿಸಲಾಗಿದೆ. ಜಿನಸೇನಾಚಾರ್ಯರ ಪೂರ್ವ ಪುರಾಣದಲ್ಲಿ ಈ 'ಶ್ರೀ'ಕಾರದ ಪ್ರಯೋಗ ಕಂಡುಬಂದಿದೆ. ಪಂಪ ಕವಿ ತನ್ನ ಆದಿಪುರಾಣದಲ್ಲಿ ಬಳಸಿದ ನಂತರ ಜೈನಕವಿಗಳ ಕಾವ್ಯಗಳಲ್ಲಿ ಶ್ರೀಕಾರದ ಬಳಕೆ ಮುಂದುವರಿಯಿತು. ಹಾಗಾಗಿ ಶ್ರೀಕಾರದ ಪ್ರಯೋಗ ಜೈನರ ವಿಶೇಷವಾಗಿದೆ ಎಂಬುದನ್ನು ವಿವರಿಸಲಾಗಿದೆ.

ಒಂಭತ್ತನೆಯ ಅಧ್ಯಾಯವು ಸಂಸ್ಕೃತ ಮತ್ತು ಕನ್ನಡ ಕಾವ್ಯಗಳ ನಾಂದಿ ಪದ್ಯಗಳ ತೌಲನಿಕ ಅಧ್ಯಯನವನ್ನು ಒಳಗೊಂಡಿದೆ. ಸಂಸ್ಕೃತ ಭಾಷಾ ಸಾಹಿತ್ಯ ಪರಂಪರೆಗಿಂತ ಕನ್ನಡ ಕಾವ್ಯದ ನಾಂದಿ ಪದ್ಯಗಳು ಹೇಗೆ ವ್ಯತ್ಯಾಸವನ್ನು ಹೊಂದಿವೆ ಎಂಬ ವಿಷಯ ಕುರಿತು ವಿವರಿಸಲಾಗಿದೆ.

ಕೊನೆಯ ಅಥವಾ ಹತ್ತನೆಯ ಅಧ್ಯಾಯದಲ್ಲಿ ಒಟ್ಟಾರೆ ಎಲ್ಲಾ ಅಧ್ಯಾಯಗಳಲ್ಲಿರುವ ವಿಷಯಗಳನ್ನು ಸಾರರೂಪದಲ್ಲಿ ವಿವರಿಸಿ ಸಮಾರೋಪವನ್ನು ಮಾಡಲಾಗಿದೆ.

ಒಟ್ಟಾರೆ ಅಧ್ಯಯನಕ್ಕೆ ಮಿತಿಯೇ ಇಲ್ಲವೆಂಬಂತೆ ನಾಂದಿ ಪದ್ಯಗಳು ಬೆಳೆದಿವೆ. ಕನ್ನಡ ಕಾವ್ಯಗಳಲ್ಲಿ ಸಂಸ್ಕೃತ ಕಾವ್ಯಗಳಿಗಿಂತ ವಿಶಿಷ್ಟವಾದ ಪ್ರಾರ್ಥನಾ ಪದ್ಯಗಳು ಪೀಠಿಕಾ ಪ್ರಕರಣದಲ್ಲಿ ಕಂಡುಬರುತ್ತವೆ. ಈ ಪ್ರಾರ್ಥನೆಗಳು ಕಥಾ ಭಾಗವನ್ನು ಹೊರತುಪಡಿಸಿ ಬೇರೆಯೇ ಎಂಬಂತೆ ಕಂಡುಬರುವವು. ನಾಟಕಾರಂಭದಲ್ಲಿ ಕೇವಲ ಒಂದು ನಾಂದಿ ಪದ್ಯವನ್ನು ಹಾಡಿ ನಾಟಕವನ್ನು ಆರಂಭಿಸಿದರೇ ಕಾವ್ಯಾರಂಭದಲ್ಲಿ ಹಲವು ತೆರನಾದ ನಾಂದಿ ಪದ್ಯಗಳನ್ನು ಕವಿಗಳು ಪ್ರಯೋಗಿಸಿದ್ದಾರೆ. ಕವಿರಾಜ ಮಾರ್ಗದಿಂದ ಮುದ್ದಣನ ಕಾವ್ಯ ಗಳವರೆಗೆ ಮಾತ್ರವಲ್ಲದೆ ಆಧುನಿಕ ಕಾವ್ಯಗಳಲ್ಲೂ ವ್ಯಕ್ತವಾಗುವ ಪ್ರಾರ್ಥನಾ ಪದ್ಯಗಳನ್ನು ಅಧ್ಯಯನ ಮಾಡುವ ಸಾಧ್ಯತೆಗಳಿವೆ. ನಾಂದಿ ಪದ್ಯಗಳು ಚರಿತ್ರೆಯ ದೃಷ್ಟಿಯಿಂದ ವಿಶಿಷ್ಟವಾದವುಗಳು. ಆಳರಸರ ಐತಿಹಾಸಿಕ ದಾಖಲೆಗಳನ್ನು ತಿಳಿಸುವಲ್ಲಿ ಕವಿಗಳು ಕಾವ್ಯಾರಂಬದ ಪದ್ಯಗಳಲ್ಲಿ ಮಾಡಿರುವ ಕಾವ್ಯಮೀಮಾಂಸೆಯಿಂದ ಕನ್ನಡ ಕಾವ್ಯಮೀಮಾಂಸೆಯನ್ನು ರೂಪಿಸಬಹುದು. ಹಾಗೂ ಕವಿಗಳ ಕಾಲ, ದೇಶ ಚರಿತ್ರೆಯನ್ನು ತಿಳಿಯುವ ಸಾಧ್ಯತೆಗಳಿವೆ. ಒಟ್ಟಾರೆ ಕನ್ನಡ ಸಾಹಿತ್ಯ ಪರಂಪರೆಗೆ ಪೀಠಿಕಾ ಪದ್ಯಗಳು ವಿಶಿಷ್ಟ ಕಾಣಿಕೆ ಎನ್ನಬಹುದು.

೧

# ಆಯ್ದ ನಾಂದಿಪದ್ಯಗಳು

**ಪೂರ್ವ ಕವಿಸ್ಮರಣೆ**

ನೆಗಟ್ದುದು ರಾಮಾಯಣಮುಂ
ನೆಗಟ್ದುದು ಭಾರತಮುಮಾ ಮಹಾಕವಿಗಳಿನಾ
ನೆಗಟ್ದರ್ ವ್ಯಾಸರ್ ವಾಲ್ಮೀ
ಕಿಗಳೆನೆ ನೆಗಟ್ದುಭಯ ಕವಿಗಳೆಮಗಭೀವಂದ್ಯರ್

**ಸಾಹಸಭೀಮವಿಜಯ(೧.೮)**

ಮೃದು ಪದ್ಯ ರಚನೆಯೊಳ್ ಕಾ
ಳಿದಾಸಮಂ ಗದ್ಯ ರಚನೆಯೊಳ್ ಬಾಣನುಮಂ
ಕದ ಕವಿಗಳೆನಿಸಿ ನೆಗಟ್ಗೆ
ಮದಱುಂ ಸತ್ಕವಿಗಳಿರ್ವರೆಮಗಭಿವಂದ್ಯರ್

**ಸಾಹಸಭೀಮ ವಿಜಯ(೧.೯)**

**ಇಷ್ಟದೇವತಾ ಸ್ತುತಿ**

ಶ್ರೀ ಪತಿಗೆ ಸೊಬಗನುಡುಪತಿಗೆ ಶಾಂತಿಯನು ವಾ
ಣೀ ಪತಿಗೆ ಚಾತುರ್ಯಮಂ ದಿವಸ್ಪತಿಗೆ ಪ್ರ
ತಾಪಮಂ ಸುರಪತಿಗೆ ಭೋಗಮಂ ರತಿಪತಿಗೆ ಮೂಲೋಕವಾವರಿಸುವ
ರೂಪಂ ಸರಿತ್ಪತಿಗೆ ಗಂಭೀರತೆಯನು ಸ್ವಾ

ಹಾಪತಿಗೆ ತೇಜಮಂ ಕೊಟ್ಟ ಗುರುಮೂರ್ತಿ ಪಂ
ಪಾಪತಿ ವಿರೂಪಾಕ್ಷನೆಮಗಿಷ್ಟಸಿದ್ದಿಯಂ ಮಾಳ್ಕೆ ಸಂತೋಷದಿಂದ

ಹರಿಶ್ಚಂದ್ರ ಕಾವ್ಯ(೧.೧)

## ಇತರ ದೇವತಾ ಸ್ತುತಿ

ಶ್ರೀ ವಿಶದ ವರ್ಣಮಧುರಾ
ರಾವೋಚಿತೆ ಚತುರರುಚಿರ ಪದರಚನೆ ಚಿರಂ
ದೇವಿ ಸರಸ್ವತಿ ಹಂಸೀ
ಭಾವದೆ ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್

ಕವಿರಾಜಮಾರ್ಗ(೧.೩)

ಪರಮ ಜೀನೇಂದ್ರವಾಣಿಯೇ ಸರಸ್ವತಿ ಬೇಱದು ಪೆಣ್ಣರೂಪಮಂ
ಧರಿಯಿಸಿ ನಿಂದುದಲ್ತದುವೆ ಭಾವಿಸಿಯೋದುವಕೇಳ್ವ ಪೂಜಿಪಾ
ದರಿಸುವ ಭವ್ಯ ಕೋಟಿಗೆ ನಿರಂತರ ಸೌಖ್ಯ ಮನೀವುದಾನದ
ರ್ಕೆರೆದಪೆನಾ ಸರಸ್ವತಿಯೆ ಮಾಟ್ಕೆಮಗಿಲ್ಲಿಯೆ ವಾಗ್ವಿಳಸಮಂ

ಆದಿಪುರಾಣಂ(೧.೯)

ಗಜಮುಖನೆ ಮೆರೆವೇಕದಂತನೆ
ನಿಜಗುಣಾನ್ವಿತ ಪರಶುದಾರನೆ
ರಜತಗಿರಿಗೊಡೆಯನ ಕುಮಾರನೆ ವಿದ್ಯಾವಾರಿಧಿಯೇ
ಅಜನು ಹರಿ ರುದ್ರಾದಿಗಳು ನೆರೆ
ಭಜಿಸುತಿಹರನವರತ ನಿನ್ನನು
ತ್ರಿಜಗವಂದಿತ ಗಣಪ ಮಾಳ್ಪುದು ಮತಿಗೆ ಮಂಗಳವ

ಕರ್ಣಾಟ ಭಾರತ ಕಥಾಮಂಜರಿ(೧.೪)

## ಕನ್ನಡ ನಾಡಿನ ವಿಸ್ತಾರ

ಕಾವೇರಿಯಿಂದಮಾ ಗೋ
ದಾವರಿ ವರಮಿರ್ಪ ನಾಡದಾ ಕನ್ನಡದೊಳ್

ಭಾವಿಸಿದ ಜನಪದಂ ವಸು

ಧಾವಳಯ ವಿಲೀನ ವಿಶದ ವಿಷಯ ವಿಶೇಷಂ

ಕವಿರಾಜಮಾರ್ಗ(೧.೩೬)

**ಅಚ್ಚಗನ್ನಡ ಪ್ರದೇಶಗಳು**

ಅದುಜೊಳಗಂ ಕಿಸುವೊಟಿಲಾ

ವಿದಿತ ಮಹಾಕೋಪಣ ನಗರದಾ ಪುಲಿಗೆಜೆಯಾ

ಸದಭಿಸ್ತುತಮಪ್ಪೊಂದಕುಂ

ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್

ಕವಿರಾಜಮಾರ್ಗ(೧.೩೭)

ಯುದ್ದಮಲ್ಲನ ವಿವರ

ಶ್ರೀ ಮಚ್ಚಳುಕ್ಯ ವಂಶ

ವ್ಯೋಮಾಮೃತ ಕಿರಣನೆನಿಪ ಕಾಂತಿಯನೊಳಕೊಂ

ಡೀ ಮಹಿಯೊಳಾತ್ಮ ವಂಶ ಶಿ

ಖಾಮಣಿ ಜನಮೆಸೆಯೆ ಯುದ್ಧಮಲ್ಲಂ ನೆಗಟ್ಟಂ

ಪಂಪಭಾರತ(೧.೧೫)

ಕನ್ನಡಿಗರ ಸ್ವಭಾವ ಚಿತ್ರಣ

ಪದನಱಿದು ನುಡಿಯಲು ನುಡಿ

ದುದನಱಿದಾರಯಲು ಮಾರ್ಪರಾ ನಾಡವರ್ಗಳ್

ಚದುರರ್ ನಿಜದಿಂ ಕುಱಿತೋ

ದದೆಯಂ ಕಾವ್ಯ ಪ್ರಯೋಗ ಪರಿಣತಮತಿಗಳ್

ಕವಿರಾಜಮಾರ್ಗ(೧.೩೮)

ಕನ್ನಡ ಕಾವ್ಯ ಮೀಮಾಂಸೆ

ನರಲೋಕ ಚಂದ್ರ ಮತದಿಂ

ಪರಮಾಲಂಕಾರಮುಂ ಶರೀರಮುಮೆಂದಿಂ

ತೆರಡಕ್ಕುಂ ಭೇದಂ ಬಹು

ಪರಿಕರಮಾ ಕಾವ್ಯವಸ್ತು ಪುರುಷಂಗೆಂದುಂ

ಕವಿರಾಜಮಾರ್ಗ(೧.೨೩)

ಅವಜೊಳ್ ಶರೀರಮೆಂಬುದು
ಕವಿ ಪ್ರಧಾನ ಪ್ರಯೋಗ ಪದ ಪದ್ಧತಿಯೊಳ್
ದ್ವಿವಿಧ ಮೆನಿಕ್ಕುಮದತಿಶಯ
ಧವಳೋಕ್ತಕ್ರಮದೆ ಗದ್ಯಪದ್ಯಾಖ್ಯಾತಂ

ಕವಿರಾಜಮಾರ್ಗ(೧.೨೪)

## ಗದ್ಯಕಾವ್ಯ

ಪದಪಾದ ವಿಯುತ ನಿಯಮಾ
ಸ್ಪದ ಮಲ್ಲದಳಂ ಕೃತಂ ಕ್ರಿಯಾಕಾರಕದೊಳ್
ಪುದಿದರ್ಥ ವ್ಯಕ್ತಿಯನೀ
ವುದು ಗದ್ಯಮನೇಕ ರೂಪಬೇದ ವಿವಿಕ್ತಂ

ಕವಿರಾಮಾರ್ಗ(೧.೨೫)

## ಪದ್ಯಕಾವ್ಯ

ಪದ್ಯಂ ಸಮಸ್ತ ಜನತಾ
ಹೃದ್ಯಂ ಪದ ವಿದಿತ ಪಾದನಿಯಮ ನಿವೇದ್ಯಂ
ವಿದ್ಯಾಪಾರ ಸರಾಯಣ
ಮಾದ್ಯಂ ಸದ್ವೃತ್ತಿ ವೃತ್ತಜಾತ್ಯಾಯತ್ತಂ

ಕವಿರಾಜಮಾರ್ಗ(೧.೩೦)

ಕುಕವಿ ನಿಂದೆ
ಕವಿತಾ ರಹಸ್ಯಮಂ ಸ
ತ್ಕವಿಯಜೆಗುಮನೇಡ ಮೂಕನೊಡಂ ಜಡನೆಂ
ಬವನಜೆಗುಮೆ ವಿಟನಜೆಗುಂ
ಕುವಿಟಂ ಸ್ತ್ರಿರತರಹಸ್ಯದೊಳಗಜೆದಪನೇ

ಆದಿಪುರಾಣ(೧.೨೦)

ಲಲಿತ ಪದಂ ಪ್ರಸನ್ನ ಕವಿತಾಗುಣಮಿಲ್ಲದೆ ಪೂಣ್ದು ಪೇಟ್ದಬೇ
ಳ್ಗಳ ಕೃತಿಬಂಧ ಮುಂಬರೆ (ಪ)ಕಾಜಿರ ಕೈಗಳ ಕೇಡು ನುಣ್ದನ

ಪ್ಪಳಕದ ಕೇಡು ಪೇಟಿಸಿದೊರ್ಥದ ಕೇಡೆನೆ ಪೇಟ್ಟುಬೀಗಿ ಪೊ
ಟ್ಟಳಿಸಿ ನೆಗಟ್ತೆಗಾಟಿಸುವ ದುಷ್ಕವಿಯು ಕವಿಯಂಬ ಲೆಕ್ಕವೇ?

ವಿಕ್ರಮಾರ್ಜುನ ವಿಜಯಂ(೧.೧೨)

ಮಂಡೂಕಂ ಶರನಿಧಿಯಂ
ಕಂಡರಿಯದೆ ಪಳಿಗುಮಬ್ಧಿಗದು ಭಂಗಮೇಪೇಟ್
ಖಾಡಿಸೆ ಕುಕವಿ ಸಮೂಹಂ
ಪಂಡಿತರಪ್ಪವರ್ಗೆ ಭಂಗಮಕ್ಕುಮೆ ಜಗದೊಳ್

ಧರ್ಮಾಂಮೃತ(೧.೪೪)

ಚೋರ ನಿಂದಿಸಿ ಶಶಿಯ ಬೈದಡೆ
ಕ್ಷೀರವನು ಕ್ಷಯರೋಗಿ ಹಳಿದರೆ
ವಾರಣಾಸಿಯ ಹೆಳವ ನಿಂದಿಸಿ ನಕ್ಕರೇನಹುದು
ಭಾರತದ ಕಥನ ಪ್ರಸಂಗವ
ಕ್ರೂರ ಕರ್ಮಿಗಳೆತ್ತ ಬಲ್ಲರು
ಘೋರ ರೌರವವನ್ನು ಕೆಡಿಸುಗು ಕೇಟ್ಟಿಸಜ್ಜನರ

ಕುಮಾರವ್ಯಾಸ ಭಾರತ(೧.೨೨)

ನಿಂದಿಸುವರ್ ದುರ್ಜನರೆಂ
ಬೊಂದು ಭಯಂಬೆತ್ತು ಸುಕವಿ ರಚಿಸನೆ ಕೃತಿಯಂ
ಮಂದೇಹರ ಭಯದಿಂದರ
ವಿಂದಸಖಂ ನಿಜಮಯೂಖಮಂ ಪಸರಿಸನೇ

ರಾಜಶೇಖರ ವಿಳಾಸ(೧.೧೫)

ಒಳಗಂಪನೊಲ್ಲದೆ ತಳ್ಳುವುದೆ ದುರ್ಗಂಧ
ಕೆಳಸುವ ನೊಣದಂತೆ ಗುಣವ
ಇಳಿಕೆಯ್ದು ದೋಷಕೆರಗುವ ದುರ್ಜನರಡಿ
ದಳಿರ್ಗಳಿಗಾನೆಱಗುವೆನು

ರಾಮನಾಥ ಚರಿತಂ(೧.೫೩)

ನೋಡಲು ಹಸ್ತವಿಲ್ಲದ ಗೀಜಗ ಸಲೆ
ಗೂಡ ಕಟ್ಟಿದಡಚ್ಚಳಿಕೆಯ
ಕೋಡಗ ಕಂಡು ಸೈರಿಸದೆ ವಿನಾಶವ
ಮಾಡಲದೇನು ಕೇಡುಗರು

ಮೋಹನ ತರಂಗಿಣಿ(೧.೨೩)

ಪೆಱರ ನುಡಿ ಪೆಱರ ಮಾರ್ಗಂ
ಪೆಱರರ್ಥಂ ಪೆಱರ ದೇಸಿ ಪೆಱರೋಜೆಯನಲ್
ಪೆಱರ ಬಟೆಸಂದು ತನ್ನಂ
ಮೆಱೆವಂ ಕವಿಯಲ್ಲ ಮಾಟಕಾಱರಚೋಹಂ

ಮಲ್ಲಿನಾಥಪುರಾಣಂ (೧.೩೨)

ಅಱಿಯದೆ ಪದವಿನ್ಯಾಸಮ
ನಱಿಯದೆ ಸ್ವಾರಸ್ಯಮಂ ವರಪ್ರತಿಭೆಯ ಗು
ಣ್ದಱಿಯದೆ ತಾಮುಂ ಕೆಮ್ಮಗೆ
ಡುಱಿಕೆಂಬುವು ಕುಕವಿ ಕೂಪ ಮಂಡೂಕಂಗಳ್

ಅನಂತನಾಥ ಪುರಾಣ(೧.೪೨)

ಆನುಂ ಬುದರೊಡನೆ ನೃಪಾ
ಸ್ಥಾನದೊಳಿರ್ದಪ್ಪೆನೆಂದು ಕುಕವಿ ಕದಂಬ
ಬಾನುದ್ದಮಪ್ಪುದೇಕು
ದ್ಯಾನದೊಳೊಡನಿರವೆ ಕಾಗೆಯುಂ ಕೋಗಿಲೆಯುಂ

ಲೀಲಾವತಿ(೧.೨೬)

ಎರಡು

## ಗ್ರಂಥಋಣ


೧. ಅನಂತರಂಗಾಚಾರ್ ಎನ್.(ಸಂ), **ಕರ್ಣಾಟಕ ಕಾದಂಬರಿ,** ಉಷಾ ಸಾಹಿತ್ಯ ಮಾಲೆ, ಮೈಸೂರು. ೧೯೮೭

೨. ಕಲಬುರ್ಗಿ ಎಂ.ಎಂ., **ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩

೩. ಕುವೆಂಪು ಮತ್ತು ಮಾಸ್ತಿ(ಸಂ), ಕರ್ಣಾಟ ಭಾರತ ಕಥಾಮಂಜರಿ, ಮೈಸೂರು ವಿಶ್ವವಿದ್ಯಾಲಯ, ೧೯೮೮

೪. ಕುಮಾರ ವಾಲ್ಮೀಕಿ, ತೊರವೆ ರಾಮಾಯಣ ೧೯೮೪

೫. ಕುಕ್ಕಿಲ ಕೃಷ್ಣಭಟ್ಟ(ಸಂ), **ಛಂದೋಂಬುದಿ.** ೧೯೮೦

೬. ಚಂದ್ರಮೌಳಿ ಎಸ್. **ನಾಯ್ಕರ್, ಮೇಘದೂತಮ್**(**ವಿರಹಿಯ ಸಂದೇಶ**), ಮೇದಾ ಪಬ್ಲಿಶರ್ಸ್, ಕಲ್ಯಾಣನಗರ, ಧಾರವಾಡ, ೨೦೦೦

೭. ಜವರೇಗೌಡ ದೇ.(ಸಂ), **ನಳಚರಿತ್ರೆ,** ೧೯೮೬

೮. ಜವರೇಗೌಡ ದೇ.(ಸಂ), **ಕಬ್ಬಿಗರ ಕಾವಂ,** ಶೃಂಗಾರ ಪ್ರಕಾಶನ ಸಾಹಿತ್ಯ ಸಿರಿಮಾಲೆ, ಚಿಕ್ಕನಾಯಕನಹಳ್ಳಿ, ೧೯೭೫.

೯. ತಿಮ್ಮಣ್ಣ ಕವಿ, **ಕರ್ಣಾಟ ಕೃಷ್ಣರಾಯ ಭಾರತ,** ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು, ೧೯೮೪

೧೦. ದಂಡಿ, ಕಾವ್ಯಾದರ್ಶನ, (ಅನು) **ಕೆ.ವಿ.ಸುಬ್ಬಣ್ಣ, ನೀನಾಸಂ,** ರಂಗ ಶಿಕ್ಷಣ ಕೇಂದ್ರ, ಹೆಗ್ಗೋಡು, ೧೯೫೮

೧೨. ದೇವಿರಪ್ಪ ಎಚ್.(ಸಂ), **ರಾಮನಾಥ ಚರಿತಂ**

೧೩. ದೇವುಡು ನರಸಿಂಹಶಾಸ್ತ್ರಿ(ಸಂ), **ಲಕ್ಷ್ಮೀಶನ ಜೈಮಿನಿ ಭಾರತ,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೬೮

೧೪. ದೇವಿರಪ್ಪ ಎಚ್. ಮತ್ತು ಪದ್ಮನಾಭಶರ್ಮ ಎಂ.ಸಿ.(ಸಂ), **ಅನಂತನಾಥ ಪುರಾಣ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

೧೫. ನರಸಿಂಹಗೌಡ(ಸಂ), **ಸಾಳ್ವಕವಿ ವಿರಚಿತ ರಸರತ್ನಾಕರ,** ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ೧೯೭೩.

೧೬. ನರಸಿಂಹಾಚಾರ್ ಎಸ್.ಜಿ.(ಸಂ), **ಆದಿಪುರಾಣಂ,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೫

೧೭. ನಾಗವರ್ಮ, ಕರ್ನಾಟಕ ಕಾದಂಬರಿ(ಅನು) **ನಾರಾಯಣಶಾಸ್ತ್ರಿ ಹವೆ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೮. ಪಾಟೀಲ ಎಸ್.ವಿ., **ನಯಸೇನ ಸಂಪುಟ, ಧರ್ಮಾಂಮೃತ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೯

೧೯. ಪೊನ್ನಕವಿ, **ಶಾಂತಿಪುರಾಣಂ**

೨೦. ಪಂಪ ಆದಿಪುರಾಣ(ಸಂ), **ನರಸಿಂಹಶಾಸ್ತ್ರಿ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೧. ಪಂಚಮುಖಿ ಆರ್.ಎಸ್., **ಕವಿ ಜಿಹ್ವಾಬಂಧನ,** ಕನ್ನಡ ಸಂಶೋಧನ ಸಂಸ್ಥೆ ಧಾರವಾಡ, ೧೯೫೦.

೨೨. ಬಸವಪ್ಪ ಶಾಸ್ತ್ರಿ, **ಕರ್ಣಾಟಕ ಶಾಕುಂತಲ ನಾಟಕಂ,** ಮೈಸೂರು ಶ್ರೀಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ೧೯೫೯.

೨೩. ಬಸವರಾಜು ಎಲ್., **ಸರಳ ಹರಿಶ್ಚಂದ್ರ ಚಾರಿತ್ರ್ಯ,** ಸಿ.ವಿ.ಜಿ ಪ್ರಕಾಶನ, ಬೆಂಗಳೂರು

೨೪. ಬಸವಾರಾಧ್ಯ ಮತ್ತು ಬಸಪ್ಪ ಪಂ.ಎಸ್.(ಸಂ), **ಹರಿಶ್ಚಂದ್ರ ಕಾವ್ಯ,** ಸುಮುಖ ಪ್ರಕಾಶನ, ಬೆಂಗಳೂರು, ೧೯೮೮

೨೫. ಬಸವಾರಾಧ್ಯ(ಸಂ), **ಧರ್ಮನಾಥ ಪುರಾಣ**

೨೬. ಬಸವರಾಜು ಎಲ್.(ಸಂ), **ಆದಿಪುರಾಣ ಕಥಾಮೃತ,**

೨೭. ಬಸವನಾಳ ಶಿ.ಶಿ.(ಸಂ), **ಶಬರ ಶಂಕರ ವಿಳಾಸಂ,** ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ ಧಾರವಾಡ, ೧೯೫೨

೨೮. ಬಿ.ಎಂ.ಶ್ರೀ(ಸಂ), **ಕರ್ಣಾಟಕ ಕಾದಂಬರಿ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೯

೨೯. ಬಿ.ಎಂ.ಶ್ರೀ(ಸಂ), **ಪಂಪ ರಾಮಾಯಣ ಸಂಗ್ರಹ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೪೭

೩೦. ಭವಭೂತಿ, ಉತ್ತರ ರಾಮಚರಿತೆ(ಅನು) ಸಿ.ಪಿ.ಕೆ, **ವಾಗ್ದೇವಿ ಪುಸ್ತಕಗಳು,** ನಂ.೬೭, ಬಿ.ದೇವರಾಜ ಅರಸ ರಸ್ತೆ, ಮೈಸೂರು, ೧೯೮೩

೩೧. ಮಹದೇವಯ್ಯ, ಟಿ.ಆರ್., **ನಾಂದಿ,** ಶ್ರೀ ಮೀರಾ ಪ್ರಿಂಟರ್ಸ್, ಮೈಸೂರು, ೧೯೯೮

೩೨. ಮಹದೇವಯ್ಯ, ಬಿ.ಎಸ್., **ಸಂಸ್ಕೃತ ಕಾವ್ಯಗಳಲ್ಲಿ ನಾಟಕೀಯತೆ,** ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ೨೦೦೧

೩೩. ಮಾಲವಿಕಾಗ್ನಿ ಮಿತ್ರಮ್, ಮೈಸೂರು ವಿಶ್ವವಿದ್ಯಾಲಯ, ೧೯೮೫.

೩೪. ಮಿರ್ಜಿ ಅಣ್ಣಾರಾಯ, **ರವಿಷೇಣ ರಾಮಾಯಣ,** ಶಾಂತಿ ಸೇವಾ ಸದನ ಸೇಡಬಾಳ, ೧೯೬೮.

೩೫. ಮುಗಳಿ ರಂ.ಶ್ರೀ., **ಕನ್ನಡ ಸಾಹಿತ್ಯ ವಿಮರ್ಶೆಯ ತಾತ್ವಿಕ ವಿವೇಚನೆ,** ಮೂರ್ತಿ, ಡಿ.ವಿ.ಕೆ., ಕೃಷ್ಣಮೂರ್ತಿ ಪುರಂ, ಮೈಸೂರು, ೧೯೭೧.

೩೬. **ರಾಘವಾಂಕನ ಸಿದ್ಧರಾಮ ಚಾರಿತ್ರ್ಯ**(ಅನು) ರಾಮರಾವ್ ಆರ್.ಎಸ್., ಕನ್ನಡ ಸಾಹಿತ್ಯ ಪರಿಷತ್ತು, ೧೯೭೭.

೩೭. ರಾಮೇಗೌಡ, **ಪ್ರಾಚೀನ ಕಾವ್ಯ ಚಿಂತನ,** ಕರ್ನಾಟಕ ಸಂಘ, ಎಮ್.ಎಲ್.ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ, ಮಂಡ್ಯ, ೨೦೦೭.

೩೮. ರಾಮೇಗೌಡ, **ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು,** ಮೈಸೂರು, ೧೯೯೨.

೩೯. ರಾಜನಾಥ ಡಿಂಡಿಮ, **ಅಚ್ಯುತರಾಯಾಭ್ಯುದಯಂ,**(ಅನು) ಸುಚೇತಾ ನವರತ್ನ, ೨೦೧೦

೪೦. ರುದ್ರಭಟ್ಟ, **ಜಗನ್ನಾಥ ವಿಜಯಂ**(ಸಂ) ವರದಾಚಾರ್ಯ ಎಂ.ಆರ್., ಕನ್ನಡ ಸಾಹಿತ್ಯ ಪರಿಷತ್ತು, ೧೯೯೯

೪೧. ವಶಿಷ್ಟ(ಸಂ), **ಭರತೇಶ ವೈಭವ,** ಚೇತನ ಬುಕ್‌ಹೌಸ್, ಮೈಸೂರು, ೧೯೮೨.

೪೨. ವಾಮನ ಬೇಂದ್ರೆ(ಸಂ), **ಅಂಬಿಕತನಯದತ್ತರ ಮೇಘದೂತ,** ೧೯೯೨.

೪೩. ವಿದ್ಯಾಶಂಖರ ಎಸ್.(ಸಂ), **ಶಾಂತಿ ಪುರಾಣ ಸಂಗ್ರಹ,** ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೧೯೯೧.

೪೪. ವಿಮಲಸೂರಿ, **ಪಉಮಚರಿಯಂ**(ಅನು) ಬ್ಯಾತನಾಳ ಎಸ್.ಎಸ್., ೧೯೭೯.

೪೫. ವಿರೂಪಾಕ್ಷ ಪಂಡಿತ, **ಚನ್ನಬಸವ ಪುರಾಣ,** (ಸಂ)ಚಂದ್ರಶೇಖರ ಎಂ., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೯

೪೬. ವಿರೂಪಾಕ್ಷ ಪಂಡಿತ, **ಚನ್ನಬಸವ ಪುರಾಣ,** ಲಿಂಗಾಯತ ಅಭಿವೃದ್ಧಿ ಸಂಸ್ಥೆ, ಧಾರವಾಡ, ೧೯೭೯.

೪೭. ವಿರೂಪಾಕ್ಷ ಪಂಡಿತ, **ಚನ್ನಬಸವ ಪುರಾಣ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೯.

೪೮. ವೆಂಕಟರಾಮಪ್ಪ ಕೆ.(ಸಂ), **ನೇಮಿಚಂದ್ರನ ಲೀಲಾವತಿ,** ೧೯೭೨

೪೯. ಶಾಮರಾವ ತ.ಸು.(ಸಂ), **ಭರತೇಶ ವೈಭವ ಸಂಗ್ರಹ,** ನಿರ್ದೇಶಕರು, ಪ್ರಸಾರಾಂಗ, ಮಾನಸ ಗಂಗೋತ್ರಿ, ಮೈಸೂರು, ೧೯೮೬.

೫೦. ಶಾಮರಾವ ಟಿ.ಎಸ್. ಮತ್ತು ಕೆ.ವಿ.ಪುಟ್ಟಪ್ಪ(ಸಂ), **ಭರತೇಶ ವೈಭವ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೪

೫೧. ಶಾಮಶಾಸ್ತ್ರಿ ಆರ್.(ಸಂ), **ಜಗನ್ನಾಥ ವಿಜಯಂ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೬೯.

೫೨. ರಾಮರಾವ್ ಟಿ.ಎಸ್., ಡಿ.ಎಲ್.ಎನ್.(ಸಂ), **ಸುಕುಮಾರ ಚರಿತಂ,** ಕರ್ನಾಟಕ ಪ್ರಕಾಶನ, ಸಂಘ ಶಿವಮೊಗ್ಗ, ೧೯೬೪

೫೩. ಶಾಂತಿನಾಥ ದಿಬ್ಬದ(ಸಂ), ರಾಮಚಂದ್ರ ಪುರಾಣ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೮೩

೫೪. ಶಿವಕುಮಾರ ಸ್ವಾಮಿ(ಸಂ), **ಕಾಳಿದಾಸನ ವಿಕ್ರಮೋರ್ವಶೀಯ,** ಬೆಂಗಳೂರು ವಿಶ್ವವಿದ್ಯಾಲಯ, ೧೯೮೨.

೫೫. ಶಿವರುದ್ರಪ್ಪ ಜಿ.ಎಸ್., **ಕನ್ನಡ ಕಾವ್ಯತತ್ವ ಚಿಂತನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬

೫೬. ಶೇಷಗಿರಿರಾಯ ಚುರಮುರಿ, **ಶಾಕುಂತಲ ನಾಟಕ,** ಕರ್ನಾಟಕ ನಾಟಕ ಅಕಾಡೆಮಿ, ಬೆಂಗಳೂರು, ೧೯೮೯

೫೭. ಸಣ್ಣಯ್ಯ(ಸಂ), **ವರ್ಧಮಾನ ಚರಿತಂ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೮೬

೫೮. ಸಣ್ಣಯ್ಯ ಬಿ.ಎಸ್.(ಸಂ), **ಜೈಮಿನಿ ಭಾರತ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೩

೫೯. ಸಣ್ಣಯ್ಯ ಬಿ.ಎಸ್.(ಸಂ), **ನೇಮಿನಾಥ ಪುರಾಣಂ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೭.

೬೦. ಸಣ್ಣಯ್ಯ ಬಿ.ಎಸ್.(ಸಂ), **ದೇವರಾಜ ವಿರಚಿತಂ ಸೊಬಗಿನ ಸೋನೆ.**

೬೧. ಸಣ್ಣಯ್ಯ ಬಿ.ಎಸ್.(ಸಂ) **ಹರಿವಂಶಾಭ್ಯುದಯಂ,** ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ವಿಶ್ವವಿದ್ಯಾನಿಲಯ, ಮೈಸೂರು, ೧೯೭೪.

೬೨. ಸಿ.ಪಿ.ಕೆ., **ಕನ್ನಡ ವೇಣಿಸಂಹಾರ,** ತ.ವೆಂ.ಸ್ಮಾರಕ ಗ್ರಂಥಮಾಲೆ, ಕೃಷ್ಣಮೂರ್ತಿ ಪುರಂ, ಮೈಸೂರು, ೧೯೭೬.

೬೩. ಸಿ.ಪಿಕೆ.(ಸಂ), **ಜನ್ನ ಸಂಪುಟ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೬೪. ಸಿ.ಪಿ.ಕೆ(ಅನು) ಕಾಳಿದಾಸನ ಅಬಿಜ್ಞಾನ ಶಾಕುಂತಲ, ಶ್ರೀ ಲಲಿತಾ ಬುಕ್ ಬ್ಯೂರೊ, ಮೈಸೂರು, ೨೦೦೯.

೬೫. ಸೀತಾರಾಮಯ್ಯ ವಿ.(ಸಂ), **ಕವಿರಾಜ ಮಾರ್ಗ,** ಡಿ.ವಿ.ಕೆ.ಮೂರ್ತಿ, ಮೈಸೂರು, ೧೯೭೫

೬೬.ಸೀತಾರಾಮಯ್ಯ ವಿ., **ಕವಿಕಾವ್ಯ ಪರಂಪರೆ,** ವಿ.ಸೀ.ಸಂಸ್ಮರಣ ವೇದಿಕೆ, ಬೆಂಗಳೂರು, ೧೯೮೩.

೬೭. ಸುಬ್ರಹ್ಮಣ್ಯ ಶಾಸ್ತ್ರಿ(ಸಂ), **ಕರ್ನಾಟಕ ಮಾಲವಿಕಾಗ್ನಿ ಮಿತ್ರ ನಾಟಕಂ,** ಕರ್ನಾಟಕ ಸಂಘ ಸೆಂಟ್ರಲ್ ಕಾಲೇಜ, ಬೆಂಗಳೂರು.

೬೮. ಸುಂಕಾಪುರ ಎಂ.ಎಸ್.(ಸಂ), **ಶಬರ ಶಂಕರ ವಿಳಾಸ.**

೬೯. ಸುಂಕಾಪುರ, ಎಂ.ಎಸ್.(ಸಂ), **ನೂತನ ಪುರಾತನರ ರಗಳೆಗಳು,** ಕನ್ನಡ ಅಧ್ಯಯನ ಪೀಠ, ಧಾರವಾಡ, ೧೯೭೬.

೭೦. ಸೂರ್ಯನಾರಾಯಣಸ್ವಾಮಿ(ಸಂ), **ಕನ್ನಡ ಕಾವ್ಯಗಳ ಗೆಜ್ಜೆನಾದ,** ಎಚ್.ಎಸ್.ಗೋವಿಂದಗೌಡ ಹನ್ನಾಳು ಪ್ರಕಾಶನ, ಮೈಸೂರು, ೨೦೦೬

೭೧. ನಂಜುಂಡಾರಾಧ್ಯ, **ಹರಿಹರ ಕವಿಯ ಗಿರಿಜಾ ಕಲ್ಯಾಣ**(ಅನು), ಕನ್ನಡ ಸಾಹಿತ್ಯ ಪರಿಷತ್ತು, ೨೦೦೪

೭೨. ಹಿರೇಮಠ ಆರ್.ಸಿ.(ಸಂ), **ಸೋಮನಾಥ ಚಾರಿತ್ರ್ಯ,** ಕನ್ನಡ ಸಾಹಿತ್ಯ ಪರಿಷತ್ತು,ಬೆಂಗಳೂರು, ೨೦೦೪.

೭೩. ಹಿರೇಮಠ, ಆರ್.ಸಿ(ಸಂ), **ರಾಮಚಂದ್ರಚರಿತ ಪುರಾಣ,** ಭಾರತೀಯ ಜ್ಞಾನಪೀಠ ಪ್ರಕಾಶನ, ಬೆಂಗಳೂರು, ೨೦೦೨.

೭೩. ಹಿರೇಮಠ ಆರ್.ಸಿ. ಮತ್ತು ಸುಂಕಾಪುರ ಎಂ.ಎಸ್.(ಸಂ)., **ರಾಜಶೇಖರ ವಿಳಾಸ.**

೭೪. ಹಿರೇಮಠ ಆರ್.ಸಿ.(ಸಂ)., **ಜೀವಂಧರ ಚರಿತ.**

೭೫. ಹಿರೇಮಠ ಆರ್.ಸಿ.(ಸಂ)., **ನೇಮಿಚಂದ್ರ ಕವಿ ಕೃತ ನೇಮಿನಾಥ ಪುರಾಣ,** ಪ್ರಸಾರಾಂಗ, ಕ.ವಿ.ವಿ. ಧಾರವಾಡ, ೧೯೬೮.

೭೬. ಹಿರೇಮಠ ಆರ್.ಸಿ.(ಸಂ)., **ಬಸವಪುರಾಣ,** ೧೯೭೧.

೭೭. ಹಂಪ ನಾಗರಾಜಯ್ಯ(ಸಂ)., **ರನ್ನ ಸಂಪುಟ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೬.

೭೮. ಹೆಂಡಿ ಬಿ.ಬಿ.(ಸಂ)., **ಬಸವ ಪುರಾಣ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೫

**ಪ್ರಕಟಿತ ಪಿಎಚ್.ಡಿ.ಪ್ರಬಂಧಗಳು**

೧. ಮಂಜುನಾಥ ಎ.ಆರ್., **ಕನ್ನಡದಲ್ಲಿ ಅನುವಾದ ಸಾಹಿತ್ಯ.**

೨. ಸುಚೇತಾ ನವರತ್ನ, **ಕನ್ನಡ ನಾಟಕಗಳ ಅನುವಾದ ಮತ್ತು ರೂಪಾಂತರ ಒಂದು ಅಧ್ಯಯನ,** ೨೦೦೨

